ಯಾವುದಾದರೊಂದು ಸಾಮಾನ್ಯವಾದ ವಿಷಯವನ್ನು ಉಪನ್ಯಸಿಸಿ ವಿಷಯ ವಿಸ್ತಾರದಿಂದ ನಿಮ್ಮನ್ನು ಬೇಸರಗೊಳಿಸುವುದು ನನ್ನ ಉದ್ದೇಶವಲ್ಲ. ಯಾವುದಾದರೂ ಒಂದು ಪ್ರತ್ಯೇಕ ಸಮಸ್ಯೆಯನ್ನು ತೆಗೆದುಕೊಂಡು ಅದನ್ನು ಕುರಿತು ನನ್ನ ಅಭಿಪ್ರಾಯವನ್ನು ಪ್ರಕಟಿಸಿದರೆ ಅದರಿಂದ ನಿಮಗೆ ಲಾಭವುಂಟೆಂದು ಯೋಚಿಸಿ, ಕನ್ನಡ ವಾಙ್ಮಯದಲ್ಲಿ ಮುಖ್ಯವಾದ "ವೀರಶೈವ ಸಾಹಿತ್ಯ" ಎಂಬ ವಿಷಯವಾಗಿ ಪ್ರಸ್ತಾವಿಸಬಯಸುತ್ತೇನೆ. ನಾನು ಹೇಳುವುದೇ ಪ್ರಮಾಣವೆಂದು ನೀವು ನಂಬಬಾರದು. ಅವರಲ್ಲಿ ಲೋಪಗಳೂ, ದೋಷಗಳೂ ಕೂಡ ಇರಬಹುದು. ಅವನ್ನು ತಿಳಿದುಕೊಳ್ಳುವುದಕ್ಕೆ ನನಗಿಂತ ನೀವೇ ಅಧಿಕಾರಿಗಳು. ಆಂಧ್ರಭಾಷೆಯು ನನ್ನ ಅಭಿಮಾನ ಭಾಷೆ. ಆಂಧ್ರಭಾಷಾಚರಿತ್ರೆಯೂ ಅದರಲ್ಲಿರುವ ವಿಜ್ಞಾನವೂ ವಿಶದಪಡುವುದಕ್ಕೆ ಸಾಕಾದಷ್ಟು ಮಾತ್ರ ನನಗೆ ಕನ್ನಡ ಸಾಹಿತ್ಯದೊಡನೆ ಪರಿಚಯವಿದೆ.

ಆಂಧ್ರಭಾಷೆಗೂ, ಕನ್ನಡಕ್ಕೂ, ಆಂಧ್ರ ಸಾಹಿತ್ಯಕ್ಕೂ ಕನ್ನಡ ಸಾರಸ್ವತಕ್ಕೂ ಇರುವ ನಿಕಟಸಂಬಂಧವು ಸಾಮಾನ್ಯವಾದುದಲ್ಲ. ಕನ್ನಡವೂ, ಆಂಧ್ರವೂ ಏಕಮಾತೃಗರ್ಭದಿಂದ ಉತ್ಪತ್ತಿಯಾಗಿರುವ ಭಾಷಾದೇವಿಗಳು. ಕನ್ನಡಕ್ಕೆ ಒಂದು ಪಕ್ಷದಲ್ಲಿ ಆಂಧ್ರವು ಪುತ್ರಿಕೆಯೆಂದು ಹೇಳಿದರೂ ಹೇಳಬಹುದು. ಎರಡರ ನುಡಿಕಾರವೂ ಸಾಹಿತ್ಯ ಮಾರ್ಗಗಳೂ, ಸಾಹಿತ್ಯ ವಿಷಯಗಳೂ, ಸಾಹಿತ್ಯ ಲಕ್ಷಣಗಳೂ ಒಂದೇ. ಕನ್ನಡಿಗರಿಗೂ, ಆಂಧ್ರರಿಗೂ ಇರುವ ಸಂಬಂಧವು ಮತ್ತು ಯಾವ ದ್ರಾವಿಡರಿಗೂ ಇಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ಮುಖ್ಯವಾಗಿ ಈ ಸಂಬಂಧವನ್ನು ವಿಸ್ಪಷ್ಟವಾಗಿ ಕಾಣಬಹುದು. ಎರಡು ವಾಙ್ಮಯಗಳೂ ಒಂದೇ ರೀತಿಯಾಗಿ ಅವತರಿಸಿವೆ; ಒಂದೇ ರೀತಿಯಾಗಿ ಬೆಳೆದಿವೆ; ಒಂದೇ ರೀತಿಯಾಗಿ ಕ್ಷೀಣಿಸಿ ಈ ಕಾಲದಲ್ಲಿ ಪುನರುಜ್ಜೀವಿಸಿರುತ್ತವೆ. ಅಜ್ಞಾತಯುಗ, ಜೈನ ಕಾವ್ಯಯುಗ, ವೀರಶೈವ ಸಾಹಿತ್ಯಯುಗ, ಪೌರಾಣಿಕ ಯುಗ ಎಂದು ಎರಡು ದೇಶಗಳಲ್ಲಿಯೂ ಸಮಕಾಲಗಳಲ್ಲಿ ತೋರಿದ ಈ ಎರಡು ಸಾಹಿತ್ಯಗಳಿಗೂ ಸಾಮಾನ್ಯ ವಿಷಯಗಳು ಅನೇಕವಾಗಿ ಇವೆ. ಅವುಗಳಲ್ಲಿ ವೀರಶೈವ ವಾಙ್ಮಯಾವತಾರವೇ ಈಗ ನನ್ನ ಭಾಷಣೆಗೆ ವಿಷಯ.

ಕನ್ನಡ ಸಾಹಿತ್ಯ ಚರಿತ್ರೆಯಾಗಲಿ, ಆಂಧ್ರ ಸಾಹಿತ್ಯ ಚರಿತ್ರೆಯಾಗಲಿ ಇನ್ನೂ ವಿಸ್ಪಷ್ಟವಾಗಿ ಏರ್ಪಡಲಿಲ್ಲ. ಕೀ. ಶೇ. ಶ್ರೀ. ನರಸಿಂಹಾಚಾ

ರ‍್ಯರವರು ಬರೆದ ಕರ್ಣಾಟಕ ಕವಿಚರಿತೆಯೂ, ವೀರೇಶಲಿಂಗಂ ಅವರುಗಳು ರಚಿಸಿದ "ಆಂಧ್ರ ಕವುಲಚರಿತ್ರವು' ಎಂಬ ಗ್ರಂಥವೂ ಈ ಎರಡು ಸಾಹಿತ್ಯ ಚರಿತ್ರೆಗಳಿಗೂ ಅಂಕುರಾರ್ಪಣಗಳಾಗಿವೆ. ವಾಙ್ಮಯ ಚರಿತ್ರ ರಚನೆಯಲ್ಲಿ ಎರಡು ಗ್ರಂಥಗಳೂ ಪ್ರಥಮ ಪ್ರಯತ್ನಗಳಾಗಿವೆ. ಅವುಗಳಲ್ಲಿ ಆಯಾ ಕವಿಗಳನ್ನು ಕುರಿತ ಕಾಲ ನಿರ್ಣಯವು ಎಷ್ಟೋ ಸಂದೇಹಾಸ್ಪದವಾಗಿದೆ. ಆ ಗ್ರಂಥಗಳ ಪುನರ್ಮುದ್ರಣಗಳಲ್ಲಿಯೂ ಆ ಸಂದೇಹಗಳು ಹಾಗೆಯೇ ನಿಂತಿವೆ. ಶ್ರೀ. ನರಸಿಂಹಾಚಾರ್ಯರು ಕನ್ನಡ ಶಾಸನಗಳಲ್ಲಿ ಕಾಣಬರುವ ಕವಿಗಳನ್ನೆಲ್ಲಾ ಕನ್ನಡ ಕವಿಗಳೆಂದೇ ಊಹಿಸಿದ್ದಾರೆ. ಅವರಲ್ಲಿ ಕೆಲವರು ಮಾತ್ರ ಕನ್ನಡ ಕವಿಗಳಾಗಿರಬಹುದಾದರೂ ಅನೇಕರು ಸಂಸ್ಕೃತ ಕವಿಗಳೇ ಆಗಿದ್ದಾರೆ. ಅಜ್ಞಾತಯುಗದಲ್ಲಿದ್ದ ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಶ್ರೀ ವರ್ಧದೇವ ಶ್ಯಾಮಕುಂದಾಚಾರ್ಯ, ಉದಯ, ನಾಗಾರ್ಜುನ, ದುರ್ವಿನೀತ ಪಂಡಿತ ಚಂದ್ರ, ಲೋಕಪಾಲ, ಶಿವಮಾರ, ಮಂತಾದ ಜೈನಾದಿ ಕವಿಗಳು, ಸಂಸ್ಕೃತ ಪ್ರಾಕೃತಕವಿಗಳೇ ಹೊರತು ಕನ್ನಡ ಕವಿಗಳಲ್ಲವೆಂದು ಹೇಳಬಹುದು. ಕನ್ನಡದಲ್ಲಿ ಪ್ರಥಮ ಗ್ರಂಥವೆಂದು ಹೇಳಲ್ಪಡುವ ಕವಿರಾಜಮಾರ್ಗದ ವಿಷಯದಲ್ಲಿಯೂ ಕಾಲವು ಸರಿಯಾಗಿ ನಿರ್ಣೀತವಾಗಿಲ್ಲ. ಆ ಗ್ರಂಥವನ್ನು ನೃಪತುಂಗನು ಬರೆದನೆಂದು ಹೇಳುತ್ತಾರೆ. ನೃಪತುಂಗನು ರಾಷ್ಟ್ರಕೂಟದ ಅರಸು. ಅವನಿಗೆ ಅತಿಶಯ ಧವಳನೆಂಬ ಬಿರುದು ಉಂಟು. ಕವಿರಾಜಮಾರ್ಗವು "ಅತಿಶಯ ಧವಳೋಕ್ತಕ್ರಮದ" "ಅತಿಶಯಧವಳೋರ್ವೀಶೋದಿತಾಲಂಕೃತಿ" "ಅಗದೆಂದನತಿಶಯಧವಳಂ" "ಅತಿಶಯ ಧವಳಧರಾಧಿಪಮತದಿಂದಂ," ರಚಿಸಲ್ಪಟ್ಟಿದೆ ಎಂದು ಗ್ರಂಥದಲ್ಲಿ ಹೇಳಲ್ಪಟ್ಟಿರುವುದರಿಂದ ಆ ಗ್ರಂಥವು ನೃಪತುಂಗ ರಚಿತವಲ್ಲವೆಂದೂ, ಅವನ ಮತಾನುಸಾರವಾಗಿ ಯಾವನೋ ಈಚೆಯ ಕವಿಯೊಬ್ಬನು ಅದನ್ನು ರಚಿಸಿದನೆಂದೂ ಊಹಿಸಬಹುದಾಗಿದೆ. "ಅತಿಶಯ ಧವಳ" ಎಂಬ ಬಿರುದು ನೃಪತುಂಗನ ತಂದೆಗೂ ಇದೆ. ರಾಷ್ಟ್ರಕೂಟರಾಜರಿಗೆಲ್ಲರಿಗೂ ಆ ಬಿರುದು ಇದೆಯೆಂದು ತಿಳಿಯಬರುತ್ತದೆ. "ನರಲೋಕಚಂದ್ರಮತದಿಂ" "ಕೃತಕೃತ್ಯಮಲ್ಲವಲ್ಲಭಮತದಿಂ," "ಪರಮ ಸರಸ್ವತೀತೀರ್ಥಾವತಾರ ನೃಪತುಂಗ ದೇವಮತದಿಂ" ಎಂದೂ ಆ ಗ್ರಂಥದಲ್ಲಿ ಕೆಲವು ಕಡೆಗಳಲ್ಲಿರುವುದರಿಂದ, ಅದನ್ನು ಯಾವನು ರಚಿಸಿದನೋ ಹೇಳುವುದಕ್ಕೆ ಅವಕಾಶವಿಲ್ಲ. ಹೀಗೆಯೇ ಅನೇಕ ಇತರ ಕನ್ನಡ ಕವಿ

ಗಳ ವಿಷಯದಲ್ಲಿಯೂ ಕಾಲನಿರ್ಣಯ ಸಂದರ್ಭದಲ್ಲಿ ಯಾವ ಹೇತು ಗಳನ್ನು ಕೊಡದೆ ಊಹಿಸಬಹುದಾಗಿದೆ ಎಂದು ಮಾತ್ರ ಹೇಳಿ ಶ್ರೀ ನರ ಸಿಂಹಾಚಾರ್ಯರು ತೃಪ್ತಿಯನ್ನು ಹೊಂದಿದ್ದಾರೆ. ಆದರೂ ಅವರು ಆ ಗ್ರಂಥವನ್ನು ರಚಿಸಿದ ಕಾಲಕ್ಕೆ ಕರ್ನಾಟಕ ಗ್ರಂಥಗಳು ಹೆಚ್ಚಾಗಿ ಮುದ್ರ ಣವಾಗಿರಲಿಲ್ಲವೆಂದೂ, ವಿವಿಧಪ್ರಾಂತಗಳಲ್ಲಿರುವ ಓಲೆಯ ಪುಸ್ತಕಗಳನ್ನು ಹುಡುಕಿಕೊಂಡು ಅವಲೋಕಿಸಿ, ಅವುಗಳಿಂದ ಆಯಾ ಚಾರಿತ್ರಕ ವಿಷ ಯಗಳನ್ನು ಶೋಧಿಸಿ ಸಾಹಿತ್ಯ ಚರಿತ್ರ ಗ್ರಂಥವನ್ನು ಬರೆಯುವುದೆಂದರೇ ಸಾಮಾನ್ಯವಾದ ಕಾರ್ಯವಲ್ಲ. ಅವರು ತಮ್ಮ ಕಾಲದಲ್ಲಿ ಮಾಡಿದ ಕೃಷಿ ಗಾಗಿ ಅವರಿಗೆ ನಾವೆಲ್ಲರೂ ಕೃತಜ್ಞರಾಗಿರಲೇಬೇಕು. ಅವರು ತೋರಿ ಸಿದ ಮಾರ್ಗವನ್ನು ಅನುಸರಿಸಿ ಈಚೆಯ ಕನ್ನಡ ವಿದ್ವಾಂಸರು ಹೆಚ್ಚು ಕೃಷಿಯನ್ನು ಮಾಡದಿರುವುದೇ ವಿಷಾದಕರ ವಿಷಯ. ನನ್ನ ಮಿತ್ರರಾದ ಶ್ರೀ. ಶ್ರೀ. ಟಿ. ಎಸ್. ವೆಂಕಣ್ಣಯ್ಯ, ಶ್ರೀ. ಶ್ರೀ. ನರಸಿಂಹಾಚಾರ್ಯ, ಯಶೋ ವಂತರಾದ ಡಾ॥ ಎ. ವೆಂಕಟಸುಬ್ಬಯ್ಯ, ಮುಂತಾದವರು ಈ ವಿಷ ಯದಲ್ಲಿ ಪ್ರಯತ್ನಗಳನ್ನು ಸಾಗಿಸುತ್ತಿದ್ದರೂ ಅವರ ಕೃಷಿಗಳನ್ನೆಲ್ಲಾ ಏಕ ಮುಖಕ್ಕೆ ತಂದು ಸಫಲವಾಗುವುದಕ್ಕೆ ತಕ್ಕ ಪ್ರಯತ್ನಗಳಿನ್ನೂ ನಡೆದಿಲ್ಲ. ಆಂಧ್ರಭಾಷೆಯಲ್ಲಿಯೂ ಇನ್ನೂ ಹೀಗೆಯೇ ಇದೆ. ಪೂರ್ವಿ ಕರು ನಮಗೆ ಕೊಟ್ಟು ಹೋದ ವಿಜ್ಞಾನದಿಂದಲೇ ನಾವು ತೃಪ್ತಿಹೊಂದಿ ಕುಳಿತುಕೊಳ್ಳಬಾರದು. ಅವರು ಹೇಳಿದ್ದನ್ನು ನೂತನ ಪರಿಶೋಧನಾ ನುಸಾರವಾಗಿ ವಿಮರ್ಶಿಸಿ ಯಾವ ವಿಷಯವನ್ನು ಕುರಿತು ಆದರೂ ನಮ್ಮ ವಿಜ್ಞಾನವನ್ನು ವಿಸ್ತರಿಸಬೇಕಾಗಿದೆ.

ನನ್ನ ಉಪನ್ಯಾಸಕ್ಕಿಂತಲೂ ಉಪೋದ್ಘಾತವೇ ದೀರ್ಘವಾದುದಕ್ಕಾಗಿ ನಿಮ್ಮ ಕ್ಷಮೆಯನ್ನು ಬೇಡುತ್ತೇನೆ. ಈ ಹೊತ್ತಿನ ವಿಷಯ ಕನ್ನಡದ ಲ್ಲಿಯ ''ವೀರಶೈವ ವಾಙ್ಮಯಾವತಾರವೆಂದು ಮೊದಲೇ ಹೇಳಿದ್ದೇನೆ. ವೀರಶೈವವೆಂದರೇನು? ಅದು ಅನಾದಿಯಾಗಿದ್ದ ಮತವೋ? ಈಚಿಗೆ ಅಂದರೆ ಬಸವೇಶ್ವರಾದಿಗಳಿಂದ ಏರ್ಪಟ್ಟದ್ದೋ? ಅದರ ಸ್ವರೂಪವೇನು? ಅದಕ್ಕೂ ಇತರ ಶೈವಸಿದ್ಧಾಂತಗಳಿಗೂ ಇರುವ ಸಂಬಂಧವೇನು? ಅವು ಗಳಿಗಿರುವ ಭೇದವೇನು? ಮುಂತಾದ ಪ್ರಶ್ನೆಗಳಿಗೆ ಸರಿಯಾದ ಪ್ರತ್ಯು ತ್ತರವನ್ನು ತಿಳಿದುಕೊಳ್ಳಬೇಕಾಗಿದೆ. ಶೈವಮತವೇನೋ ಅನಾದಿಯಾ ಗಿದ್ದ ಮತವೇ ಎಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ವೇದಕಾಲಕ್ಕಿಂತಲೂ

ಹಿಂದೆ ಇರುವ ನಾಗರಿಕತೆಯನ್ನು ತೋರಿಸಿ ಇರುತ್ತವೆಂದು ಪರಿಶೋಧಕರು ಹೇಳುತ್ತಿರುವ ಮುಹಂಜೋ, ದರೋ, ಹರಪ್ಪಾ ಸ್ಥಲಗಳಲ್ಲಿ ಕಾಣಬರುತ್ತಿರುವ ಸೈಂಧವ ಶಿಥಿಲಗಳಲ್ಲಿ ಶಿವವಿಗ್ರಹಗಳೂ, ಲಿಂಗಗಳೂ ದೊರೆತಿವೆ. ಋಗ್ವೇದದಲ್ಲಿಯೂ ಯಜುರ್ವೇದದಲ್ಲಿಯೂ ಶಿವನ ಪ್ರಸ್ತಾವನೆ ಇದೆ. ಅಥರ್ವವೇದದಲ್ಲಿ ರುದ್ರಾದಿ ನಾಮಗಳಿಂದ ಶಿವನು ಹೇಳಲ್ಪಟ್ಟಿದ್ದಾನೆ. ಶಿವಪರವಾದ ಉಪನಿಷತ್ತುಗಳಿವೆ. ಶೈವವು ಅನೇಕ ರೂಪಗಳಿಂದ ಮೊಟ್ಟಮೊದಲಿನಿಂದಲೂ ಭಾರತ ದೇಶದ ಎಲ್ಲಾ ಕಡೆಗಳಲ್ಲೂ ವ್ಯಾಪಿಸಿದೆ. ಕಾಶ್ಮೀರದೇಶದ ಆಗಮಿಕ ಶೈವಸಿದ್ಧಾಂತವೂ ತಮಿಳದೇಶದ ಶೈವಸಿದ್ಧಾನ್ತವೂ ಪ್ರಖ್ಯಾತವಾಗಿವೆ.

ಶೈವಮತವು ಶೈವ, ಪಾಶುಪತ, ಸೋಮ, ಲಾಕುಲ, ಎಂಬ ನಾಲ್ಕು ವಿಧವಾಗಿದೆಯೆಂದು ಕೆಲವರು ಹೇಳುತ್ತಾರೆ. ಅವುಗಳಲ್ಲಿ ಶೈವವು, ವಾಮಶೈವ, ದಕ್ಷಿಣ ಶೈವ, ಮಿಶ್ರಶೈವ, ಸಿದ್ಧಾಂತಶೈವ ಎಂಬ ನಾಲ್ಕು ಭೇದಗಳಾಗಿವೆ. ಅಂತೆಯೇ ವಾಮಶೈವದಲ್ಲಿ ಶಕ್ತಿಗೆ ಪ್ರಾಧಾನ್ಯವುಂಟು. ದಕ್ಷಿಣರೂಪವಾದ ಶೈವದಲ್ಲಿ ಭೈರವನು ಪ್ರಧಾನನು. ಸಪ್ತಮಾತೃಕೆಗಳು ಮಿಶ್ರಶೈವದಲ್ಲಿ ಪ್ರಧಾನವಾಗಿವೆ. ಇವು ವೇದಸಮ್ಮತವಾದ ಮತಗಳಲ್ಲವೆಂದೂ ಸಿದ್ಧಾಂತಶೈವವೇ ವೇದಸಮ್ಮತವೆಂದೂ, ಈ ಸಿದ್ಧಾಂತಶೈವವೇ ವೀರಶೈವವೆಂದೂ ವೀರಶೈವಮತಕ್ಕೆ ಪ್ರಮಾಣವೆಂದೂ, ಹೇಳಲ್ಪಡುವ ಶೈವಸಿದ್ಧಾಂತ ಶಿಖಾಮಣಿ ಎಂಬ ಗ್ರಂಥದಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥವು ಈಚೆಯದು. ಇದು ರೇಣುಕಾಗಸ್ತ್ಯ ಸಂವಾದರೂಪದಲ್ಲಿದೆ. ಇದನ್ನು ವೀರಣಾರಾಧ್ಯನ ಪೌತ್ರನೂ, ಸಿದ್ಧಯ್ಯನ ಪುತ್ರನೂ, ಆದ ರೇವಣನೆಂಬವನು ರೇಣುಕಕೃತ ಗ್ರಂಥಕ್ಕೆ ಟೀಕಾರೂಪವಾಗಿ ರಚಿಸಿದ್ದಾನೆ. ಈ ಗ್ರಂಥದಲ್ಲಿ ವೀರಶೈವ ಸಿದ್ಧಾಂತಕ್ಕೆ ಮುಖ್ಯ ಲಕ್ಷಣವಾದ ಷಟ್‌ಸ್ಥಲವಿಚಾರವು ವಿವರಿಸಲ್ಪಟ್ಟಿದೆ. ಈ ಷಟ್‌ಸ್ಥಲವಿಚಾರಕ್ಕೂ ಬಸವೇಶ್ವರನಿಗೆ ಹಿಂದಿರುವ ಗ್ರಂಥಗಳಲ್ಲಿ ಸೂಚಿಸಲ್ಪಟ್ಟ ಷಟ್‌ಸ್ಥಲವಿಷಯಕ್ಕೂ ಬಹಳ ಭೇದವಿದೆ.

ಶ್ರೀಪತಿ ಪಂಡಿತ ರಚಿತವೆಂದು ಶ್ರೀ ಹಯವದನರಾಯರು ಪ್ರಕಟಿಸಿದ ಶ್ರೀಕರ ಭಾಷ್ಯವು ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆಂದು ಅವರು ಹೇಳಿದ್ದಾರೆ. ಇತರರ ಅಭಿಪ್ರಾಯವೂ ಹೀಗೆಯೇ ಇದೆ. ಶ್ರೀಪತಿಪಂಡಿತನು ಹದಿನಾಲ್ಕನೆಯ ಶತಾಬ್ದದ ಅಂತ್ಯಭಾಗದ

ಲ್ಲಿದ್ದವನೆಂದು ರಾಯರು ಹೇಳಿದ್ದಾರೆ. ಈ ನಿರ್ಣಯಕ್ಕೆ ಅವರು ತೋರಿಸಿದ ಆಧಾರಗಳು ಸರಿಯಾಗಿಲ್ಲ. ಪಾಲ್ಕುರಿಕೆ ಸೋಮನಾಥನು ಶ್ರೀಪತಿ ಪಂಡಿತನು ಬಸವೇಶ್ವರನಿಗಿಂತಲೂ ಹಿಂದಿನವನೆಂದು ಹೇಳಿದ್ದಾನೆ. ಶ್ರೀಪತಿ ಪಂಡಿತನು ರಚಿಸಿದ ಶ್ರೀಕರ ಭಾಷ್ಯವು ವಿಶಿಷ್ಟಾದ್ವೈತ, ಅಲ್ಲದೆ ಭೇದಾಭೇದಸಿದ್ಧಾಂತವನ್ನು ಪ್ರತಿಪಾದಿಸುತ್ತಿದೆ. ಸ್ವಲ್ಪಮಟ್ಟಿಗೆ ಇದು ವೀರಶೈವ ಸಿದ್ಧಾಂತವನ್ನೇ ಹೋಲುತ್ತಿದ್ದರೂ ಬಸವನ ನಂತರ ವಿಸ್ತರಿಸಿದ ವೀರಶೈವಸಿದ್ಧಾಂತದಿಂದ ಭೇದಿಸುತ್ತಿದೆ. ಇದರಲ್ಲಿ ಷಟ್‌ಸ್ಥಲಸಿದ್ಧಾಂತವು ವಿಸ್ತಾರವಾಗಿ ಕಾಣುವುದಿಲ್ಲ. ಷಟ್‌ಸ್ಥಲವೆಂಬ ಪದವು ಆ ಗ್ರಂಥದಲ್ಲಿ ಎರಡು ಕಡೆ ಇದ್ದರೂ ಅದರ ಅರ್ಥವು ಬೇರೆಯಾಗಿದೆ. ಶ್ರೀಪತಿ ಹೇಳಿದ ಪ್ರಕಾರ ಸೃಷ್ಟಿ, ಸ್ಥಿತಿ, ಲಯ, ವಾಚಿಕ, ಕಾಯಿಕ, ಮಾನಸಿಕ, ಎಂಬುವವು ಷಟ್‌ಸ್ಥಲಗಳು. ಅರ್ವಾಚೀನ ವೀರಶೈವಮತದಲ್ಲಿ ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಸ್ಥಲ, ಪ್ರಾಣಲಿಂಗಸ್ಥಲ, ಶರಣಸ್ಥಲ, ಐಕ್ಯಸ್ಥಲ, ಎಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿವೆ. ಶ್ರೀಕರ ಭಾಷ್ಯದಲ್ಲಿರುವ ಷಟ್‌ಸ್ಥಲಗಳಿಗೂ ಇವುಗಳಿಗೂ ಸಂಬಂಧವೇನೂ ಇಲ್ಲವೆಂದು ಸುಲಭವಾಗಿಯೇ ತಿಳಿದುಕೊಳ್ಳಬಹುದು. ಆದರೂ ಅರ್ವಾಚೀನ ವೀರಶೈವರು ಸಿದ್ಧಾಂತಭಾಗದಲ್ಲಿ ಶ್ರೀಪತಿ ಹೇಳಿರುವುದನ್ನು ಸ್ವೀಕರಿಸಿ, ಶಿವತ್ವಪ್ರಾಪ್ತಿಗಾಗಿ ಬೇಕಾದ ಸಾಧನ ವಿಧಾನವನ್ನು ವಿಸ್ತರಿಸಿದ್ದಾರೆಂದು ತೋರುತ್ತದೆ. ಈ ಸಾಧನವಿಧಾನದಲ್ಲಿ ಹೇಳಿರುವ ಸ್ಥಲವೇ ಅಲ್ಲದೇ, ಬೇರೆ ವಿಧವಾದ ಸ್ಥಲವು ಕೂಡ ವೀರಶೈವದಲ್ಲಿ ಹೇಳಲ್ಪಟ್ಟಿದೆ. ಸಚ್ಚಿದಾನಂದಾತ್ಮ ಲಕ್ಷಣ ನಿರೂಪಿತ ಬ್ರಹ್ಮವೇ ಸ್ಥಲ. ಈ ಸ್ಥಲದಲ್ಲಿಯೇ ಮಹತ್ತು ಮುಂತಾದ ಇಪ್ಪತ್ತೆಯಿದು ತತ್ತ್ವಗಳೂ ಹುಟ್ಟಿ ಅವರಲ್ಲಿಯೇ ಅಡಗುತ್ತವೆ. ಚರಾಚರ ಜಗತ್ತಿಗೆ ಅದುವೇ ಆಧಾರ; ಅದರಿಂದಲೇ ಅದಕ್ಕೆ ಸ್ಥಲವೆಂದು ಹೆಸರು ಬಂತು. ಶಿವನ ತತ್ತ್ವವು ಅದೇಯಾದುದರಿಂದ ಅದಕ್ಕೆ ಶಕ್ತಿ ಅದೆ. ಈ ಶಕ್ತಿಯು ಲಿಂಗಸ್ಥಲವೆಂದೂ, ಅಂಗಸ್ಥಲವೆಂದೂ, ಎರಡು ವಿಧವಾಗಿದೆ. ಲಿಂಗಸ್ಥಲವಾದ ಶಿವನು ಪೂಜ್ಯನು; ಅಂಗಸ್ಥಲವಾದ ಜೀವನು ಪೂಜಕನು ಅದೇ ರೀತಿಯಿಂದ ಶಕ್ತಿಯು ತಿರುಗಿ ಕಲೆಯೆಂದೂ, ಭಕ್ತಿಯೆಂದೂ ಎರಡು ಭಾಗಗಳಾಗುತ್ತದೆ. ಶಿವನು ಕಲಾತ್ಮಕನು; ಜೀವನು ಭಕ್ತಿಯುಳ್ಳವನು. ಶಕ್ತಿಯು ಕರ್ಮಾಚರಣಕ್ಕೆ ಪ್ರೇರಿಸುತ್ತದೆ.

ಭಕ್ತಿಯು ಮುಕ್ತಿಗೆ ಸಹಾಯವಾಗುತ್ತದೆ. ಶಕ್ತಿಯು ಪರಬ್ರಹ್ಮಾತ್ಮ ಕವಾಗಿರುವುದರಿಂದ ಆರಾಧ್ಯವಾಗುತ್ತದೆ. ಭಕ್ತಿಯಿಂದ ಜೀವನು ಪೂಜ ಕನಾಗುತ್ತಾನೆ. ಲಿಂಗ ಎಂಬುವುದು ಶಿವನೇ ಹೊರತು ಅವನ ಗುರು ತಲ್ಲ. ಲಿಂಗದಲ್ಲಿ ಶಕ್ತಿ ಇರುತ್ತದೆ; ಅಂಗದಲ್ಲಿ ಎಂದರೆ ಜೀವನಲ್ಲಿ ಭಕ್ತಿ ಇರುತ್ತದೆ. ಭಕ್ತಿಯು ಸಂಸಾರದಿಂದ ಜೀವನನ್ನು ಹಿಂದುರು ಗಿಸಿ, ಅಂಗಕ್ಕೆ ಎಂದರೆ ಜೀವನಿಗೆ ಶಿವಸಾಮರಸ್ಯವನ್ನು ಹೊಂದಿಸು ತ್ತದೆ. ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ, ಎಂದು ಲಿಂಗಸ್ಥಲವು ಮೂರು ವಿಧವಾಗಿದೆ. ಈ ಮೂರೂ ಸತ್, ಚಿತ್, ಆನಂದಗಳಿಗೆ ಪ್ರತಿನಿಧಿಗಳು. ಇವು ಪ್ರಯೋಗ, ಮಂತ್ರ ಕ್ರಿಯಾತ್ಮಕಗಳಾಗಿ, ಕಲಾ, ನಾದ, ಬಿಂದುಗಳಾಗುತ್ತವೆ. ಈ ಮೂರು ಲಿಂಗಗಳಲ್ಲಿ ಒಂದೊಂದು ಮತ್ತೆ ಎರಡು ವಿಧಗಳಾಗುತ್ತದೆ. ಭಾವಲಿಂಗವು ಮಹಾಲಿಂಗ ಪ್ರಸಾದ ಲಿಂಗಗಳಾಗಿಯೂ ಪ್ರಾಣಲಿಂಗವು ಚರಲಿಂಗ ಶಿವಲಿಂಗಗಳಾಗಿಯೂ, ಇಷ್ಟಲಿಂಗವು ಗುರುಲಿಂಗ ಆಚಾರಲಿಂಗಗಳಾಗಿಯೂ ಏರ್ಪಡುತ್ತವೆ. ಜೀವನನ್ನು ಶಿವಸಾಮರಸ್ಯಕ್ಕೆ ತೆಗೆದುಕೊಂಡು ಹೋಗುವ ಮಾರ್ಗದಲ್ಲಿ ಮೂರು ಸ್ಥಾನಗಳಿವೆ- ಇವಕ್ಕೆ ಯೋಗಾಂಗ, ಭೋಗಾಂಗ ತ್ಯಾಗಾಂಗ ಗಳೆಂದು ಹೆಸರುಗಳು. ಐಕ್ಯ, ಶರಣಸ್ಥಲಗಳು ಯೋಗಾಂಗದಲ್ಲಿ ಅಂತರ್ಭಾಗಗಳು; ಪ್ರಾಣ ಪ್ರಸಾದ ಸ್ಥಲಗಳೆರಡೂ ಭೋಗಾಂಗದ ವಿಭಾಗಗಳು; ಹಾಗೆಯೇ ತ್ಯಾಗಾಂಗದಲ್ಲಿ ಮಹೇಶ್ವರ, ಭಕ್ತಿಸ್ಥಲಗ ಳಿವೆ.

(ಮುಂದೆ ಸಾಗುವದು)

---

೩೪. ಗುರುವೆಂಬನಂಗವ ಧರಿಸಿದಡೇನು? ಕೈದೀಪಕ್ಕೆ ಮೊತ್ತದ ತಮ ಹರಿದುದುಂಟೇ? ನಿಃಕಳಲಿಂಗವ ಧರಿಸಿದಲ್ಲಿ ಫಲವೇನು? ವೃತ್ತಿಕೆಯ ಬೊಂಬೆಯ ಕೈಯಲ್ಲಿ ನಿಶ್ಚಯದ ಖಂಡೆಯವಿರೆ, ಕುಟ್ಟಬಲ್ಲುದೇ? ವಿಧಾತೃವಿನ ರೂಪು ಲಾಂಛನವ ತೊಟ್ಟು ಬಹು ರೂಪಿಯಾದಲ್ಲಿ ನೆರೆ ಈಶನ ಮುಕ್ತಿಯ ವಿರಕ್ತ ಜಂಗಮನಾಗಬಲ್ಲನೇ? ಇಂತೀ ಮಾತಿನ ಬಳಿಕೆಯ ವೇಷವ ಬಿಟ್ಟು ನಿಜ ತತ್ವದ ಸಾಕಾರವೆಯಾದಡೆ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗವು ತಾನೆ.

---

## ಐಕ್ಯಸ್ಥಲ.

೩೫. ಜ್ಞಾನಾದ್ವೈತದ ಹೆಚ್ಚುಗೆ ಭಾವಾದ್ವೈತಕ್ಕೆ ಸಂಬಂಧವಾಗಿಹುದು. ಭಾವಾದ್ವೈತದ ಹೆಚ್ಚುಗೆ ಕ್ರಿಯಾದ್ವೈತವ ಸಂಬಂಧಿಸಿಕೊಂಡಿಹುದು. ಕ್ರಿಯಾದ್ವೈತದ ಹೆಚ್ಚುಗೆ ಸರ್ವಮಯವಾಗಿ ಘನಲಿಂಗವ ಗರ್ಭೀಕರಿಸಿಕೊಂಡಿಪ್ಪುದು. ಇಂತೀ ಭೇದ. ಕ್ರಿಯಾಜ್ಞಾನಕ್ಕೊಳಗಾಗಿ ಮಥನದಿಂದ ವಹ್ನಿ ಕುರುಹಿಂಗೆ ಬಂದಂತೆ ಕ್ರಿಯಿಂದ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು ಸ್ವಯಂಭುವಾದ.

೩೬. ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪುದು. ಅರಿವ ಮರೆದಲ್ಲಿ ಜ್ಞಾನ ಹೀನವಾಗಿಪ್ಪುದು. ಜ್ಞಾನವ ಮರೆದಲ್ಲಿ ಬೆಳಗಿನ ಕಳೆ ನಷ್ಟವಾಯಿತ್ತು. ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗವು ಅವರಿಗೆ ಮರೆಯಾಗಿ ತೊಲಗಿದ.

೩೭. ಸುಖದುಃಖಾದಿಗಳ ಮೀರುವರ ಎನ್ನವರ ಕಾಣೆ. ಸುಖದುಃಖಾದಿಗಳ ಮೀರುವ ನಿನ್ನವರ ಕಾಣೆ. ಇನ್ನೇನ ಹೇಳುವೆ? ನಡುಹೊಳೆಯಲ್ಲಿ ಹರಿಗೋಲ ಹರಿವಂತೆ ಅಂಬಿಗನ ಕೊರಳ ಸುತ್ತಿ ಬಂದವರೆಲ್ಲರು ಉಭಯವು ಹೊಂದಿದಂತಾಯಿತ್ತು. ನೀ ಎನ್ನ ಬಟ್ಟೆ ನಾ ನಿನ್ನ ಬಟ್ಟೆ ಉಭಯವು ಒಂದೇ ಬಟ್ಟೆಯಾದೆಯಲ್ಲಾ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೇ.

೩೮. ಪರಶಿವ ಮೂರ್ತಿಯು ರೂಪ ತಾಳಿ ಎನ್ನ ಶಿವಭಕ್ತರ ಕುಲಬಳಗಂಗಳ ಪವಿತ್ರವ ಮಾಡಿಹೆನೆಂದು ನೀ ಬಂದು ಅಪವಿತ್ರವ ಮುಟ್ಟಲೇತಕ್ಕೆ ? ನಿನ್ನ ಕೃಪೆ ಎನಗೆ, ಎನ್ನ ಹೃತ್ಕಮಲಮಧ್ಯ ನಿನಗೆ. ಎನಗೂ ನಿನಗೂ ತ್ರಿವಿಧದ ಹಂಗಿಲ್ಲ. ನಾ ನೀನಲ್ಲದೆ ಬೇರೊಂದ ನೆಣಸಿವಡೆ ನೀ ನಾನಲ್ಲದೆ ಬೇರೊಂದು ಮುಟ್ಟಿದಡೆ ನಿನ್ನ ಸತ್ಯಕ್ಕೆ ಎನ್ನ ಭಕ್ತಿಗೆ ಉಭಯಕ್ಕೂ ನೀನೆ ಮುಂಡಿಗೆ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವೇ.

೩೯. ಹೀರಕವನೊಪ್ಪಿಸಿದಂಗೆ ಸುಂಕವ ಬೇಡಲೇತಕ್ಕೆ? ಮೊದಲು ತ್ರಿವಿಧವ ನಿನಗೆಂದು ಕೊಟ್ಟ ಮತ್ತೆ ನೀ ಬೇಡಿದ ಮೇಲೆಡೆ ನೀನೆನಗಿತ್ತ ಮೇಲೆ ಎನ್ನ ನೋಡುವ ಬಿಡು ಮುಡಿಯಾವುದು ನಿನಗೆ ? ಶಿವಲೆಂಕ ಹಾಕಿದ ಮುಂಡಿಗೆಯು ನೀನೆತ್ತಲಮ್ಮದೆ ಎನ್ನ ಕೈಯ್ಯೊಳಗಾದೆಯಲ್ಲಾ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೇ.

೪೦. ಜಲದೊಳಗಣ ಮತ್ಸ್ಯ ಮನದೊಳಗಣ ಮರ್ಕಟ ಆಕಾಶದ ಪಕ್ಷಿ ಇವು ಕೂಡಿ ಮಾತಾಡುವಲ್ಲಿ ಶಬರ ಮತ್ಸ್ಯನ ನೋಡಿ ಜೋಗಿ ವನಚರನ ಕಂಡು ಅಂಟದ ಡೊಂಬಹಕ್ಕಿಯ ಕಂಡು ಇಂತೀಮೂವರ ಹದವ ಕೆಡಿಸಿತ್ತು. ಕಾರಮಳೆ ಸೊನೆ ಎದ್ದು ಸುರಿಯಿತ್ತು. ಇಂತು ಇನ್ನಾರ ಕೇಳುವೆ ? ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ ನೀನೆ ಬಲ್ಲೆ.

ಟೀಕೆಃ — ಜಲವೆಂದೊಡೆ ಸಂಸಾರವಿಷಯ ಜಲಪ್ರವಾಹ. ಅಂತಪ್ಪ ಸಂಸಾರ ವಿಷಯ ಜಲದಲ್ಲಿ ಚರಿಸುತ್ತಿಹನು ಜೀವನೆಂಬುದೀಗ ಜಲ ದೊಳಗಣ ಮತ್ಸ್ಯವೆಂಬ ಶಬ್ದಕ್ಕರ್ಥ. ಷಡಾಧಾರ ಚಕ್ರದ ಐವತ್ತೊಂದು ದಳಂಗಳಲ್ಲಿ ಸಂಕಲ್ಪ ವಿಕಲ್ಪ ಭಾವದಿಂ ಚರಿಸುತ್ತಿಹುದು ಮನಸ್ಸೆಂ ಬುದೀಗ ಮನದೊಳಗಣ ಮರ್ಕಟನೆಂಬ ಶಬ್ದಕ್ಕರ್ಥ. ಆತ್ಮಾಕಾಶಮಧ್ಯ ದಲ್ಲಿ ಸ್ವಲೀಲಾಪರನಾಗಿ ಚರಿಸುತ್ತಿಹುದು ಪರಮಾತ್ಮನೆಂಬುದೀಗ ಆಕಾ ಶದ ಪಕ್ಷಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನು ಮನಸ್ಸು ಪರ ಮಾತ್ಮನು ತಮ್ಮ ತಮ್ಮ ಪ್ರಪಂಚಿನ ವರ್ತನೆಯ ಶಬ್ದ ಜಾಲದೊಳಗೆ ಸಿಲ್ಕಿ ಸಂದಣಿಗೊಳ್ಳುತ್ತಿಹವೆಂಬುದೀಗ ಇವು ಕೂಡಿ ಮಾತಾಡುವಲ್ಲಿ ಎಂಬ ಶಬ್ದಕ್ಕರ್ಥ. ಭಿನ್ನವಿಟ್ಟು ಚರಿಸುತ್ತಿಹ ದ್ವೈತಿಗಳು ಜೀವನ ವರ್ತನೆಯ ಕ್ರಿಯೆಯಿಂದೆ ನಿಲಿಸಬೇಕೆನುತ್ತಿಹರೆಂಬುದೀಗ ಶಬರ ಮತ್ಸ್ಯನ

ನೋಡಿ ಎಂಬ ಶಬ್ದಕ್ಕರ್ಥ. ಲಕ್ಷ್ಯಯೋಗಿಗಳು ಅಂತರ್ಲಕ್ಷ್ಯ ಸಂಧಾನದಿಂದ ಮನೋವರ್ತನೆಯ ಬೇಕೆನ್ನುತ್ತಿಹರೆಂಬುದೀಗ ಜೋಗಿ ವನಚರನ ಕಂಡು ಎಂಬ ಶಬ್ದಕ್ಕರ್ಥ. ಆತ್ಮಜ್ಞಾನದಿಂ ಅದ್ವೈತಿಗಳು ಪರಮಾತ್ಮ ತತ್ವವ ಗ್ರಹಿಸಬೇಕೆನ್ನುತ್ತಿಹರೆಂಬುದೀಗ ಅಂಟದ ಡೊಂಬ ಹಕ್ಕಿಯ ಕಂಡು ಎಂಬ ಶಬ್ದಕ್ಕರ್ಥ. ಅಭ್ರಚ್ಛಾಯೆ ಮಾತ್ರವಾದ ಮಾಯಾಡಂಬರವೆಂಬ ಮೇಘದಲ್ಲಿ ಸಂಸಾರ ವಿಷಯ ರಸವೆಂಬ ವೃಷ್ಟಿ ಸರ್ವಾಂಗದಲ್ಲಿ ಕರೆಯಲು ದ್ವೈತಾದ್ವೈತ ಯೋಗ ಮಾರ್ಗಗಳ ಬಯಕೆ ನಷ್ಟವಾಯಿತ್ತೆಂಬುದೀಗ ಇಂತೀ ಮೂವರ ಹದವ ಕೆಡಿಸಿತ್ತು. ಕಾರಮಳೆ ಸೊನೆ ಎದ್ದು ಸುರಿಯಿತ್ತು ಎಂಬ ಶಬ್ದಕ್ಕರ್ಥ. ತ್ರಿಭಾಂಡಿಗಳು ಶಿವತತ್ವಕ್ಕೆ ಭಿನ್ನವಾಗಿ ಹೋದ ಭೇದವ ಶರಣ ಕಂಡು ಆಶ್ಚರ್ಯಬಡುತ್ತಿರ್ದನೆಂಬುದೀಗ ಇಂತೀ ಇನ್ನಾರ ಕೇಳುವೆ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ ನೀನೆ ಬಲ್ಲೆ ಎಂಬ ಶಬ್ದಕ್ಕರ್ಥ.

---

## ಅಷ್ಟಾವರಣಗಳು.

### ಗುರು

೪೧. ಅಂಗಕ್ಕೆ ಲಿಂಗವಕೊಟ್ಟವ ಆಚಾರ್ಯನಾದ. ಮನಕ್ಕೆ ಅರುಹ ತೋರಿದಾತ ಮೋಕ್ಷಾಚಾರ್ಯನಾದ. ಮೋಕ್ಷ ವಿಮೋಕ್ಷವಾಗಿ, ಉಭಯದ ಗೊತ್ತ ತೋರಿ, ಕಾಯದ ಕರ್ಮವ ಕೆಡಿಸಿ, ಜೀವನ ಭವವ ಛೇದಿಸಿ, ತದ್ರೂಪವ ತೋರಿದಾತ ಜ್ಞಾನಗುರು. ಆತ ಪರಮಪ್ರಕಾಶ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು.

೪೨. ಬಹು ರೂಪಕ್ಕೆ ಭಾಷಾಂಗವಿಲ್ಲದೆ ಮೆಚ್ಚದು ಜನ. ಗುರು ಚರ ರೂಪ ತಾಳಿದಲ್ಲಿ ಗುರುವಿಂಗೆ ಗಂಭೀರತೆ ಚರಕ್ಕೆ ನಿಸ್ಪೃಹತ್ವ, ಇಂತೀ ಉಭಯಮೂರ್ತಿಯಾಪೇಕ್ಷೆ ವಿರಹಿತವಾಗಿ ನಿಂದುದು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವು ತಾನೆ.

---

# ಗುರುಲಿಂಗ.

೪೩. ಇಚ್ಛಾಶಕ್ತಿ ಮರ್ಕಟರೂಪಾದಲ್ಲಿ, ಕ್ರಿಯಾಶಕ್ತಿ ವಿಹಂಗ ರೂಪಾದಲ್ಲಿ, ಜ್ಞಾನಶಕ್ತಿ ಪಿಪೀಲಿಕ ರೂಪಾದಲ್ಲಿ ತ್ರಿವಿಧಮಾರ್ಗ ರೂಪಾಯಿತ್ತು. ಕಾಂಬುದು ಕಾಣಿಸಿಕೊಂಬುದು ಕಂಡಿಹೆನೆಂದು ನಿಶ್ಚಯವಾದಲ್ಲಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು ಮಹದಾಕಾಶದಲ್ಲಿ ವಾಸವಾಗಿರ್ದ.

ಟೀಕು:— ಸುಜ್ಞಾನೋದಯವಾಗಿ ತನ್ನ ನಿಜವನರಿದು ಶಿವಾಪೇಕ್ಷೆಯ ಮುಂದುಗೊಂಡಿರ್ದ ಶಿಷ್ಯಂಗೆ ಶ್ರೀಗುರು ಕರುಣಿಸಿ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗಸಂಬಂಧವ ಮಾಡಿ ಷಡ್ವಿಧ ಭಕ್ತಿವಿಡಿದಾಚರಿಸುವ ಷಟ್‌ಸ್ಥಲ ಮಾರ್ಗವ ತೋರಿದನೆಂಬುದೀಗ ಇಚ್ಛಾಶಕ್ತಿ ಮರ್ಕಟ ರೂಪಾದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಅಭಿನ್ನಕ್ರಿಯಾಚಾರವಿಡಿದು ಚಿತ್ಪಿಂಡ ಜ್ಞಾನ ಸಂಬಂಧವಾಗಿ ತನುಮನ ಪ್ರಾಣೇಂದ್ರಿಯ ಒಳಹೊರಗೆ ಸರ್ವಾಂಗವು ಲಿಂಗದಲ್ಲಿ ನಿರ್ವಯಲ ಸಮಾಧಿಯನೆಯ್ದಿ ಒಡೆದು ಚಿತ್ಪಿಂಡದಾಚರಣೆಯೆಂಬುದೀಗ ಕ್ರಿಯಾಶಕ್ತಿ ವಿಹಂಗ ರೂಪಾದಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಪಿಂಡಾದಿ ಜ್ಞಾನ ಶೂನ್ಯಾಂತವಾದ ಸ್ಥಲಕುಳಾದಿಗಳಲ್ಲಿ ಏಕವಾಗಿಹುದೇ ಪಿಪೀಲಿಕ ಜ್ಞಾನ ಸಂಬಂಧವಾದ ಕಾರಣ ಜ್ಞಾನಶಕ್ತಿ ಪಿಪೀಲಿಕ ರೂಪವಾದಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಪ್ರಾಣತ್ವ ಪ್ರಾಣಲಿಂಗತ್ವ ಪ್ರಸಾದ ಮುಕ್ತತ್ವವೆಂಬ ತ್ರಿವಿಧಾಚರಣೆಯಲ್ಲಿ ನಿರ್ಧರವಾಗಿ ಎಂಬುದೀಗ ತ್ರಿವಿಧ ಮಾರ್ಗ ರೂಪಾಯಿತ್ತೆಂಬ ಶಬ್ದಕ್ಕರ್ಥ ಅಂತಪ್ಪ ಶರಣ ತನ್ನ ನಿಜ ಸ್ವರೂಪವ ಸುಜ್ಞಾನ ದೃಷ್ಟಿ ನೋಡುತ್ತಿರ್ದನೆಂಬುದೀಗ ಕಾಂಬುದು ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನ ದೃಷ್ಟಿಯ ಮುಂದೆ ಪರಬ್ರಹ್ಮವು ತೋರುತ್ತಿಹುದೆಂಬುದೀಗ ಕಾಣಿಸಿಕೊಂಬುದು ಎಂಬ ಶಬ್ದಕ್ಕರ್ಥ. ತನ್ನ ನಿಜಸ್ವರೂಪವ ಶಿವಾನುಭಾವಿಯಾದ ಶರಣನು ಕಂಡು ನಿಶ್ಚಯದಿಂ ನಿರ್ಧರವಾದಲ್ಲಿ ಎಂಬುದೀಗ ತ್ರಿವಿಧ ಮಾರ್ಗ ರೂಪಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತನ್ನ ನಿಜ ಸ್ವರೂಪವ ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದನೆಂಬುದೀಗ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು ಮಹದಾಕಾಶದಲ್ಲಿ ವಾಸವಾಗಿರ್ದನೆಂಬ ಶಬ್ದಕ್ಕರ್ಥ.

---

# ಗುರುಜಂಗಮ.

೪೪. ಗುರು ಪ್ರಸಾದವ ಲಿಂಗಕ್ಕೆ ಕೊಡಲಿಲ್ಲ. ಜಂಗಮ ಪ್ರಸಾದವ ಲಿಂಗಕ್ಕೆ ಕೊಡಲಿಲ್ಲ. ಅದು ಏಕೆಂದರೆ ಆ ಗುರುವಿಗೂ ಲಿಂಗಪ್ರಾಣ ಜಂಗಮಕ್ಕೂ ಲಿಂಗಪ್ರಾಣ. ಆ ಲಿಂಗ ವಿರಹಿತವಾಗಿ ಗುರುವಾಗಬಲ್ಲಡೆ ಆ ಲಿಂಗ ಬಾಹ್ಯವಾಗಿ ಜಂಗಮವಾಗಬಲ್ಲಡೆ ಉಭಯ ಪ್ರಸಾದವ ಲಿಂಗಕ್ಕೆ ಕೊಡಬಹುದು. ಇದನರಿಯದೆ ಉದ್ದೇಶಿಸಿ ನುಡಿವ ಭೇದ ಹೀನರಿಗೆ ತ್ರಿವಿಧವಿಲ್ಲ ಎಂದೆ. ಅವರು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ದೂರ.

ಟೀಕಾ॥ ಸುಜ್ಞಾನೋದಯವಾಗಿ ಸರ್ವಾಂಗಲಿಂಗ ಸಂಬಂಧವ ತಿಳಿದು ರೂಪು ರುಚಿ ತೃಪ್ತಿ ಮೊದಲಾದ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಆ ಪ್ರಸನ್ನ ಪ್ರಸಾದವನು ಸ್ವೀಕರಿಸಲರಿಯದೆ ಜೀವ ಭಾವದಿಂ ಸ್ವೀಕರಿಸಿ ಅಜ್ಞಾನಿಯಾದ ಭಿನ್ನ ಗುರು. ಆ ಗುರುವಿನ ಪ್ರಸಾದವನು ಆಣವಾದಿ ಮಲತ್ರಯ ರಹಿತವಾದ ನಿರ್ಮಲ ಲಿಂಗಕ್ಕೆ ಕೊಡಲಿಲ್ಲವೆಂಬುದೀಗ ಗುರುಪ್ರಸಾದವ ಲಿಂಗಕ್ಕೆ ಕೊಡಲಿಲ್ಲವೆಂಬ ಶಬ್ದಕ್ಕರ್ಥ. ಆ ಜಂಗಮ ತನ್ನ ನಿಜ ಸ್ವರೂಪವ ತಿಳಿದು ತನು ಮನ ಪ್ರಾಣೇಂದ್ರಿಯಂಗಳಲ್ಲಿ ಲಿಂಗ ಸಂಬಂಧವಾಗಿ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಆ ಪ್ರಸಾದವ ಸ್ವೀಕರಿಸುವರೆ ಸುಜ್ಞಾನ ಜಂಗಮಸ್ಥಲ. ಇದನರಿಯದೆ ನಾನೇ ಸಾಕ್ಷಾತ್ ಬ್ರಹ್ಮವೆಂದು ಲಿಂಗಕ್ಕೆ ಕೊಡದೆ ಜೀವಭಾವದಿಂ ಸ್ವೀಕರಿಸುವಾತ ಜಂಗಮವಲ್ಲ. ಅಂತಪ್ಪ ಜಂಗಮದ ಪ್ರಸಾದವ ನಿರ್ಮಲ ಲಿಂಗಕ್ಕೆ ಅರ್ಪಿಸಲಿಲ್ಲವೆಂಬುದೀಗ ಜಂಗಮ ಪ್ರಸಾದವ ಲಿಂಗಕ್ಕೆ ಕೊಡಲಿಲ್ಲವೆಂಬ ಶಬ್ದಕ್ಕರ್ಥ. ಅದು ಏಕೆ ಕೊಡಲಿಲ್ಲವೆಂದೊಡೆ ಆ ಗುರುವಿಗೂ ಲಿಂಗ ಚೈತನ್ಯ ಆ ಜಂಗಮಕ್ಕೂ ಲಿಂಗ ಚೈತನ್ಯವೆಂಬುದೀಗ ಆ ಗುರುವಿಗೂ ಲಿಂಗಪ್ರಾಣ ಜಂಗಮಕ್ಕೂ ಲಿಂಗ ಪ್ರಾಣವೆಂಬ ಶಬ್ದಕ್ಕರ್ಥ. ಆ ಚೈತನ್ಯ ಸ್ವರೂಪವಾದ ಲಿಂಗವಿರಹಿತವಾಗಿ ಗುರುವೆನಿಸಬಾರದು. ಆ ಚೈತನ್ಯಸ್ವರೂಪವಾದ ಲಿಂಗವಿರಹಿತವಾಗಿ ಜಂಗಮವೆನಿಸಬಾರದೆಂಬುದೀಗ ಆ ಲಿಂಗ ವಿರಹಿತವಾಗಿ ಗುರುವಾಗ ಬಲ್ಲಡೆ ಆ ಲಿಂಗ ಬಾಹ್ಯವಾಗಿ ಜಂಗಮವಾಗಬಲ್ಲಡೆ ಎಂಬ ಶಬ್ದಕ್ಕರ್ಥ. ಇಂತಪ್ಪ ಉಭಯ ಪ್ರಸಾದವ ಲಿಂಗಕ್ಕೆ ಕೊಡಬಹುದೆಂಬುದೀಗ ಉಭಯ ಪ್ರಸಾದವ ಲಿಂಗಕ್ಕೆ ಕೊಡಬಹುದೆಂಬ ಶಬ್ದಕ್ಕರ್ಥ. ತಮ್ಮ ಅಂಗದ ಮೇಲೆ ಲಿಂಗ ಸಂಬಂಧವಿಲ್ಲದೆ ಲಿಂಗಾರ್ಪಿ

ತವ ಮಾಡದೆ ನಾವು ಗುರುಗಳು ನಾವು ಜಂಗಮವು ಎಂದು ಲಿಂಗಕ್ಕೆ ಕೊಡವೆ ಕೊಂಬುವರು ಎಂಬುದೀಗ ಇವನರಿಯದೆ ಉದ್ದೇಶಿಸಿ ನುಡಿವ ಎಂಬ ಶಬ್ದಕ್ಕರ್ಥ. ಅವರಿಗೆ ಪರಶಿವ ತತ್ವದಲ್ಲಿ ಸಮರಸವಿಲ್ಲವೆಂಬುದೀಗ ಭೇದಹೀನರಿಗೆ ಎಂಬ ಶಬ್ದಕ್ಕರ್ಥ. ಅವರಿಗೆ ಲಿಂಗಕ್ರಿಯದಿಂದುದಯವಾದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವಿಲ್ಲವೆಂಬುದೀಗ ತ್ರಿವಿಧವೆಲ್ಲ ಒಂದೇ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವರು ಶಿವತತ್ವಕ್ಕೆ ಭಿನ್ನವಾಗಿ ಭೇದವಾದಿಗಳಾಗಿಹರೆಂಬುದೀಗ ಅವರು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ದೂರ ಎಂಬ ಶಬ್ದಕ್ಕರ್ಥ.

---

## ಗುರುಲಿಂಗಜಂಗಮ.

೪೫. ಕಾಯವಿದ್ದು ಕಾಂಬುವುದು ಗುರುಸ್ಥಲ, ಜೀವವಿದ್ದು ಕಾಂಬುದು ಲಿಂಗಸ್ಥಲ, ಭಾವವಿದ್ದು ಕಾಂಬುದು ಜಂಗಮಸ್ಥಲ. ತ್ರಿವಿಧವನೊಡಗೂಡಿ ಕಾಂಬುದು ಭಕ್ತಿಸ್ಥಲ. ಭಕ್ತಿ ನಿಶ್ಚಯವಾಗಿ ನಿಂದಲ್ಲಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ ನಿಶ್ಚಯವಾದ ಸ್ಥಲ.

೪೬. ಪೂಜಿಸಿ ಕಾಂಬುವುದು ಗುರುವಿನ ಭೇದ. ಧ್ಯಾನಿಸಿ ಕಾಂಬುವುದು ಲಿಂಗದ ಭೇದ. ಉಭಯದಲ್ಲಿ ನಿಂದು ವಿಚಾರಿಸಿ ಕಾಂಬುವುದು ಜಂಗಮದ ಭೇದ. 'ಜಾ' ಎಂದಲ್ಲಿ ಜನನನಾಸ್ತಿ. 'ಗಾ' ಎಂದಲ್ಲಿ ಗಮನ ನಾಸ್ತಿ. 'ಮಾ' ಎಂದಲ್ಲಿ ಮರಣ ನಾಸ್ತಿ. ಈ ತ್ರಿವಿಧ ನಾಸ್ತಿಯಾಗಿ ನಿಂದುದು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವು ನಿಂದ ನಿಲವು.

೪೭. ಪರಧನವ ಬಿಟ್ಟಾಗಲೆ ಗುರುವಿನಿರವು ಸಾಧ್ಯವಾಯಿತ್ತು. ಪರಸ್ತ್ರೀಯರ ಬಿಟ್ಟಾಗಲೆ ಲಿಂಗ ಅಂಗದ ಮೇಲೆ ಸಲೆ ಸಂದಿತ್ತು. ನಿಂದೆ ಎಂಬುದು ನಿಂದಾಗಲೆ ಜಂಗಮಭಕ್ತಿ ಸಾಧ್ಯವಾಯಿತ್ತು. ಇಂತೀ ತ್ರಿವಿಧವ ತಟ್ಟದಿಪ್ಪಾತನು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವ ಮುಟ್ಟಿಪ್ಪನು.

೪೮. ಅಪ್ಪು ಮೂಲಾಧಾರವಾಗಿ, ಬೀಜದ ಮೇಲೆ ಬೀಳೆ ಪೃಥ್ವೀಗರ್ಭ ಬೆಸಲಾಯಿತ್ತು. ತ್ರಿವಿಧದಾದಿಯಿಂದ ಗುರುವಾಯಿತ್ತು. ತ್ರಿವಿಧ ಭೇದದಿಂದ ಲಿಂಗವಾಯಿತ್ತು. ತ್ರಿವಿಧವಳಿದು ಜಂಗಮವಾಯಿತ್ತು. ಜಂಗಮವಳಿದು ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ ಸ್ವಯಂಭುವಾಯಿತ್ತು.

೪೯. ಗುರುಲಿಂಗ ಬ್ರಹ್ಮರೂಪಾಯಿತ್ತು. ಚರಲಿಂಗ ವಿಷ್ಣುರೂಪಾಯಿತ್ತು. ಸ್ಥಾವರಲಿಂಗ ರುದ್ರರೂಪಾಯಿತ್ತು. ಗುರು ಚರ ಲಿಂಗ ತ್ರಿವಿಧ ಮಲ ಕಾರಣವಾಯಿತ್ತು. ಅಮಲಗುಣ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ನಾಮಕ್ಕೆ ಹೊರಗಾದ.

೫೦. ಗುರುವೆಂದಡೂ ಕಾಯವುಳ್ಳನ್ನಕ್ಕ ದೋಷಕ್ಕೆ ಹೊರಗಾಗಬೇಕು. ಲಿಂಗವೆಂದಡೂ ಪೀಠಕ್ಕೆ ಸಿಕ್ಕಿಹನ್ನಕ್ಕರ ಜಗದಾಗುಚಾಗೆಯುನರಿಯಬೇಕು. ಜಂಗಮವೆಂದಡೂ ಸುಖದುಃಖವುಳ್ಳನ್ನಕ್ಕ ಕಾಯವಿಡಿದಿಹ ಕಾರಣ ಪಾತಕಕ್ಕೆ ಹೊರಗಾಗಬೇಕು. ಶೂನ್ಯವಾದಡೂ ಆ ಕುರುಹುಳ್ಳನ್ನಕ್ಕ ಸುಖದುಃಖಕ್ಕೊಳಗು. ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವಾದಡೂ ಮರೆದಲ್ಲಿ ಭವಕ್ಕೆ ಬೀಜ.

೫೧. ಸ್ತ್ರೀಲಿಂಗ ನಾಸ್ತಿಯಾಗಿರಬೇಕು ಗುರುವಿನಿರವು. ಪುಲ್ಲಿಂಗ ನಾಸ್ತಿಯಾಗಿರಬೇಕು ಲಿಂಗದಿರವು ನಪುಂಸಕ ಲಿಂಗ ನಾಸ್ತಿಯಾಗಿರಬೇಕು ಜಂಗಮದಿರವು. ತ್ರಿವಿಧಲಿಂಗ ನಾಸ್ತಿಯಾಗಿರಬೇಕು. ಈಶಾನ್ಯ ಮೂರ್ತಿಮಲ್ಲಿಕಾರ್ಜುನ ಲಿಂಗವು ನಾದ ಬಿಂದು ಕಳೆಗೆ ಹೊರಗಾಯಿತ್ತು.

೫೨ ಗುರು ಮೂರು ಕೂಡಿ ಗುರುವಾದಲ್ಲಿ, ಬಿಂದು ಐದು ಕೂಡಿ ಲಿಂಗವಾದಲ್ಲಿ, ವಿಂಶತಿ ಆರುಕೂಡಿ ವಿಸರ್ಜನವಾದಲ್ಲಿ ಜಂಗಮವಾಯಿತ್ತು. ಆ ಜಂಗಮ ಜಾಯತೆ ಭಾವವಳಿದು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವಾಯಿತ್ತು.

ಟೀಕೆಃ— ಸುಜ್ಞಾನೋದಯವಾಗಿ ಶ್ರೀಗುರು ಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾದ ಶರಣಂಗೆ ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರುವೆಂಬ ಗುರುತ್ರಯವು ಶಿಷ್ಯನಾಚಾರಾಂಗದಲ್ಲಿ ಒಂದೇಸ್ವರೂಪಿನಿಂದ ಗುರುತತ್ವ ಸಂಬಂಧವಾಯಿತ್ತೆಂಬುದೀಗ ಗುರು ಮೂರು ಕೂಡಿ ಗುರುವಾದಲ್ಲಿ ಎಂಬ ಶಬ್ದಕ್ಕರ್ಥ. ಬಿಂದುಸ್ವರೂಪವಾದ ಪಂಚಾಕ್ಷರವೇ

ಆಧಾರಪೀಠ ಮಧ್ಯವೃತ್ತ ಗೋಮುಖ ನಾಳಂಗಳಲ್ಲಿ ಪಂಚಾಕ್ಷರೀ ಮಂತ್ರ ಸ್ವರೂಪಿನಿಂ ಇಷ್ಟಲಿಂಗವಾಗಿ ಬಂದಿತ್ತೆಂಬುದೀಗ ಬಿಂದು ಐದು ಕೂಡಿ ಲಿಂಗವಾದಲ್ಲಿ ಎಂಬ ಶಬ್ದಕ್ಕರ್ಥ. ತತ್ವವಿಪತ್ತು ಅಧಿದೇವತೆಗಳು ಷಡ್ವಿಧ ಇಪ್ಪತ್ತಾರು ತತ್ವವರ್ತನೆ ನಷ್ಟವಾದಲ್ಲಿ ಸದ್ಭಾವ ಹಸ್ತದಲ್ಲಿ ಸುಜ್ಞಾನ ಜಂಗಮಲಿಂಗ ಸಂಬಂಧವೆಂಬುದೀಗ ವಿಂಶತಿ ಮೂರು ಕೂಡಿ ವಿಸರ್ಜನವಾದಲ್ಲಿ ಆ ಜಂಗಮವಾಯಿತ್ತೆಂಬ ಶಬ್ದಕ್ಕರ್ಥ. ಆ ತತ್ವಂಗಳ ನಿವೃತ್ತಿಮಾಡಿದ ಸುಜ್ಞಾನ ಜಂಗಮಕ್ಕೆ ಪುನರ್ಭವವಿಲ್ಲದೆ ಮಹಾಘನಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ ಆ ಜಂಗಮ ಜಾಯತೆ ಭಾವವಳಿದು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗವಾಯಿತ್ತೆಂಬ ಶಬ್ದಕ್ಕರ್ಥ.

೫೩. ಗುರುವಿರೆ ಲಿಂಗ ಪ್ರಸಾದವ ಕೊಳಲಾಗದು. ಲಿಂಗವಿರೆ ಜಂಗಮ ಪ್ರಸಾದವ ಕೊಳಲಾಗದು. ಜಂಗಮವಿರೆ ಉಭಯಪ್ರಸಾದವ ಕೊಳಲಾಗದು. ಇಂತೀ ಪ್ರಸಾದದ ವಿವರವನರಿತಲ್ಲಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು ಪ್ರಸನ್ನ ಪ್ರಸಾದವಾದ.

ಟೀಕಾ:— ದೀಕ್ಷಾತ್ರಯಂಗಳಂ ಕರುಣಿಸಿ ಅಂಗತ್ರಯಕ್ಕೆ ಲಿಂಗ ತ್ರಯವ ಸಂಬಂಧವ ಮಾಡಿ ಸದಾಚಾರ ಸತ್ವರ್ಥ ಮಾರ್ಗವ ತೋರಿ ಕೊಟ್ಟ ಶ್ರೀಗುರುವ ಕ್ಷೀಣವೆಂದು ಲಿಂಗವೇ ಶ್ರೇಷ್ಠವೆಂದು ಗುರುವ ಬಿಟ್ಟು ಲಿಂಗಪ್ರಸಾದವ ಕೊಂಬುದು ಅಜ್ಞಾನವೆಂಬುದೀಗ ಗುರುವಿರೆ ಲಿಂಗಪ್ರಸಾದವ ಕೊಳಲಾಗದು ಎಂಬ ಶಬ್ದಕ್ಕರ್ಥ. ತನ್ನಂಗವಾನ ಪ್ರಾಣೇಂದ್ರಿಯಂಗಳಲ್ಲಿ ಲಿಂಗ ಚೈತನ್ಯಸ್ವರೂಪವಾಗಿರ್ದ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಪ್ರಸಾದವ ಸ್ವೀಕರಿಸುವದೇ ಸಹಜ. ಆ ಲಿಂಗವ ಬಿಟ್ಟು ಜಂಗಮವೇ ಶ್ರೇಷ್ಠವೆಂದು ಆ ಜಂಗಮದ ಪ್ರಸಾದವ ಕೊಳಲಾಗದೆಂಬುದೀಗ ಲಿಂಗವಿರೆ ಜಂಗಮ ಪ್ರಸಾದವ ಕೊಳಲಾಗದೆಂಬ ಶಬ್ದಕ್ಕರ್ಥ. ಸುಜ್ಞಾನಸ್ವರೂಪವಾದ ಜಂಗಮವು ತನ್ನಲ್ಲಿ ಚೈತನ್ಯಸ್ವರೂಪವಾಗಿರ್ದ ಬಳಿಕ ಆ ಜಂಗಮವನುದಾಸೀನದಿಂ ಬಿಟ್ಟು ಗುರುಪ್ರಸಾದವ ಲಿಂಗಪ್ರಸಾದವ ಕೊಳಲಾಗವೆಂಬುದೀಗ ಆ ಜಂಗಮವಿರೆ ಉಭಯ ಪ್ರಸಾದವ ಕೊಳಲಾಗದೆಂಬುದೀಗ ಆ ಜಂಗಮವಿರೆ ಉಭಯ ಪ್ರಸಾದವ ಕೊಳಲಾಗದೆಂಬ ಶಬ್ದಕ್ಕರ್ಥ. ಇಂತೀ ಭಿನ್ನ

ಎಂದು ಬಯ್ತಿಟ್ಟ ದಿಂಡಂ ತೆಗೆದು ನೋಡುತುಂ
ಅಂದಲ್ಲಿ ಕಾಣದೆ ಮನಂಗುಂದಿ ಬಾಡುತುಂ
ಎಲ್ಲ ದಿಂಡುಗಳೊಳಗೆ ಲೇಸಾಗಿ ನೋಡುತಿರೆ
ಎಲ್ಲಿಯುಂ ಶಿವನ ಕೌಪಿನ ಸುದ್ದಿ ಇಲ್ಲದಿರೆ
ಕಂಡು ಶಿವಭಕ್ತನುರಿದೆಳ್ದು ಬಸಿರುಂ ಪೊಸೆದು
ಕಂಡಿರೇಯಮರನೀತಿಗಳ ಪರಿಕರಮರಿದು
ನಿನ್ನ ಕಚ್ಚುಟವ ಬಯ್ತಿಟ್ಟ ಕೊಡು ನೀನೆಂದು
ತನ್ನ ಕೈಯ್ಯೊಳ್ಕೊಡಲ್ಕೊಂಡು ಕೆಟ್ಟಿತ್ತೆಂದು
ನುಡಿವ ಪರಿಯಂ ಕೇಳ್ವಿರೇ ಭಕ್ತಜನವೆಲ್ಲ
ಕಡೆಯಲೆನ್ನಂ ಹೊಲ್ಲಮೆನಲಾಗದಿನ್ನೆಲ್ಲಿ
ಎನಲಮರನೀತಿಗಳೆ ದೇವ ನಾಂ ಕೊಂಡೆನೇ
ತನಗೆ ತಾನೇ ಕೆಟ್ಟು ಪೋದುದಂ ಬಲ್ಲೆನೇ
ಇದಕೆ ನೀವಿನಿತಾಸುರಂ ಮಾಡವೇಳ್ಕುಮೋ
ಇದೆ ಕೊಳ್ಳಿ ನಾಲ್ಕೈಯ್ದು ಸಮಕಟ್ಟು ಸಾಲ್ಗುಮೋ

ಎಂದು ಪಟ್ಟಾವಳಿಯ ಸಮಕಟ್ಟನೀವುತಿರೆ
ನಿಂದೊದೆದು ಬಿದ್ದಿರ್ದು ನೆರೆದ ಸಭೆ ನಡುಗುತಿರೆ
ಎಲವೊ ಪಟ್ಟಾವಳಿಯ ಗಿಟ್ಟಾವಳಿಯ ಪವಣೆ
ಎಲವೊ ನೇತ್ರಾವಳಿಯ ಗೀತ್ರಾವಳಿಯ ಪವಣೆ
ಎನಗೆನ್ನ ಕೌಪು ಸಾಲ್ವುದು ಕುಡುಕುಡೆಂದೆನುತೆ
ನಿನಗದರ ಮಹಿಮೆಯರಿಯದುಸುರ್ದಪೆನೆಂದೆನುತೆ
ಇರಲರಿಯೆನೀನವರ ಕಚ್ಚುಟದ ಮಹಿಮೆಯಂ
ಇರಿಸುವಲ್ಲಿಂ ಮುನ್ನ ಕಚ್ಚುಟದ ಮಹಿಮೆಯಂ
ಮಹಿಮೆಯಲ್ಲಿದು ಬರಿಯ ಕಚ್ಚುಟಂ ಕೊಡು ತಂದೆ
ಕುಹಕವೇಕೈ ಭಕ್ತರೊಡವೆಯಂ ಕುಡು ತಂದೆ
ಕುಡುವುದುಂ ಕೊಂಬುದುಂ ಸಿರಿವಂತ ಭಕ್ತರೊಳ್
ನುಡಿವುದೈ ನುಣ್ಣನೆಯ ಮಾತನಾ ಭಕ್ತರೊಳ್
ಎಮಗಿನಿತು ಪೇಳ್ವುದೇ ಸಿರಿಯ ಗರ್ವದ ನೆರವು
ನಿಮಗೆ ಗುಣವೇ ಕೊಂಡು ಕುಡಲಿಲ್ಲದಿರ್ಪಿರವು
ಏನೆಂದೊಡಂ ಸುಮ್ಮನಿರ್ದನಮರರನೀತಿ
ಏನೀಯೆಯೊರಲುತ್ತಲಿರ್ಕೆಂಬುದೇ ನೀತಿ

ಇನ್ನೊರ್ಮೆ ಬೇಡುವೆಂ ಕುಡದೆ ನಿಂದೊಡೆ ಬಳಿಕ
ಎನ್ನಸುವನೊಪ್ಪಿಸುವೆ ನಿನಗೆ ಸಂತಸ ಬಳಿಕ
ಮೆನ್ನನೆಮ್ಮಯ ಭಕ್ತರರಸಿಕೊಳ್ವವರುಂಟು
ನಿನ್ನ ಪವಣಲ್ಲ ಕೇಳ್ನನಗೆ ಬಲ್ಲಿದರುಂಟು
ಎನುತಲಟ್ಟಾಸುರಂ ಮಾಡುತಿರೆ ಬೆರಗಾಗಿ
ತನತನಗೆ ಭಕ್ತರೆಲ್ಲರ್ಸಯ್ದು ಸಿಗ್ಗಾಗಿ

ಎನೆ ಶರಣರೆಲ್ಲಂದು ಕೂಡೆ ಮುಮ್ಮಳಿಗೊಂಡು
ತನತನಗೆ ನಲಿದು ಉಲಿವ ಭಕ್ತನ ಕಂಡು
ಭಕ್ತರ್ಗೆ ಮಾಡುವದನಿಂತು ಮಾಣಿಸಿದನೇ
ಭಕ್ತರೆಲ್ಲರ ಪಾಪವಂ ಕಟ್ಟಿಕೊಂಡನೇ
ಕಚ್ಚುಟಕೆ ಪಡಿಯ ದಿಂಡುಗಳನಿತ್ತೊಡೆಯೊಲ್ಲ
ನಚ್ಚರಿಯದೇನೆಂಬ ಪರಿಯನೀಶ್ವರ ಬಲ್ಲ
ನೆಂದೆಲ್ಲರೊಂದನಾಲೋಚಿಸಿದರಂದಿಂಗೆ
ಇಂದಮರನೀತಿ ಬರ್ದುಕಿದೊಡೆ ಸಾಲ್ಗೆಂದೆಮಗೆ
ಭಕ್ತನೇಕಗ್ರಾಹಿ ಕೌಪನಲ್ಲದೆಯೊಲ್ಲ
ಯುಕ್ತಿ ಕೊಳ್ಳದು ಹಿಡಿದ ಮುಷ್ಟಿಯುಂ ಬಿಡಲೊಲ್ಲ
ನಿದಕೆ ಸಾವಿರ ಹೊನ್ನದೊಂದು ಹೊಸ ಕೌಪುಮಂ
ಮುದದಿಂದಲಿತ್ತು ಭಕ್ತನ ಮನದ ಚಲಮುಮಂ
ಬಿಡಿಸುವೆವೆನುತ್ತೆಲ್ಲರೆಂದರಾ ಭಕ್ತಂಗೆ
ಮೃಡನ ಭಕ್ತರ್ನುಡಿದರಾ ಕಪಟ ಭಕ್ತಂಗೆ
ಎಮ್ಮ ಮಾತಂ ಸಲಿಸವೇಳ್ಕುಮಿಂದೆಲೆ ದೇವ
ಎಮ್ಮೆಲ್ಲರಂ ನೊಡವೇಳ್ಕುಮಿಂದೆಲೆ ದೇವ
ನಿನ್ನ ಕಚ್ಚುಟಕೆ ಪವಣಪ್ಪೊಂದು ಸಾವಿರದ
ಹೊನ್ನ ಕೌಪಂ ಕೊಂಡು ನಯದಿಂದಲೀ ನೆರೆದ
ಭಕ್ತರ್ಗೆ ಸಂತಸಂ ಮಾಡಬೇಕೆನುತಮಿರೆ
ಭಕ್ತನಳ್ಳಿರಿದೇಳೆ ನಿಂದ ಸಭೆ ನಡುಗುತಿರೆ

ಕೋಪಿಸುತೆ ಕಂಪಿಸುತೆ ಮಾಮಸಕದಿಂ ಮಸಗಿ
ಶಾಪಿಸುತೆ ತಾಪಿಸುತೆ ಮಿಗೆ ಮಮ್ಮಲಂ ಮರುಗಿ

ಅಯ್ಯ ಭಕ್ತರಿರ ವಿಂಗೆ ಲೋಗರಿಗೆ ಮುಗ್ಧರೇ
ಅಯ್ಯ ನಿಮ್ಮತ್ತಲಾಗಲು ನೆರೆ ವಿದಗ್ಧರೇ
ಕುಡುವವರ ಪಕ್ಷವಪ್ಪುದನೇಕೆಮಾಣಿರೇ
ಬಡವನುಮನಾಥನೆನಗೆನ್ನತ್ತಲಪ್ಪಿರೇ
ಅದು ನೋಟಕದ ಕಚ್ಚುಟವದೆಂತು ಬಗೆದಿರೇ
ಅದು ಪರುಷವೆನಗೆ ಚಿಂತಾಮಣಿವ್ರಜವೆನಗೆ
ಅದು ಕೋವಣವೆ ಸುರಭಿಗಳ್ಗೆ ದಾವಣಿ ಯೆನಗೆ
ಅದು ಕೋವಣವೆ ಕಲ್ಪಲತೆಯ ಕಾವಣವೆನಗೆ
ಕೋವಣವೆಯಭಿಮಾನಗೆಕ್ಕಲಾವಣವೆನಗೆ
ವೊ ವೋ ವೋ ಅಂತದಕೆ ಹೊನ್ನ ಕಚ್ಚುಟವೆನಗೆ
ಕೊಡಲೆಂದು ಬರ್ಪಿರೇ ಹೈಕೊಳ್ಳದಿರ್ಪೆನೇ
ನಡುವೆ ಮಧ್ಯಸ್ಥರಾಗಿರ್ಪಿರೇನರಿಯೆನೇ
ಇವರನೇ ಕೈತೋರುತಿರ್ಪೆಯಮರನೀತಿ
ಇವರ ಕೈಯ್ಯೊಳು ಕೊಟ್ಟೆನೇ ಹೇಳಮರನೀತಿ
ಎನುತಲಟ್ಟಾಸುರಂ ಮಾಡುತಿರೆ ಬೆರಗಾಗಿ
ತನತನಗೆ ಭಕ್ತರೆಲ್ಲಂ ಸುಯ್ದು ಸಿಗ್ಗಾಗಿ
ಇವರೇಕೆ ನೀವೇಕೆ ಕೌಪೇಕಮರನೀತಿ
ಇವರನಿನ್ನೇನೆಂದೊಡಂ ನಮಗಪಖ್ಯಾತಿ
ಎಂಬ ನುಡಿಗೇಳ್ದಮರನಿತಿಗಳ್ಗೆ ನೊಂದು
ಇಂಬಿಲ್ಲ ನುಡಿಗೆಯನ್ಯಾಯನೆಮ್ಮದೆ ಯೆಂದು
ಕೊಟ್ಟನಿವರೊಂದು ಕೌಪಂ ಕೊಂಡೆನಾನಿದಂ
ಕೆಟ್ಟುದಪರಾಧಿಯಾನಿಂತಿದಕೆ ತಕ್ಕುದಂ
ಮಾಡುವರಿವರ್ಮಾಡಿಸಿಯೆ ಕೊಳ್ವೆ ನಾನೆಂದು
ಕಾಡುವರಿವರ್ಕಾಡಿಸಿಯೆ ಕೊಳ್ವೆ ನಾನೆಂದು
ನೀವೆಲ್ಲರುಂ ಬಳಲ್ದಿರಿ ಹಸಿದಿರೆಂದೆನುತೆ
ಆನವರ್ಮಾಡಿದಂತಾದಪ್ಪೆನೆಂದೆನುತೆ
ನುಡಿಯೆ ಭಕ್ತರ್ ಮರುಗಿದ ನಮ್ಮವಶವಲ್ಲವಿದು
ವೃಡನೆ ಬಲ್ಲಂ ಮಿಕ್ಕವರ್ಗರಿಯಬಾರದಿದು
ಎನುತೆಲ್ಲರೇಳಲುದ್ಯುತರಾಗೆ ಶಂಕರಂ
ನೆನೆದನಿಂತಿವರೇಳಲಾಗದೆನುತೀಶ್ವರಂ

ಪೋಗದಿರಿ ನೀವೆಲ್ಲ ನಾನೊಂದನೆಂದಪೆಂ
ರಾಗದಿಂ ನೀವೆಂದ ಮಾಳ್ಕೆಯಿಂ ಬಂದಪೆಂ
ಕೋವಣವನೀತನಾವರ್ತದಿಂ ಕೊಡನದಂ
ನೀವೆಲ್ಲರುಂ ನೋಡಲೇಸುವನೊಡಂಬಡಂ
ಆತಂಗೆ ಛಲವಾದಡೆನಗೆ ಛಲವಪ್ಪುದೇ
ಆತನೊಳ್ಮಿಗುವಿನೊಳ್ಗುಣದೋಷವರಸುವುದೇ
ಬೇಡಿನ್ನದೇಕೆ ಭಕ್ತರ ವಿರೋಧವದೆಮಗೆ
ಕಾಡಲೇಕೀತನಂ ನೀವೆಲ್ಲರುಮೆನೆನಗೆ
ನಿಮ್ಮಯ ನಿರೋಧಮುಂ ಮಾಣಿಸುವೆನಿನ್ನೊಂದು
ಎಮ್ಮ ಮಾರುಡೆ ಕೌಪು ಬೇರೆಯಿದೆ ಮತ್ತೊಂದು
ಇದರ ತೂಕಕ್ಕೆ ಸರಿ ತೂಕವಿತ್ತೊಡೆ ಸಾಲ್ಗ
ಆದರ ಹಂಬಲುಂ ಬೇಡ ಭಕ್ತರ್ಗೆ ನೆರೆ ಸೋಲ್ಗ

ಎನೆ ಶರಣರೆಲ್ಲರು ಕೂಡೆ ಹರುಷಂದಳೆದು
ಮನದೊಳಗೆ ಗುಡಿಗಟ್ಟಿ ಸಂತೋಷಮುಂ ತಳೆದು
ಅಮರನೀತಿಗಳನಾಲಿಂಗಿಸಿ ಸುಖಂ ಬಡೆದು
ನಿಮಗೆ ದೇವರ ಕರುಣಮುಂಟೆಂದು ಸುಖವಿಡಿದು
ತೀರಿತೆಂದೇ ಬಗೆದು ನೆಗೆದು ನಲಿದಾಡುತುಂ
ಮಾರಾರಿ ಮಾಡುವುದನರಿಯದೊಲೆದಾಡುತುಂ
ತರಿಸು ತರಿಸು ತ್ರಾಸನೆನುತೆ ಸಂಭ್ರಮಿಸುತ್ತೆ
ಹರನಿಂತು ಕರುಣಿಸಿದನೇ ಎಂದು ಹಿಗ್ಗುತ್ತೆ
ಇರೆ ಬಂದುದೊಂದು ಕಿರಿಯ ತ್ರಾಸುಮುಂ ಪಿಡಿದು
ಇರಿಸಿ ಕೋವಣದ ಭಾರಕ್ಕೆ ಹಲ್ಲೆಗಳೊಡೆದು
ಶತಚೂರ್ಣಮಾಗೆ ಮತ್ತೊಂದು ಪಿರಿದಪ್ಪುದಂ
ಅತಿ ಭರದೆ ತಂದಿರಿಸಿ ಮಿಗೆ ಬಲ್ಲಿತಪ್ಪುದಂ
ಅದರೊಳಗೆ ಕಚ್ಚುಟವನಿರಿಸಲನುರಾಗದೊಳ್
ಅದು ಸುಚ್ಚುನೂರಾಗೆ ಕಂಡಮರನೀತಿಗಳ್
ಬರಿಯ ಕೋವಣಮಲ್ಲ ಕಂಡೆನಿದರಂದಮುಂ
ಹೊರಗೆ ನಡೆಯಿರೆ ತೋರ್ಪೆನಾ ಮಾಡುವಂದಮುಂ
ಎಂದು ಶಿವರಾಜಾಂಗಣದ ಮುಂದೆ ಪೊಡಮಟ್ಟು

# ವಚನಶಾಸ್ತ್ರಸಾರ ಗ್ರಂಥಗಳು.

( ರಾ। ಸಾ। **ಪಿ. ಜಿ. ಹಳಕಟ್ಟಿ** ಇವರಿಂದ ವಿರಚಿತವಾದವುಗಳು. )

(೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ — ೨—೮—೦

(೨) ,, ,, ಉತ್ತರಾರ್ಧ — ೧—೧೨—೦

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

(೩) ವಚನಶಾಸ್ತ್ರಸಾರ ಭಾಗ ೨ — ೪—೮—೦

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

(೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ — ೨—೪—೦

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಅಷ್ಟಾವರಣಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರು, ಲಿಂಗ, ಜಂಗಮ ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯು ೧೧ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ತೆಗೆದುಕೊಂಡಲ್ಲಿ ಅವುಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ರೂಪಾಯಿಗಳಿಗೆ ದೊರೆಯುವವು ಟಪಾಲಖರ್ಚು ಪ್ರತ್ಯೇಕ.

ದೊರೆಯುವ ಸ್ಥಳ —

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

ಇದನ್ನು ವಿಜಾಪುರದಲ್ಲಿ **ರಾ॥** ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "**ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ**" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜ ಓಣಿಯಲ್ಲಿರುವ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

R. N. B. 2554

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೪ ] ಜೂನ ೧೯೪೦. [ ಸಂಚಿಕೆ ೯

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೪ | ಜೂನ ೧೯೪೦. | ಸಂಚಿಕೆ ೯ |
|---|---|---|

## ಶೂನ್ಯ ಸಂಪಾದನೆಯ ರಹಸ್ಯ.

(ಲೇಖಕ:- ಶ್ರೀ ಕಲ್ಯಾಣಪ್ಪ ಬ್ಯಾಳಿ ಬಿ. ಎ. ವಿಜಾಪೂರ.)

### (೨೧ ಪ್ರಭುವಾರೋಗಣೆಯ ಸಂಪಾದನೆ)

ಶೂನ್ಯ ಪೀಠದೊಳು ಕೂಡ್ರಿಸಿ
ಚಿನ್ಮಯಗುರುಮೂರ್ತಿಪ್ರಭುವರಗೆ ಬಸವೇಶಂ ।
ಉನ್ನತದಾರೋಗಣೆಯಂ
ನನ್ನಿಯೊಳರ್ಪಿಸಿದಪರಿಯದೆಂತೆನಲುಸುರ್ವೆಂ ॥

ಶ್ರೀ ಬಸವಣ್ಣನು ಪ್ರಭುದೇವರನ್ನು ಶೂನ್ಯಪೀಠದಲ್ಲಿ ಕುಳ್ಳಿರಿಸಿ ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಪೂಜಿಸಿ ಗೌರವಿಸುತ್ತಿರುವುದನ್ನು ಕಂಡು ಸಹಿಸಲಾರದೆ ಎಷ್ಟೋ ಜಂಗಮರು ಸಿಟಗೊಂಡು ಹೊರಟು ಹೋದದ್ದೂ ಆ ಬಗ್ಗೆ ಬಸವಣ್ಣನವರಿಗೆ ಪಶ್ಚಾತ್ತಾಪವಾದದ್ದೂ ಅದಕ್ಕೆ ಪ್ರಭುದೇವರು ಸಮಾಧಾನ ಹೇಳಿದ್ದೂ ಹಿಂದಿನ ಸಂಪಾದನೆಯಲ್ಲಿ ಸವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿರುವುದಷ್ಟೇ. ಶ್ರೀ ಪ್ರಭುವು ಶೂನ್ಯಪೀಠಾರೋಹಣ ಮಾಡಿದ ಬಳಿಕ ಶರಣಸತಿಯರು ಆತನಿಗೆ ಮಂಗಳಾರತಿಯೆತ್ತಿ ಸ್ತುತಿಸಿದರು. ಪಂಚಮಹಾವಾದ್ಯಗಳು ರಭಸದಿಂದ ಮೊಳಗಿದವು. ಶಿವಶರಣರು ಜಯಘೋಷ ಮಾಡುತ್ತ ಹರುಷಾಂಬುಧಿಯಲ್ಲಿ ತೇಂಕಾಡುತಿರ್ದರು. ಆ ಸಮಯದಲ್ಲಿ ಬಸವರಾಜದೇವರು ಪ್ರಭುವಿಗೆ

ಆರೋಗಣೆಯ ಮಾಡಿಸಬೇಕೆಂಬ ಮನದುಬ್ಬಿನಿಂದ ಎಡೆಮಾಡಿಸಲು ಸಜ್ಜಾದರು.

೧ ಲಕ್ಷ ೯೬ ಸಾವಿರ ಗಣಂಗಳಿಗೆ ನಿತ್ಯ ತೃಪ್ತಿಯ ಮಾಡಿಸುವೆನೆಂಬ ಸಾತ್ವಿಕಾಹಂಕಾರವು ಬಸವರಾಜದೇವರ ಮನದಲ್ಲಿ ಮನೆಮಾಡಿಕೊಂಡಿತ್ತು ಆದುದರಿಂದ "ಬೇಡು ಬೇಡೆಲೆ ಹೆಂದೆ ಕೂಡಲಸಂಗನ ಸಾಕ್ಷಿಯಾಗಿ ಬೇಡಿದುದ ನಾನೀವೆ" ನೆಂಬ ಹೆಮ್ಮೆಯ ನುಡಿಯು ಅವರ ಬಾಯಿಂದ ಎಷ್ಟೋ ಸಲ ಬಂದು ಬಿಡುತ್ತಿದ್ದಿತು. ಇದಲ್ಲದೆ ಸಂಪತ್ತಿನ ಮದದೊಂದಿಗೆ ಪಂಚಪರುಷಗಳೂ ಆ ಮಹಾನುಭಾವರಿಗೆ ಸಿದ್ಧಿಸಿದ್ದುದರಿಂದ ಯಾರು ಬೇಡಿದರೂ ಇಲ್ಲೆನ್ನಲಾರೆನೆಂಬ ಮನೋಧೈರ್ಯವೂ ಅವರಿಗೆ ಉಂಟಾಗಿತ್ತು. ಆದರೆ ನಿರಂಜನ ಪರಶಿವ ಸ್ವರೂಪಿಯಾದ ಶ್ರೀ ಪ್ರಭುವು ಆತನ ಅಹಂಕಾರವನ್ನು ತಗ್ಗಿಸಿ ಆತನಲ್ಲಿ ಭಕ್ತಿಯ ಕಳೆಯು ಮತ್ತಷ್ಟು ಪ್ರಜ್ವಲಗೊಳುವಂತೆ ಮಾಡಬೇಕೆಂದು ಆಲೋಚಿಸಿ ಆತನು ಪ್ರತಿನಿತ್ಯ ೧ ಲಕ್ಷ ೯೬ ಸಾವಿರ ಗಣಂಗಳಿಗೆ ಬಡಿಸುತ್ತಿದ್ದ ಅಡಿಗೆಯನ್ನೆಲ್ಲ ತಾನೊಬ್ಬನೇ ಉಂಡು ಹಸಿವೆಯು ಹಿಂಗದಂತಾಗಿರಲು ಬಸವಣ್ಣನವರ ಧೈರ್ಯವು ಕುಗ್ಗಿತು. ಆಗ ಮಡಿವಾಳ ಮಾಚಿತಂದೆಗಳು, "ಬೆಚ್ಚಿ ಬೆದರಿ ಓಡದಿರು ವೀರಕಂಕಣವ ಕಟ್ಟು ಸಂಗನಬಸವಣ್ಣಾ" ಎಂದು ಧೈರ್ಯಹೇಳಿ ಪ್ರಭುವಿನ ಆರೋಗಣೆಯ ತೃಪ್ತಿಗೆ ಸಜ್ಜುಗೊಳಿಸಿದರು.

ಆ ಮೇಲೆ ಬಸವರಾಜರು ಅರಮನೆಯ ಕೋಟಾಗಾರದ ಅಧಿಪತಿಗಳಾದ ಸೊಡ್ಡಳಬಾಚರಸರನ್ನು ಕರೆಯಿಸಿ ಧಾನ್ಯ ಸಂಗ್ರಹಾಲಯದಲ್ಲಿದ್ದ ಸಕಲ ಪ್ರಕಾರದ ಧಾನ್ಯ, ಕಿರಾಣಿ ಪದಾರ್ಥಗಳನ್ನೆಲ್ಲ ಲೆಕ್ಕ ಮಾಡಿಸಿ ತಂದು ಪ್ರಭುದೇವರ ಆರೋಗಣೆಗೆ ಅಣಿಮಾಡಿದರು. ಆದರೆ ಬಯಲು ಬಾಯಿ ತೆರೆದಂತೆ ಪ್ರಭುವು ಆರೋಗಣೆ ಮಾಡಿ ಆ ಪದಾರ್ಥಂಗಳನ್ನೆಲ್ಲ ನಿಮಿಷಾರ್ಧದಲ್ಲಿ ತೀರಿಸಿಬಿಟ್ಟನು. ನೀಡುವ ಪರಿಚಾರಕರೆಲ್ಲರೂ ಬೇಸತ್ತು ಕೈಬಿಟ್ಟರು. ಆಗ ಬಸವಣ್ಣನವರಿಗೆ ತಮ್ಮ ಅಹಂಕಾರದ ಬಗ್ಗೆ ಒಳ್ಳೆ ಪ್ರಾಯಶ್ಚಿತ್ತವುಂಟಾಯಿತು. ಮಡಿವಾಳ ತಂದೆಗಳ ಮರೆ ಹೊಗಲು ಅವರು ಚೆನ್ನಬಸವಣ್ಣನ ಸಲಹೆ ಕೇಳಬೇಕೆಂದು ಅಪ್ಪಣೆ ಕೊಡಿಸಿದರು. ಅದಕ್ಕೆ ಬಸವಣ್ಣನವರು ಚನ್ನಬಸವಣ್ಣನ ಮರೆಹೊಗಲು ಆತನು "ಈರೇಳು ಲೋಕಂಗಳ ಒಡಲೊಳಗಿರಿಸಿಕೊಂಡ ಮಹಾಘನಕ್ಕೆ ಸುಯಿಧಾನವ

ನೀಡಿಹೆನೆಂಬ ಸ್ವಾಮಿಯ ಮರುಳುತನವನೇನೆಂಬೆನು ಸದ್ಭಕ್ತ್ಯಾನಂದವೆಂಬ ಬೋನವಮಂ ಪ್ರಭುವಿಗುಣಬಡಿಸಿದರೆ ತೃಪ್ತನಹನೆಂದು ಬಿನ್ನವಿಸಿಕೊಂಡನು. ಆಗ ಬಸವಣ್ಣನವರ ಕಾಯದ ಕತ್ತಲೆಯು ಹಿಂಗಿತ್ತು. ಅಹಂಕಾರವು ನಿರ್ವಯಲಾಯಿತ್ತು. ಸದ್ಭಕ್ತಿಯಿಂದ ಶ್ರೀ ಪ್ರಭುಚರಣಕ್ಕೆ ಪೊಡವಟ್ಟರು. ಆಗ ಪ್ರಭುವಿನಾರೋಗಣೆಗೆ ತೃಪ್ತಿಯುಂಟಾಯಿತು. "ಭಕ್ತಿಯೇ ಓಗರ, ಸತ್ಯವೇ ಮೇಲೋಗರವಾಗಿ ನೀಡಿವಲ್ಲಿ" ಅದು ಶಿವನಿಗರ್ಪಿತ ವಲ್ಲದೆ ಹುಗ್ಗಿ ಹೋಳಿಗೆ ಪಕ್ವಾನ್ನಗಳನ್ನು ಬೇಕಾದಷ್ಟು ಮಾಡಿಸಿ ಎಡೆ ಮಾಡಿದರೂ ಅದರಿಂದ ಶಿವನು ತೃಪ್ತಿ ಹೊಂದಲಾರನು. ಸಕಲ ಪ್ರಾಣಿ ಗಳಿಗೆ ಅನ್ನವನ್ನಿತ್ತು ತೃಪ್ತಿಬಡುತ್ತಿರುವ ಶಿವನು ಆ ಪ್ರಾಣಿಗಳಿಂದ ಅನ್ನಕ್ಕಾಗಿ ಆಶೆ ಮಾಡಬಹುದೇ? ಆ ಪ್ರಾಣಿಗಳು ಅವನಿಗೆ ಅನ್ನ ನೀಡಿ ತೃಪ್ತಿಪಡಿಸಲು ಶಕ್ಯವೇ? ಅಗ್ನಿಯು ಕಾಷ್ಠಗಳ ರಾಶಿಯನ್ನು ಸುಟ್ಟು ಬೂದಿ ಮಾಡಿ ತಣಿಯದಂತೆ ಶಿವನು ಭಕ್ತರು ಅಹಂಕಾರ ದಿಂದ ಕೊಟ್ಟ ಅನ್ನವನ್ನು ಭಸ್ಮ ಮಾಡಿ ಬಿಡುವನು. ಅವನಿಗೆ ಅಂಥ ಅನ್ನದಿಂದ ತೃಪ್ತಿಯೆಂದಿಗೂ ಆಗಲಾರದು. "ಭಕ್ತಿಯೇ ಶಿವನಿಗೆ ತೃಪ್ತಿ" ಎಂಬ ತತ್ವವು ಈ ಸಂಪಾದನೆಯಲ್ಲಿ ವಿವೇಚಿಸಲ್ಪಟ್ಟಿದೆ.

ಶ್ರೀ ಪ್ರಭುವು ತೃಪ್ತನಾದ ಬಳಿಕ ಜಂಗಮಪ್ರಾಣಿಯಾದ ಬಸವೇಶನು ಮನೆಬಿಟ್ಟು ಹೋದ ಜಂಗಮರನ್ನು ತಿರುಗಿ ಬರಮಾಡುವ ಬಗೆ ಹೇಗೆಂದು ಪ್ರಭುದೇವರಿಗೆ ಬಿನ್ನವಿಸಿಕೊಳ್ಳಲು ಪ್ರಭುವು ವೇಷಲಾಂಛನ ಧಾರಿಗಳಾದ ಆ ಜಂಗಮರ ವಿಡಂಬನೆ ಮಾಡಿ ಬಸವನ ಜಂಗಮ ಭಕ್ತಿ ಯನ್ನು ಕೊಂಡಾಡಿ ಜಂಗಮರ ಪಾದಕ್ಕೆ ಮರೆಹೊಕ್ಕು ಅವರನ್ನು ಕೂಡಿಕೊಂಡು ಬಾರೆಂದು ಬಸವರಾಜರಿಗೆ ಅಪ್ಪಣೆ ಕೊಡಿಸಿದರು. ಆ ಮೇರೆಗೆ ಬಸವರಾಜದೇವರು ಜಂಗಮರಿಗೆ ಅರಿಕೆಮಾಡಿಕೊಳ್ಳಲು ಅವರು ಊಟ ಮಾಡದಿದ್ದರೂ ಪ್ರತಿನಿತ್ಯದಂತೆ ತೃಪ್ತರಾಗಿದ್ದರು. "ಶಿವ ಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ। ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿ ಮೇತಿಚರಾಚರಂ॥ ಎಂಬಂತೆ ಬರೇ ಜಂಗಮರಷ್ಟೇ ಏಕೆ ಪ್ರಭು ತೃಪ್ತಿಯಿಂದ ಚರಾಚರ ವಸ್ತುಗಳೆಲ್ಲವೂ ತೃಪ್ತವಾಗಿದ್ದವು. ಆಮೇಲೆ ಆ ಜಂಗಮರೆಲ್ಲ ಬಂದು ಪ್ರಭುವಿನ ಅಡಿದಾವರೆಗೆ ಪೊಡಮಟ್ಟು ಅವನನ್ನು ಬಹು ಪರಿಯಿಂದ ಕೊಂಡಾಡಿದರು. ಇಷ್ಟೇ ಈ ಸಂಪಾದನೆಯ ರಹಸ್ಯವು.

ಈ ಕಥೆಯ ಸಂದರ್ಭವನ್ನು ವಚನಗಳ ಉದಾಹರಣೆಗಳಿಂದ ಇದರಡಿಯಲ್ಲಿ ವಿಶದಪಡಿಸಲಾಗಿದೆ. ಬಸವಣ್ಣನವರು ಉಣಬಡಿಸಿದ

ಅಡಿಗೆಯನ್ನೆಲ್ಲ ಪ್ರಭುದೇವರು ಆರೋಗಣೆ ಮಾಡುತ್ತಿರುವದನ್ನು ಕಂಡು ಅವರು ಹೇಳುವದೇನಂದರೆ  ಮೊರ ಮೊರ ಆಹಾರ ನೀಡಿದರೆ ತೆರಹಾರ ಕೈಕೊಳುತ್ತೈದಾನೆ. ದೇವರ ಹಸಿವು ನಮಗೆ ಹೊಸತಲಾ. ದೆಸೆದಿಕ್ಕೆಲ್ಲ ವಿಶ್ವತೋಮುಖದ ಕೂಡಲಸಂಗಮದೇವಂಗೆ ದೆಸೆದೆಸೆಯಲ್ಲಿ ನೀಡಿ." ಮಡಿವಾಳಯ್ಯಗಳು ಈ ಸಂದರ್ಭದಲ್ಲಿ ನುಡಿದುದೇನಂದರೆ "ತನುಮುಖಕ್ಕೆ ನೀಡಿದ ಬೋನ ಅನುವಾಗಿ ಅಳವಡದ ಮುನ್ನವೇ ಮನೋ ಮುಖಕ್ಕೆ ಸರಿಯಾಯಿತ್ತು. ಮನೋ ಮುಖಕ್ಕೆ ಅನುವಾಗಿ ಅಳವಡದ ಮುನ್ನವೇ ನೋಡ ನೋಡಲೈಕ್ಯವಾಯಿತ್ತು. ಆಕಾಶಬಾಯಿ ತೆರೆದಂತೆ ಆರೋಗಣೆ ಮಾಡುತ್ತೈದಾನೆ. ಕಲಿದೇವರ ಅನುವನರಿದು ನೀಡುವರೆ ಸಂಗನಬಸ ವಣ್ಣಂಗಲ್ಲದೆ ಮತ್ತಾರಿಗೂ ಅಳವಡದು." ಹಡಪದಪ್ಪಣ್ಣಗಳು ಈ ಸಂದರ್ಭದಲ್ಲಿ ಅಪ್ಪಣೆ ಕೊಡಿಸುವದೇನಂದರೆ "ಹೆಡಗೆ ಆಹಾರ, ಮೊರ ಆಹಾರ, ಮಡಿಕೆ ಆಹಾರ, ಕೆರಸಿ ಆಹಾರ ದೆಸೆದೆಸೆಯಲ್ಲಿ ತಂದು ತಂದು ನೀಡುತ್ತಿರಲು ಆ ದೆಸೆಗಳೆಲ್ಲ ಬಾಯಾಗಿ ಕೊಳುತಿರ್ದನು. ಅದಂ ಕಂಡು ಬಸವ ಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ ಸಂತೋಷದಿಂದ ಲೋಲಾಡು ತಿರ್ದನು. ಎನ್ನ ಪರಮಗುರು ಸಂಗನಬಸವಣ್ಣನು."

ಮಾಡಿದ ಅಡಿಗೆಯು ತೀರಲಾಗಿ ಬಸವಣ್ಣನು ಪ್ರಭುವು ತನ್ನ ಮನ ಪರೀಕ್ಷೆ ಮಾಡುವನೆಂದು ಹೀಗೆ ಮಡಿವಾಳಯ್ಯನೆದುರಿನಲ್ಲಿ ಹೇಳಿಕೊಳ್ಳುತ್ತಿದ್ದಾರೆ. "ಬೆದರಿಸುವಸಂಗ, ಬೆಚ್ಚಿಸುವಸಂಗ, ಬಿಚ್ಚಿಸುವ ಸಂಗ ತನ್ನನೆಚ್ಚಿ, ಮೆಚ್ಚಿ, ಮುಯ್ಯಾಂತೆನೆಂದರೆ ಮೂಳವಾಡುವಸಂಗ, ಆಳಿಗೊಳಿಸುವಸಂಗ, ಅಳಲಿಸುವಸಂಗ, ಬಳಲಿಸುವಸಂಗ, ಮಡಿವಾಳತಂದೆ, ನಿಮ್ಮಕೃಪೆಯುಳ್ಳ ನಕ ಕೂಡಲ ಸಂಗಯ್ಯಂಗೆ ನಾನಂಜೆನಯ್ಯಾ. ಅದಕ್ಕೆ ಮಡಿವಾಳಯ್ಯಗಳು ಈ ಪ್ರಕಾರ ಧೈರ್ಯ ಹೇಳುತ್ತಾರೆ, "ಮಾಚಿ ತಂದೆಗಳ ಕೈಲಾಗದು ಹೋಚಿ ತಂದೆಗಳ ಕೈಲಾಗದು. ಇಚ್ಛೆಗೆಟ್ಟವನಂತೆ ಇರಲಾಗದು. ಅಚ್ಚೊತ್ತಿದಂತೆ ಇರಬೇಕು. ಕಲಿದೇವರ ಅಂಜಿಕೆಗೆ ಬೆಚ್ಚಿ ಬೆದರಿ ಓಡದಿರು. ವೀರಕಂಕಣವ ಕಟ್ಟು ಸಂಗನಬಸವಣ್ಣಾ. ಆಗ ಬಸವಣ್ಣನವರು ಧೈರ್ಯತಾಳಿ ಅಂದದ್ದೇನಂದರೆ, "ಸುಯಿಧಾನ ಸಮನಾಯಿತ್ತೆಂದು ಬೆದರಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪಡಿಪದಾರ್ಥಂಗಳು ಅವಸರಕ್ಕೆ ಒದಗಪೆಯಿದ್ದಲ್ಲಿ ಮನವಳುಕಿ ಬೆದರಿದೆನಾದೊಡೆ ನಿಮ್ಮ ಭಕ್ತರಿಗೆ ಸಲ್ಲೆನು. ಒಡವೆಸವಿದರೆ, ಒಡಲನೆ ಸಲ್ಲಿಸುವೆನು. ಕಡೆಮುಟ್ಟ

ಪೂರೈಸದಿರ್ದೆನಾದೊಡೆ ಮಡಿವಾಳ ತಂದೆಗಳ ಪಾದಸಾಕ್ಷಿಯಾಗಿ ಕೂಡಲ ಸಂಗಮದೇವರಿಗೆ ದೂರವಹೆನು.”

ಅಡಿಗೆಯು ಸಾಲದಿರಲು ಅರಮನೆಯ ಧಾನ್ಯಸಂಗ್ರಹಾಲಯದ ಅಧ್ಯಕ್ಷರಾದ ಸೊಡ್ಡಳಬಾಚರಸರನ್ನು ಕರೆಯಿಸಿ ಧಾನ್ಯ ಮೊದಲಾದ ಪದಾರ್ಥಂಗಳ ಲೆಕ್ಕ ಕೇಳಲು ಅವರು ಕರಣಿಕರಿಂದ ಲೆಕ್ಕವ ಕೇಳಿ ಬಸವರಾಜರಿಗೆ ಶ್ರುತ ಪಡಿಸಿದುದೇನಂದರೆ ಹೊಸ ಜೋಳ ೬೦ ಲಕ್ಷ ಖಂಡಗ, ಸಾವಿ ೩೦ ಲಕ್ಷ ಖಂಡಗ, ಗೋದಿ ೧೨ ಲಕ್ಷ ಖಂಡಗ, ಕಡಲೆ ೩೨ ಲಕ್ಷ ಖಂಡಗ, ಹೆಸರು ೩೦ ಲಕ್ಷ ಖಂಡಗ, ನವಣೆ,ಹಾರಕ ಮೊದಲಾದ ಧಾನ್ಯ ೫೦ ಲಕ್ಷ ಖಂಡಗ, ೧೨ ಖಂಡಗ ಮಂಡಿಗೆ, ಬೆಲ್ಲ, ದ್ರಾಕ್ಷೆ, ಸಕ್ಕರಿ, ೧೮ ಖಂಡಗ ಸುಲಿಗಡಲೆಯ ಪದಾರ್ಥ, ೨೪ ಲಕ್ಷ ಅಕಾಲದ ಮಾವಿನ ಹಣ್ಣು, ೮೦ ಖಂಡಗ ಕದಳಿ ಫಲ ಮತ್ತು ಕ್ಯಾರಬೀಜ ಮಹದಾನಿ ಸೊಡ್ಡಳನಾರೋಗಣೆಯ ಅವಸರಕ್ಕೆ ಅಳವಟ್ಟ ಸುಯಿಧಾನ ಇನಿತನವಧರಿಸಯ್ಯಾ ಸಂಗನಬಸವಣ್ಣಾ.

ಇವೆಲ್ಲ ಪದಾರ್ಥಗಳು ತೀರಿಹೋಗಲು ಬಸವಣ್ಣನವರು ಪಶ್ಚಾತ್ತಾಪದಿಂದ ನುಡಿದುದೇನಂದರೆ “ಕೈಯಲ್ಲಿ ಮುಟ್ಟಿದ ಪದಾರ್ಥ ಕೈಯಲ್ಲಿ ಐಕ್ಯ, ಕಂಗಳು ತಾಗಿದ ಪದಾರ್ಥ ಕಂಗಳೊಳಗೈಕ್ಯ, ನಾಲಿಗೆ ತಾಗಿದ ಪದಾರ್ಥ ನಾಲಿಗೆಯೊಳಗೈಕ್ಯ ನೀಡುವ ಪರಿಚಾರಕರು ಬೇಸತ್ತರಲ್ಲದೆ ಆರೋಗಣೆಯ ಮಾಡುವದೇವ ಎತ್ತಲೇನೆಂದರಿಯನು. ಬ್ರಹ್ಮಾಂಡವ ನೊಡಲೊಳಗಿರಿಸಿಕೊಂಡು ಬಂದ ದೇವಂಗೆ ಆರೋಗಣೆಯ ಮಾಡಿಸಿ ಹೆನೆಂಬ ಅಹಂಕಾರದಲ್ಲಿ ಇದ್ದೆನಾಗಿ ನಾನು ಕೆಟ್ಟ ಕೆಡನೇನೆಂಬೆನಯ್ಯಾ? ಧನಮದದಿಂದ, ಸುಯಿಧಾನದ ಮದದಿಂದ ಮಾಡಿಹೆನೆಂಬುದು ಕಡೆ ಮುಟ್ಟದೆ ಹೋಯಿತ್ತು. ಹಸ್ತ ಪರುಷದಿಂದ ಮುಟ್ಟಿ ಮಾಡಿದುದೆಲ್ಲವೂ ಅಂತರಿಸಿತ್ತು. ದೃಷ್ಟಿ ಪರುಷದಿಂದ ನೋಡಿ ಮಾಡಿಹೆನೆಂಬುದೆಲ್ಲವೂ ಕೆಟ್ಟು ಹೋಯಿತ್ತು. ವಾಕ್ಪರುಷದಿಂದ ನುಡಿದು ಮಾಡಿದುದೆಲ್ಲವೂ ವ್ಯರ್ಥವಾಯಿತ್ತು. ಮನಪರುಷದಿಂದ ಧ್ಯಾನಮಾಡಿ ನೀಡಿದ ಪದಾರ್ಥಂಗಳೆಲ್ಲವೂ ಐಕ್ಯವಾದವು. ಕೂಡಲಸಂಗಮದೇವರ ತೃಪ್ತಿಯನರಿದಿಹೆನೆಂದು ಕೆಟ್ಟೆನು. ಪ್ರಭುವಿನ ತೃಪ್ತಿಯ ತೆರಹಬಲ್ಲರೆ ಹೇಳಾ ಮಡಿವಾಳಯ್ಯ

ಆಗ ಮಡಿವಾಳ ತಂದೆಗಳು ಚೆನ್ನಬಸವಣ್ಣನವರನ್ನು ಕೇಳಿ ನೋಡೆಂದು ಆಜ್ಞಾಪಿಸಿ ನುಡಿದುದೇನಂದರೆ "ಮರುಳುಗೊಂಡೆಯಲ್ಲಾ ಬಸವಣ್ಣಾ, ನಿನಗೆ ಪಿತ್ತ ತಲೆಗೇರಿತ್ತೇ? ನೆರೆಯರಿದವರು ಮರುಳರಹ ರೆಂಬ ನಾಣ್ನುಡಿ ದಿಟವಾಯಿತ್ತು. ಜಗದಗಲ ಮೀರಿದ ದೇವಂಗೆ ಕುರುಹಿನ ಪದಾರ್ಥಂಗಳು ನಿಲಕುವವೇ? ಕಲಿದೇವರ ತೃಪ್ತಿಯನ್ನು ಚೆನ್ನಬಸವಣ್ಣ ಬಲ್ಲ ಕೇಳಿನೋಡಾ ಸಂಗನಬಸವಣ್ಣಾ

ಆ ಮೇರೆಗೆ ಬಸವ ತಂದೆಗಳು ಚೆನ್ನಬಸವಣ್ಣನ ಮರೆಹೋಗಲು ಆತನು ಬುದ್ಧಿ ಹೇಳಿದುದೇನಂದರೆ "ಅನಂತ ವರುಷದವರೆಲ್ಲರೂ ಹಿರಿಯರೆಂಬೆನೆ? ಏಳು ವರುಷದ ಹಿರಿಯ ಚಿಲ್ಲಾಳ, ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ, ಇವರು ತಮ್ಮ ಉದಾಹರಣೆಯಿಂದ ಬುದ್ಧಿ ಹೇಳುತ್ತಿರಲು ನನಗಳವೇ ಸಂಗನಬಸವಣ್ಣಾ? ಈರೇಳು ಭುವನಂಗಳನೊಳಕೊಂಡ ಮಹಾಘನಕ್ಕೆ ಸುಯಿಧಾನವ ನೀಡಿಹೆನೆಂಬ ಸ್ವಾಮಿಯ ಮರುಳತನವನೇನೆಂಬೆನು? ಕೂಡಲಚೆನ್ನಸಂಗಮದೇವರ ತೃಪ್ತಿಗೆ ನೀವು ಬೋನ ನಾನು ಪದಾರ್ಥ. ಇದರಿಂದ ಮೇಲೇನೂ ಘನವಿಲ್ಲ ಕಾಣಾ ಸಂಗನಬಸವಣ್ಣಾ.

ಆ ಮಾತು ಕೇಳಿ ಬಸವಣ್ಣನವರು ಸಂತುಷ್ಟರಾಗಿ ನುಡಿದುದೇನಂದರೆ "ಎನ್ನಕಾಯದ ಕತ್ತಲೆ ಹಿಂಗಿತ್ತು ಚೆನ್ನಬಸವಣ್ಣಾ ಇಂದು ಎನ್ನ ತನುಮನಧನಲೋಭವಳಿದು ತಳವೆಳಗಾಯಿತ್ತು ಎನ್ನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು. ಕೂಡಲಸಂಗಮದೇವರ ತೃಪ್ತಿಯ ತೆರನ ನೀನು ತೋರಿದೆಯಾಗಿ ನಾನು ಬದುಕಿದೆನು ಕಾಣಾ ಚೆನ್ನಬಸವಣ್ಣಾ, ಆ ವೇಳೆ ಚನ್ನಬಸವಣ್ಣನವರು ಪ್ರಭುವಿನ ಆಪ್ಯಾಯನಕ್ಕೆ ತಡಮಾಡುವದು ಯುಕ್ತವಲ್ಲೆಂದೆಣಿಸಿ ಬಸವಣ್ಣನೊಂದಿಗೆ ಪ್ರಭುಸನ್ನಿಧಿಗೆ ಬಂದು ಆತ್ಮಾರ್ಪಣ ಪೂರ್ವಕವಾಗಿ ಬಿನ್ನವಿಸಿದ್ದೇನಂದರೆ "ಅಂಗಲಿಂಗಕ್ಕೆ ಭಾಜನವೆಂಬರು. ಅಂಗ ಲಿಂಗಕ್ಕೆ ಭಾಜನವಲ್ಲ. ಕಾಯಗುಣಂಗಳ ಕಳೆದು, ಮಾಯಾ ಮದವ ಹಿಂಗಿಸಿ, ಮನವೆಂಬ ಘನಪರಿಯಾಣವ ಬೆಳಗಿ, ಷಡಾಧಾರ ಚಕ್ರವೆಂಬ ಅಡ್ಡಣಿಗೆಯನಿಟ್ಟು, ಸಕಲೇಂದ್ರಿಯಂಗಳೆಂಬ ಕೆಲವಟ್ಟಲನಳವಡಿಸಿ, ಜ್ಞಾನಪ್ರಕಾಶವೆಂಬ ದೀಪಸ್ತಂಭಮಂ ಬೆಳಗಿ ಸದ್ಭಕ್ತ್ಯಾನಂದವೆಂಬ ಬೋನಮಂ ಬಡಿಸಿ, ಸುಚಿತ್ತ ಸುಯಿಧಾನದಿಂದೆ ಬಸವಣ್ಣನೇ ಬೋನ ನಾನೇ ಪದಾರ್ಥವಾಗಿ ನಿಮ್ಮ

ಪರಿಯಾಣಕ್ಕೆ ವೇಧಿಸಿದೆನು. ಆರೋಗಣೆ ಮಾಡು ಕೂಡಲಚನ್ನಸಂಗಮ ದೇವಾ. ಮತ್ತು ಗುರುವೇ ಬೋನ, ಶಿಷ್ಯನೇ ಮೇಲೋಗರ, ಲಿಂಗಕ್ಕೆ ಪದಾರ್ಥವರ್ಪಿತವಯ್ಯಾ. ಘನಕ್ಕೆ ಮನವೇ ಅರ್ಪಿತ" ಘನದೊಳಗೆ ಮನವು ತಲ್ಲೀನವಾದ ಬಳಿಕ ಅರ್ಪಿಸುವ ಭಕ್ತರಾರು? ಆರೋಗಿಸುವ ದೇವರಾರು? ನಿತ್ಯ ತೃಪ್ತನು ಉಣಗಲಿತನೆಂದರೆ ಮತ್ತೊಂದನು ಅರ್ಪಿಸಲುಂಟೇ? ಬಸವಣ್ಣನೇ ಬೋನ. ನಾನೇ ಪದಾರ್ಥ. ಸುಚಿತ್ತದಿಂದ ಆರೋಗಿಸಯ್ಯಾ ಪ್ರಭುವೇ.

ಚೆನ್ನಬಸವಣ್ಣನ ಮಾತುಗಳಿಂದ ಪ್ರಭುದೇವರು ಅತ್ಯಂತ ತೃಪ್ತರಾಗಿ ನುಡಿದುದೇನಂದರೆ "ಭರಿತಬೋನ ಭರಿತಬೋನವೆಂದು ಭ್ರಮೆಗೊಂಡು ಭ್ರಮಿತರಾದರು ಲೋಕದ ಮಾನವರು. ಭರಿತಬೋನವೇ ದಿಟವಾದರೆ ಮರ್ತ್ಯದಲ್ಲಿ ಸುಳಿಯಲುಂಟೇ? ಚತುರ್ವಿಧ ಅರ್ಪಿತದೊಳಗೆ ಆವುದು ಭರಿತವೆಂಬುದನರಿಯರಾಗಿ ಗುಹೇಶ್ವರ ಲಿಂಗದಲ್ಲಿ ಭರಿತ ಬೋನದ ಅನುವು ಚೆನ್ನಬಸವಣ್ಣಂಗಾಯಿತ್ತು. ಮತ್ತು ಭಕ್ತಿಯೇ ಓಗರವಾಗಿ, ಸತ್ಯವೇ ಮೇಲೋಗರವಾಗಿ, ನಿಜತತ್ವವೇ ಸ್ವಯವಾಗಿ ಗುಹೇಶ್ವರ ಲಿಂಗಕ್ಕೆ ಇಕ್ಕಬಲ್ಲವ ಸಂಗನಬಸವಣ್ಣನಲ್ಲದಿಲ್ಲ. ಆದುದರಿಂದ ತನು ಶುದ್ಧವಾಯಿತ್ತು ಬಸವಣ್ಣಾ ಇಂದೆನ್ನ. ಮನಶುದ್ಧವಾಯಿತ್ತು ಬಸವಣ್ಣಾ ಇಂದೆನ್ನ. ಭಕ್ತಿಯುಕ್ತಿಮುಕ್ತಿಶುದ್ಧವಾಯಿತ್ತು ಬಸವಣ್ಣಾ ಇಂದೆನ್ನ ನಮ್ಮ ಗುಹೇಶ್ವರ ಲಿಂಗಕ್ಕೆ ಆದಿ ಆಧಾರವಾದೆಯಲ್ಲ ಬಸವಣ್ಣಾ ಎಂದು ಕೊಂಡಾಡಿದರು.

ಬಳಿಕ ಬಸವಣ್ಣನವರು ತಮ್ಮ ದೊಡ್ಡಸ್ತನವನ್ನು ಜರಿದುಕೊಂಡು ೧ ಲಕ್ಷ ೯೬ ಸಾವಿರ ಜಂಗಮರು ಮುನಿದು ಹೋದುದರಿಂದ ನಾನು ಹೇಗೆ ಮಾಡಲೆಂದು ಪ್ರಭುದೇವರಿಗೆ ಈ ಪ್ರಕಾರ ಅರಿಕೆ ಮಾಡಿಕೊಂಡರು. "ಚಂದ್ರನು ಅಮೃತಕರನಾದಡೇನಯ್ಯ ಒಳಗಣ ಕಳಂಕ ಬಿಡದನ್ನಕ್ಕರ? ಸೂರ್ಯನು ಮಹಾ ಪ್ರಕಾಶಮಯನಾದಡೇನಯ್ಯ ಅಸ್ತಂಗತನೆಂಬ ಕುಂದು ಬಿಡದನ್ನಕ್ಕರ? ಆನು ನಿಮ್ಮ ಕೃಪೆಯ ಹಡೆದು ಫಲವೇನಯ್ಯ. ಜಂಗಮವೆನ್ನಮೇಲೆ ಮುನಿದು ಹೋದ ಬಳಿಕ? ಕೂಡಲ ಸಂಗಮ ದೇವಯ್ಯಾ, ನಿಮ್ಮ ಜಂಗಮರು ಎನ್ನ ಮೇಲೆ ಕರುಣ ಹುಟ್ಟಿ ಬಪ್ಪಂತೆ ಮಾಡಯ್ಯಾ" ಅದಕ್ಕೆ ಪ್ರಭುದೇವರು ವೇಷಲಾಂಛನ ಧಾರಿಗಳಾದ ಜಂಗಮರನ್ನು ಈ ಪರಿಯಾಗಿ ವಿಡಂಬಿಸಿದರು.

## ಜಂಗಮರ ವಿಡಂಬನೆ

ಜಂಗಮ ಘನವೆಂಬೆನೆ ? ಜಂಗಮ ಬೇಡಿದಾಗಳೆ ಕಿರಿದಾಯಿತ್ತು. ತನುಬತ್ತಲೆಯಿದ್ದರೇನಯ್ಯ ಮನಶುಚಿಯಾಗದನ್ನಕ್ಕರ ? ಮಂಡೆ ಬೋಳಾದರೇನು ಭಾವಬಯಲಾಗದನ್ನಕ್ಕರ ? ಭಸ್ಮವ ಹೂಸಿದೊಡೇನು ಕರಣಾದಿ ಗುಣಂಗಳನೊತ್ತಿ ಮೆಟ್ಟಿ ಸುಡದನ್ನಕ್ಕರ ? ಇಂತೀ ಆಶೆಯ ವೇಷದ ಭಾಷೆಗೆ ಗುಹೇಶ್ವರ ಸಾಕ್ಷಿಯಾಗಿ ಛೀಯೆಂಬೆನು ಕಾಣಾ ಸಂಗನಬಸವಣ್ಣಾ. ಆಶೆಯೆಂಬ ಶೂಲದ ಮೇಲೆ ವೇಷವೆಂಬ ಹೆಣನ ಕುಳ್ಳಿರಿಸಿದರೆ ಮೇಲುಳ್ಳ ಹಿರಿಯರು ಹೀಗೆ ಸವೆದರು ನೋಡಾ. ಆಶೆಯ ಮುಂದಿಟ್ಟು ಕೊಂಡು ಸುಳಿವ ಹಿರಿಯರ ಕಂಡು ಗುಹೇಶ್ವರ ಲಿಂಗಕ್ಕೆ ಹೇಸಿಗೆಯಾಯಿತ್ತು ಕಾಣಾ ಸಂಗನಬಸವಣ್ಣಾ. ಆಚಾರವನರಿಯದೆ, ಕ್ರಿಯಾಚಾರವುಡುಗದೆ, ವಿಭವವಳಿಯದೆ, ತಾಪ ಮುರಿಯದೆ, ಬೆಬ್ಬನೆ ಬೆರೆವರ ಕೇಡಿಂಗೆ ನಾನು ಬೆರಗಾದೆನು ಕಾಣಾ ಗುಹೇಶ್ವರಾ. ತಮ್ಮ ತಾವರಿಯರು. ಹೇಳಿದರೆ ಕೇಳರು. ಆರರ ಹೊಲಬನೇನೆಂದರಿಯರು. ಏರಿದ ಬೆಟ್ಟವನಿಳಿಯಲರಿಯದವರನೇನೆಂಬೆನು ? ಬರಿಯ ಬಾಯಬಣ್ಣಕರೆಲ್ಲರು ಪೂಜಕರಾದರು. ಗುಹೇಶ್ವರ ಲಿಂಗದ ನಿಲವ ವೇಷಲಾಂಛನರೆತ್ತಬಲ್ಲರು ಹೇಳಾ ಸಂಗನಬಸವಣ್ಣಾ.

ಆಗ ಬಸವಣ್ಣನವರು ತಾವು ಇಷ್ಟು ದಿವಸಗಳ ವರೆಗೆ ಜಂಗಮ ದಾಸೋಹ ಮಾಡಿ ಕಡೆಗೆ ವ್ಯರ್ಥವಾಯಿತೆಂದು ಅನುಕಂಪದಿಂದ ನುಡಿದುದೇನಂದರೆ "ಪ್ರಭುವೇ, ಕಡೆಮುಟ್ಟ ಮಾಡಿದ ಲೇಸು ಒಂದು ದಿನ ಉದಾಸವ ಮಾಡಿದರೆ ವ್ಯರ್ಥವಾಗಿ ಹೋಹುದು ಕೇಳಯ್ಯ. ನಾನೆಷ್ಟು ಭಕ್ತಿಯ ಮಾಡಿದರೇನಯ್ಯ ನಿಮ್ಮ ಜಂಗಮರೆಳ್ಳನಿತುನೊಂದರೆ ಎನ್ನ ಭಕ್ತಿಯ ಅಭಿಮಾನ ಹೋಯಿತ್ತು. ಕೂಡಲಸಂಗಮದೇವಾ ನಿಮ್ಮ ಜಂಗಮರ ಮುನಿಸನ್ನಾವ ಪರಿಯಲ್ಲಿ ತಿಳಹುವೆ ಹೇಳಾ" ಆ ಮೇಲೆ ಬಸವನ ಜಂಗಮ ಭಕ್ತಿಯನ್ನು ನೋಡಿ ಪ್ರಭುದೇವರು ಜಂಗಮರನ್ನು ವಿಡಂಬಿಸಿ ನುಡಿದ ಬಗ್ಗೆ ಪಶ್ಚಾತ್ತಾಪಬಟ್ಟು ನುಡಿದುದೇನಂದರೆ "ಎಡದ ಕಾಲಿನಲೊದ್ದರೆ ಬಲದ ಕಾಲ ಹಿಡಿವುದು. ಬಲದ ಕಾಲಿನಲೊದ್ದರೆ ಎಡದಕಾಲ ಹಿಡಿವುದು. ತ್ರಾಹಿ ತ್ರಾಹಿ ತಪ್ಪೆನ್ನದು ಗುಹೇಶ್ವರನ ಜಂಗಮರನೊಡಗೊಂಡು ಬಾರಯ್ಯ ಸಂಗನಬಸವಣ್ಣಾ."

ಆ ಮೇಲೆ ಬಸವರಾಜದೇವರು ಮಹಾಶಿವಗಣಂಗಳಿಗೆ ಪೊಡಮಟ್ಟು ಬೇಡಿಕೊಂಡುದೇನಂದರೆ "ಶ್ರೋತ್ರನ ತೋತ್ರಿನಮರಿದೊತ್ತಿನೊಡನೆ ಮುನಿವುದು ನಿಮಗೆ ಗುಣವೇ ಅಯ್ಯಾ ? ನಿಮ್ಮ ಧರ್ಮದವನಾನಯ್ಯ. ಎನಗೆ ಕೃಪೆಮಾಡಿ ಕರುಣಿಸಿರಯ್ಯ. ಕೂಡಲಸಂಗಮದೇವಾ ಇಲಿಗಂಜಿ ಮನೆಯ ಸುಡುವರುಂಟೆ ? ಆನು ಭಕ್ತನಲ್ಲ. ಆನು ಯುಕ್ತನಲ್ಲ. ನೀವು ಮಾಡಿದ ಸೂತ್ರದ ಬೊಂಬೆ ನಾನಯ್ಯ. ಎನಗೆ ಬೇರೆ ಸ್ವತಂತ್ರವುಂಟೆ ? ನೀವೆನ್ನ ಮಾನಾಭಿಮಾನಕ್ಕೆ ಒಡೆಯರಾದ ಬಳಿಕ ಎನ್ನ ತಪ್ಪ ಲೆಕ್ಕಿಸದೆ ಬಿಜಯಂಗೈವುದಯ್ಯಾ ಕೂಡಲಸಂಗಮದೇವಾ. ಎಡದ ಪಾದದಲೊದ್ದರೆ ಬಲದ ಪಾದವ ಹಿಡಿವೆ. ಬಲದ ಪಾದದಲೊದ್ದರೆ ಎಡದ ಪಾದವ ಹಿಡಿವೆ. ತ್ರಾಹಿ ತ್ರಾಹಿ. ತಪ್ಪೆನ್ನದು ಕ್ಷಮೆ ನಿಮ್ಮದು ಕೂಡಲಸಂಗಮದೇವಾ, ನಿಮ್ಮ ಕರುಣದ ಕಂದ ನಾನು.

ಈ ಪ್ರಕಾರ ಬೇಡಿಕೊಳ್ಳಲು ಮಹಾಗಣಂಗಳು ಮುನಿಸ ತಿಳಿದು ಪ್ರಸನ್ನರಾಗಿ ನಿತ್ಯದಂತೆ ತೃಪ್ತರಾಗಿರಲು ಚೆನ್ನಬಸವಣ್ಣನವರು "ಭಕ್ತಿಯ ಹೊಲಬ ಮೂರು ಲೋಕದೊಳಗೆ ಬಲ್ಲವರನಾರನೂ ಕಾಣೆನು. ಬಸವಣ್ಣನು ಲಿಂಗಮುಖ ಜಂಗಮವೆಂದರಿದು ಅರ್ಚಿಸಿ ಪೂಜಿಸಿ ದಾಸೋಹವ ಮಾಡಿದನು. ಆ ಬಸವಣ್ಣನ ಭಕ್ತಿ ಪ್ರಸಾದವ ಕೊಂಡು ನಾನು ಬದುಕಿದೆನು. ಆ ಬಸವಣ್ಣನ ಭಕ್ತಿ ಪ್ರಸಾದವ ಕೊಂಡು ಪ್ರಭುದೇವರು ತೃಪ್ತರಾದರು. ಪ್ರಭುವು ತೃಪ್ತನಾಗಲು ಲಕ್ಷದ ಮೇಲೆ ೯೬ ಸಾವಿರ ಗಣಂಗಳು ತೃಪ್ತಿ ಹೊಂದಿದರು. ಆ ಗಣಂಗಳು ತೃಪ್ತಿಯಾದಲ್ಲಿ ಚರಾಚರವೆಲ್ಲ ತೃಪ್ತಿಯಾಯಿತ್ತು. ಇಲ್ಲವೆಂದು ಒಮ್ಮೆ ಬಿಜ್ಜಳರಾಯನು ತರ್ಕಿಸಲು ಕಪ್ಪೆಯ ಒಡಲೊಳಗೆ ಪ್ರಭುವಿನ ಪ್ರಸಾದವ ತೋರನೇ ಬಸವಣ್ಣನು ಕೂಡಲಚೆನ್ನಸಂಗಮದೇವಾ." ಎಂದು ಬಸವನ ಭಕ್ತಿಯನ್ನು ಕೊಂಡಾಡಿದರು. ಆ ಬಳಿಕ ಶಿವಗಣಂಗಳು ಪ್ರಭುಸನ್ನಿಧಿಗೈತಂದು ವಂದಿಸಿ ಆತನನ್ನು ಬಹುಪರಿಯಾಗಿ ಕೊಂಡಾಡಿದರು. ಈ ಪ್ರಕಾರ ಪರಸ್ಪರ ಹೊಗಳಿಕೆಯಲ್ಲಿ ಈ ಸಂಪಾದನೆಯು ಪೂರ್ತಿಗೊಳ್ಳುತ್ತದೆ.

ಈ ಸಂಪಾದನೆಯಿಂದ ನಾವು ತಿಳಿದುಕೊಳ್ಳತಕ್ಕ ಮುಖ್ಯ ಸಂಗತಿಯೆಂದರೆ, ಭಕ್ತಿ ಸತ್ಯಗಳೇ ಪರಮಾತ್ಮನ ತೃಪ್ತಿಗೆ ಮುಖ್ಯ ಸಾಧನಗಳು. ಆದರೆ ಪ್ರಸ್ಥಭೋಜನಗಳೇನೂ ಸಾಧನಗಳಲ್ಲ. ಆದರೆ ಭಕ್ತಿಯಿಲ್ಲದೆ

ಅಹಂಕಾರದಿಂದ ಮಾಡಿದುದೆಲ್ಲವೂ ವ್ಯರ್ಥವೇ ಸರಿ. ಈ ಸಂದರ್ಭದಲ್ಲಿ ನಾವು ಬಸವಣ್ಣನವರ ಮುತ್ತಿನಂತಹ ವಚನವನ್ನು ನೆನಪಿನಲ್ಲಿಡಬೇಕು. 'ಅಂಗದಲಳವಟ್ಟ ಲಿಂಗಕ್ಕೆ ಅಂಗವೇ ಭಾಜನ. ಪ್ರಾಣದಮೇಲಣ ಲಿಂಗಕ್ಕೆ ಮನವೇ ಭಾಜನ. ಅರಿವಿನ ಮೇಲಣ ಲಿಂಗಕ್ಕೆ ನಿರ್ಭಾವವೇ ಭಾಜನ. ಕೂಡಲ ಸಂಗಮದೇವಯ್ಯಾ ಪ್ರಭುದೇವರು ಆರೋಗಣೆಯ ಮಾಡುವರೆ ಭಕ್ತಿಪರಿಯಾಣವಲ್ಲದೆ ಬೇರೆ ಭಾಜನವ ಕಾಣೆನು.'

---

# ಸರ್ವಜ್ಞನ ವಚನಗಳ ಸ್ವಾರಸ್ಯ.

## (ಸಾಮಾನ್ಯ ವಿವರಣೆ)

ಲೇಖಾಂಕ ೧

ಲೇಖಕ— ಶಿವಮೂರ್ತಿ.

ಕನ್ನಡ ಸಾಹಿತ್ಯದಲ್ಲಿ ಪಂಡಿತಪಾಮರರ ಮನಸ್ಸನ್ನು ಥಟ್ಟನೆ ಆಕರ್ಷಿಸುವಲ್ಲಿ ಸರ್ವಜ್ಞನಂಥ ಲೋಕಪ್ರಿಯನಾದ ಕವಿಯು ಬೇರಾವನೂ ಇಲ್ಲವೆಂದರೆ ಹೆಚ್ಚು ತಪ್ಪಾಗಲಿಕ್ಕಿಲ್ಲ. ಭಾಷಾಪ್ರೌಢಿ. ಅಲಂಕಾರ, ವ್ಯಾಕ್ಯರಣ ರಸ, ಪ್ರತಿಭೆಗಳಿಂದ ಪಂಡಿತರನ್ನು ಬೆರಗುಗೊಳಿಸುವಂಥ ಉದ್ದಾಮ ಕವಿಗಳನೇಕರಾಗಿರಬಹುದು. ಆದರೆ ಸರ್ವಜ್ಞನು ವಿಶೇಷವಾಗಿ ಸಂಸ್ಕೃತ ಶಬ್ದಗಳನ್ನು ಪ್ರಯೋಗಿಸಿದವನಲ್ಲ. ವ್ಯಾಕರಣ, ಅಲಂಕಾರ, ಪ್ರತಿಭೆಗಳ ಕಡೆಗೆ ಅಷ್ಟೇನೂ ಗಮನಕೊಟ್ಟವನಲ್ಲ. ಲೋಕದ ಅನುಭವವನ್ನು ಮನವಣಿಯೆ ಸವಿದುಂಡು ಸಾಮಾನ್ಯ ಜನರಾಡುವ ಮನಗಂಡ ಭಾಷಾಶೈಲಿಯಲ್ಲಿಯೂ ಜನಪದದಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ ತ್ರಿಪದಿಛಂದಸ್ಸಿನಲ್ಲಿಯೂ ಒಳ್ಳೇ ಸುಗಮಸುಂದರವಾದ ಪದಗಳನ್ನು ರಚಿಸಿದ್ದಾನೆ. ಉಳಿದ ಎಷ್ಟೋ ಕಾವ್ಯಗಳನ್ನು ನಾವು ಮರೆತರೂ ಮರೆಯಬಹುದು. ಆದರೆ ಸರ್ವಜ್ಞನ ಪದಗಳನ್ನು

ಎಂದೆಂದೂ ಮರೆಯುವದು ಶಕ್ಯವಿಲ್ಲ. ನಮ್ಮ ವ್ಯವಹಾರ ಜೀವನ ದಲ್ಲಿ ಆತನ ಮುತ್ತಿನಂಥ ವಚನಗಳನ್ನು ನಾವು ಹೆಜ್ಜೆಜ್ಜೆಗೆ ನೆನೆಪಿನಲ್ಲಿ ಡಬೇಕಾಗುತ್ತದೆ. ಆದುದರಿಂದ ಆತನ ವಚನಗಳು ಅಮರವಾಗಿರುತ್ತವೆ. ಆತನ ವಚನಗಳೆಷ್ಟೋ ವ್ಯಾಕರಣ ದೃಷ್ಟಿಯಿಂದ ಅಶುದ್ಧವಾಗಿರಬಹುದು. ರಸಪುಷ್ಟಿಯು ಅವುಗಳಲ್ಲಿ ಚೆನ್ನಾಗಿ ತುಂಬಿಕೊಂಡಿರಲಿಕ್ಕಿಲ್ಲ. ಆದರೆ ಅನುಭವದ ಮಾತುಗಳನ್ನು ಸೋಸಿ ವಿಚಾರಿಸಿ ನುಡಿದಿರುವದರಿಂದ ಅವು ಹೆಚ್ಚು ಶುದ್ಧ ಹಾಗೂ ಸತ್ಯವಾದವುಗಳೆಂದೇ ತಿಳಿಯಬೇಕು. ಅಸತ್ಯವಾದ ಹಾಗೂ ಹುರುಳಿಲ್ಲದ ಮಾತನ್ನು ವ್ಯಾಕರಣ ಶುದ್ಧವಾಗಿ ಹೇಳಿದರೂ ಅದು ನಿಜವಾಗಿ ಶುದ್ಧವೆನಿಸಲಾರದು. ಆದರೆ ಸತ್ಯವಾದ ಮಾತು ವ್ಯಾಕರಣದಿಂದ ಅಶುದ್ಧವಾದರೂ ಹೃದಯಾಂತಃಕರಣದಿಂದ ಹೊರಬೀಳುವದರಿಂದ ಅದು ಶುದ್ಧವೇ. ಸರ್ವಜ್ಞನ ವಚನಗಳನ್ನೋದ ಹತ್ತಿದರೆ ಸಹಜವಾದ ಅನುಭವವೂ ಆನಂದವೂ ನಮಗುಂಟಾಗುವವು.

ಜನಪದ ಸಾಹಿತ್ಯದಂತೆ ಸರ್ವಜ್ಞನ ಪದಗಳಲ್ಲಿ ಗಂಡು ಗನ್ನಡ ಶಬ್ದಗಳೇ ವಿಶೇಷವಾಗಿರುವವಲ್ಲದೆ ಸಂಸ್ಕೃತ ಶಬ್ದಗಳಾಗಲಿ ತದ್ಭವ ಶಬ್ದಗಳಾಗಲಿ ಬಹುಕಡಿಮೆ. "ರನ್ನವಣಿ ಸರದೊಳ್ ಚೆಂಬವಳಮಂ ಕೋದಂತಿರೆ" ಎಂಬ ಮುದ್ದಣನ ಮುದ್ದು ಮಾತಿಗನುಸರಿಸಿ ಸರ್ವಜ್ಞನ ಕನ್ನಡ ಮಾತಿನ ಮಾಲೆಯೊಳಗೆ ಅಲ್ಲಲ್ಲಿ ಒಂದೊಂದು ಸಂಸ್ಕೃತ ಶಬ್ದಗಳು ಅಂದವಾಗಿ ಒಪ್ಪುತ್ತವೆ. ಸಂಸ್ಕೃತ ಶಬ್ದಗಳ ವಿಶೇಷ ಬಳಿಕೆಯಿಲ್ಲದೆ ಹೆಚ್ಚಾದ ಕನ್ನಡ ಶಬ್ದಗಳಿಂದಲೇ ಕಾವ್ಯವನ್ನು ಬರೆದ ಕವಿಯೆಂದರೆ ಸರ್ವಜ್ಞನೊಬ್ಬನೇ. ಎಷ್ಟೋ ಪ್ರಾಚೀನ ಕವಿಗಳು ಅಚ್ಚಗನ್ನಡದಲ್ಲಿಯೇ ಕಾವ್ಯ ಬರೆಯುವೆವೆಂಬ ಹೆಮ್ಮೆತೋರಿಸಿ ವಿಶೇಷವಾಗಿ ಸಂಸ್ಕೃತ ಶಬ್ದ ಗಳನ್ನು ತಮ್ಮ ಕಾವ್ಯಗಳಲ್ಲಿ ಪ್ರಯೋಗಿಸಿದ್ದಾರೆ. ಎಷ್ಟೋ ಕವಿಗಳು ಕೈಸಾಗದೆ ಸಂಸ್ಕೃತ ಶಬ್ದಗಳನ್ನು ಕೆಡಿಸಿ ತದ್ಭವಗಳನ್ನುಪಯೋಗಿಸಿದ್ದಾರೆ. ಆದರೆ ಸರ್ವಜ್ಞನು ಯಾವ ಹೆಮ್ಮೆಯೂ ಇಲ್ಲದೆ ಅಚ್ಚಗನ್ನಡದಲ್ಲಿ ಕಾವ್ಯ ಬರೆದದ್ದು ಅಭಿನಂದನೀಯವು.

ಗೋಲ್ಡ್ ಸ್ಮಿಥ್ ಕವಿಯು "ಟ್ರಾವ್ಹೆಲರ"ನ ಹಾಗೆ ಸರ್ವಜ್ಞನು ಮಲೆನಾಡು, ಬೈಲುಸೀಮೆ ಮೊದಲಾದ ಪ್ರದೇಶಗಳಲ್ಲಿ ಸಂಚರಿಸಿ ಆಯಾಯ ಜನಗಳ ನೀತಿ ನಡಾವಳಿಗಳನ್ನು ಚೆನ್ನಾಗಿ ನಿರೀಕ್ಷಿಸಿ ತನಗೆ ಕಂಡ ಕುಂದು ಕೊರತೆಗಳನ್ನು ಟೀಕಿಸುತ್ತ ತನಗೆ ಯೋಗ್ಯವೆನಿಸಿದ್ದನ್ನು

ಕೊಂಡಾಡುತ್ತ ಸಾಗಿದ್ದಾನೆ. "ನಿಸ್ಪೃಹಸ್ಯ ತೃಣಂ ಜಗತ್" ಎಂಬಂತೆ ಸರ್ವಜ್ಞನಿಗೆ ಯಾರಾರ ಭಿಡೆಭಾರಗಳೂ ಇರುವದಿಲ್ಲ. ಯಾರ ಮೇಲೆಯೂ ಆತನ ಪಕ್ಷಪಾತ ದಾಕ್ಷಿಣ್ಯಗಳಿರುವದಿಲ್ಲ.

"ನಾಯುನಿಷ್ಠುರ ದಯ್ಯಾ ದಾಕ್ಷಿಣ್ಯ ಪರನಾನಲ್ಲಯ್ಯ, ಲೋಕ ವಿರೋಧಿ. ಶರಣ ನಾನಾರಿಗೂ ಅಂಜುವವನಲ್ಲ. ಕೂಡಲಸಂಗಮದೇವರ ರಾಜತೇಜದೊಳಿಪ್ಪೆನಾಗಿ ಎಂಬ ಬಸವಣ್ಣನವರ ವಚನದಂತೆ ಸರ್ವಜ್ಞನು ನಿರ್ಭಿಡೆಯಿಂದ ಸಮಾಜದ ದೋಷಗಳನ್ನು ಖಂಡಿಸಿ ನಿಷ್ಪಕ್ಷಪಾತ ಬುದ್ಧಿಯಿಂದ ಸತ್ಯವಾದುದನ್ನು ಎತ್ತಿ ಹಿಡಿದಿದ್ದಾನೆ.

ಸರ್ವಜ್ಞನು ತನ್ನ ವಚನಗಳಲ್ಲಿ ಶಿವಶರಣರು ಪ್ರತಿಪಾದಿಸಿದ ವೀರಶೈವ ಧರ್ಮದ ವಿಶ್ವವ್ಯಾಪಕವಾದ ತತ್ವಗಳನ್ನು ಸಂಕ್ಷೇಪವಾಗಿ ಹೇಳಿದ್ದಾನೆ. ಸರ್ವಜ್ಞನ ಧಾರ್ಮಿಕ ನೈತಿಕ ಪದಗಳನ್ನು ವಿಚಾರಿಸಿ ನೋಡಿದರೆ ಆತನು ಶಿವಶರಣರ ವಚನಾಮೃತವನ್ನು ಪಾನಮಾಡಿ ಬೆಳೆದ ಕೂಸೆಂದು ಸ್ಪಷ್ಟವಾಗಿ ತೋರುವದು. ಆದರೆ ಆತನ ವೈಯಕ್ತಿಕ ವೈಶಿಷ್ಟ್ಯವೇ ಬೇರೆ. ಪಂಚತಂತ್ರ, ಭರ್ತೃಹರಿಯ ನೀತಿ ಶತಕ, ಕನ್ನಡ ನೀತಿ ಶತಕಗಳ ಪರಿಯೇ ಬೇರೆ; ಸರ್ವಜ್ಞನು ಹೇಳುವ ರೀತಿಯೇ ಬೇರೆ. ಸರ್ವಜ್ಞನು ಹೇಳುವದು ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಟ್ಟು ಬಿಡುವ ಶುಷ್ಕ ಉಪದೇಶವಲ್ಲ. ಹಸಿಯ ಗೋಡೆಗೆ ಹರಳಿಟ್ಟಂತೆ ಆತನ ಮಾತುಗಳು ನಮ್ಮ ಎದೆಯಲ್ಲಿ ನಟ್ಟು ತಟ್ಟನೆ ಆಚರಣೆಯಲ್ಲಿ ತರತಕ್ಕ ಗಂಡು ಮಾತುಗಳು. ಆತನ ವಚನಗಳು ಗಾದೆಗಳಾಗಿ ಸಣ್ಣ ದೊಡ್ಡವರ ಬಾಯಿಯಲ್ಲಿ ನಲಿದಾಡುತ್ತಿರುತ್ತವೆ. ಈತನು ಬರೆದದ್ದು ಕಥಾಕಾವ್ಯವಲ್ಲ. ಪುರಾಣವೂ ಅಲ್ಲ. ಆದರೆ ಧರ್ಮ ನೀತಿ ವ್ಯವಹಾರ ಜ್ಞಾನಗಳನ್ನು ಪ್ರತಿಪಾದಿಸುವ ಮುದ್ದು ಗ್ರಂಥವಾಗಿದೆ. ಇದಲ್ಲದೆ ಆತನ ವಚನ ಸಂಗ್ರಹವು ಒಂದು ಸಣ್ಣ ವಿಶ್ವಕೋಶದಂತಿರುವದು. ಅದರಲ್ಲಿ ಧರ್ಮ ನೀತಿಗಳ ಹೊರತಾಗಿ ಅನೇಕ ವಿಷಯಗಳೂ ಅಡಕವಾಗಿವೆ. ಕಾಲಜ್ಞಾನ, ಜೋತಿಷ್ಯ, ಶಕುನ, ಒಗಟು, ಸ್ತ್ರೀಜಾತಿ, ವೇಶ್ಯಾ ಪದ್ಧತಿ, ವೈದ್ಯ ಪದ್ಧತಿ, ಅನ್ನದೇವರು ಮುಂತಾದ ಹಲವು ಸಂಗತಿಗಳನ್ನು ಅನುಭವದಿಂದ ಹೇಳಿದ್ದಾನೆ. ಒಟ್ಟಿನ ಮೇಲೆ ಸರ್ವಜ್ಞನ ಗ್ರಂಥವು ಪ್ರತಿಯೊಬ್ಬ ಸಾಹಿತ್ಯಾಭಿಮಾನಿಯು ಯಾವಾಗಲೂ ಕಾಯ್ದಿಡುವಂತಹದಾಗಿರುವದೆಂದು ನಿರ್ವಿವಾದವಾಗಿ ಹೇಳಬಹುದು.

ಸರ್ವಜ್ಞನಂತೆ ಲೋಕ ಪ್ರೀತಿಯನ್ನು ಸಂಪಾದಿಸುವದು ಎಲ್ಲ ಸಾಹಿತಿಗಳಿಗೂ ಸಾಧ್ಯವಿಲ್ಲ. ಅಂತೆಯೇ ಸರ್ವಜ್ಞನು ಒತ್ತಟ್ಟಿಗೆ ಹೇಳಿರುವುದೇನಂದರೆ "ಎಲ್ಲ ಬಲ್ಲವರಿಲ್ಲ। ಬಲ್ಲವರು ಬಹಳಿಲ್ಲ.। ಬಲ್ಲವರಿದ್ದು ಬಲವಿಲ್ಲ ಸಾಹಿತ್ಯ। ವೆಲ್ಲರಿಗೆ ಇಲ್ಲ ಸರ್ವಜ್ಞ॥ ಸರ್ವಜ್ಞನು ಹೆಸರಿಗೆ ತಕ್ಕಂತೆ ಸರ್ವಜ್ಞನೇ ಆಗಿದ್ದರೂ ಆ ಬಗ್ಗೆ ತನಗೆ ಎಳ್ಳಷ್ಟೂ ಗರ್ವವಿಲ್ಲ. ನಿಗರ್ವವೇ ಸತ್ಯವಿಯ ಲಕ್ಷಣವೆಂಬುದು ಕೆಳಗಿನ ವಚನದಿಂದ ಗೊತ್ತಾಗುತ್ತದೆ. "ಸರ್ವಜ್ಞನೆಂಬವನು" ಗರ್ವದಿಂದಾದವನೆ ?। ಸರ್ವರೊಳಗೊಂದೊಂದು ನುಡಿಗಲಿತ ವಿದ್ಯೆಯ ಪರ್ವತವೇ ಆದ ಸರ್ವಜ್ಞ॥ ಸರ್ವಜ್ಞನು ಪ್ರಾಸವಿಲ್ಲದೆ ಬರೆಯುವ ಕಾವ್ಯಗಳನ್ನು ಈ ಪ್ರಕಾರ ಹಳಿದಿದ್ದಾನೆ. ಪ್ರಾಸವಿಲ್ಲದೆ ಪದವ। ತಾಸುಹಾಡಿದರೇನು। ಸಾಸಿವೆಯ ಎಣ್ಣೆ ಹದ ಮಾಡಿ ಕಣ್ಣಿಗೆ। ಹೂಸಿಕೊಂಡಂತೆ ಸರ್ವಜ್ಞ॥

ಸರ್ವಜ್ಞನ ಪದಗಳನ್ನು ಶ್ರೀಯುತ ಚನ್ನಪ್ಪಾ ಉತ್ತಂಗಿಯವರು "ಸರ್ವಜ್ಞನ ವಚನಗಳು" ಎಂಬ ಗ್ರಂಥದಲ್ಲಿ ಶೇಖರಿಸಿ ಪ್ರಕಟಿಸಿದ್ದಾರೆ. ಅದರಂತೆ ಶ್ರೀ ದೇಶಪಾಂಡೆ ಮನೋಹರರಾಯರು "ಸರ್ವಜ್ಞನ ಸಂದೇಶ" ಎಂಬ ಗ್ರಂಥದಲ್ಲಿ ಮುದ್ರಿಸಿ ಪ್ರಕಾಶಗೊಳಿಸಿದ್ದಾರೆ. ಆ ಬಗ್ಗೆ ಕನ್ನಡ ಸಾಹಿತಿಗಳು ಈ ಉಭಯ ಮಹಾಶಯರಿಗೂ ತುಂಬಾ ಋಣಿಯಾಗಿದ್ದಾರೆ. ಸರ್ವಜ್ಞನು ೭ ಕೋಟಿ, ೭ ಲಕ್ಷ, ೭ ಸಾವಿರದ ೭೦ ವಚನಗಳನ್ನು ರಚಿಸಿರುವನೆಂಬ ಪ್ರತೀತಿಯಿದೆ. "ಏಳು ಕೋಟಿಯೆ ಕೋಟಿ। ಏಳು ಲಕ್ಷವೆ ಲಕ್ಷ। ಏಳು ಸಾವಿರದ ಎಪ್ಪತ್ತು ವಚನಗಳ। ಹೇಳಿದನು ಕೇಳೋ ಸರ್ವಜ್ಞ॥ ಇದು ಅತಿಶಯೋಕ್ತಿಯಾಗಿರದಿದ್ದರೆ ಶ್ರೀ ಉತ್ತಂಗಿಯವರು ಸಂಗ್ರಹಿಸಿದ ಸುಮಾರು ೨೦೦೦ ವಚನಗಳು ತೀರ ಕಡಿಮೆಯೇ ಸರಿ. ಉಳಿದ ಕೋಟ್ಯಾವಧಿ ಸರ್ವಜ್ಞ ವಚನಗಳು ಎತ್ತ ಮಣ್ಣುಗೂಡಿ ಹೋದವೋ ದೇವರಿಗೇ ಗೊತ್ತು. ಇನ್ನೂ ಸಂಶೋಧನೆ ಮಾಡಿದರೆ ಆ ವಚನಗಳು ದೊರೆಯಬಹುದೇ ? ಎಂಬ ಆಶೆಯು ಕೆಲವರಿಗೆ ಹುಟ್ಟಬಹುದು. ಎರಡೆಂಭತ್ತು ಕೋಟಿ ವಚನಗಳೂ ೭ ಕೋಟಿ ಸರ್ವಜ್ಞನ ವಚನಗಳೂ ಉಪಲಬ್ಧವಿದ್ದಿದ್ದರೆ ಕನ್ನಡ ಸಾಹಿತ್ಯ ಸೃಷ್ಟಿಯೇ ಬದಲಾಗುತ್ತಿತ್ತು.

ಸರ್ವಜ್ಞನು ಅಂಬಲೂರಯೆಂಬ ಗ್ರಾಮದಲ್ಲಿ ಕುಂಬಾರ ಮಾಳಿಯೆಂಬವಳ ಉದರದಲ್ಲಿ ಮಾಸೂರ ಬಸವರಸನೆಂಬ ಆರಾಧ್ಯ ಬ್ರಾಹ್ಮ

ಣನಿಂದ ಜನ್ಮ ತಾಳಿ ಮುಂದೆ ಸದ್ಗುರುವಿನಿಂದ ವೀರಶೈವ ದೀಕ್ಷೆಯನ್ನು ಹೊಂದಿ ವಿರಕ್ತನಾಗಿ ತಂದೆತಾಯಿಗಳ ಹಂಗುಹರಿದು "ತಂದೆ ವಿಪ್ರನು ಅಲ್ಲ। ತಾಯಿ ಮಾಳಿಯು ಅಲ್ಲ। ಇಂದುಶೇಖರನ ವರದಿಂದ ಪುಟ್ಟಿದ। ಕಂದ ತಾನೆಂದ ಸರ್ವಜ್ಞ॥ ಹೀಗೆಂದು ತಾನು ಶಿವಸ್ವರೂಪಿಯಾದು ದನ್ನು ಪರ್ಯಾಯದಿಂದ ಹೇಳಿಕೊಂಡಿದ್ದಾನೆ. "ದಾಸೀ ಪುತ್ರನಾಗಲಿ। ವೇಶ್ಯಾ ಪುತ್ರನಾಗಲಿ ಶಿವದೀಕ್ಷೆ ಹೊಂದಿದ ಬಳಿಕ ಆತನನ್ನು ಶಿವಸ್ವ ರೂಪಿಯೆಂದು ವಂದಿಸಬೇಕೆಂ"ದು ಶಿವಶರಣರು ಹಾಡಿಕೊಂಡಿದ್ದಾರೆ. ಅದರಂತೆಯೇ ಸರ್ವಜ್ಞನು "ಕುಲಗೆಟ್ಟು ಶಿವನ ಮೊರೆಹೊಕ್ಕ ಋಷಿ ಗಳು। ಕುಲವಾದರಯ್ಯ ಸರ್ವಜ್ಞ" ಎಂದು ಹೇಳಿ ತಾನು ಲಿಂಗಭಕ್ತಿಯ ಬಲದಿಂದ ಕುಲಜನಾದುವನ್ನು ದೃಢಪಡಿಸಿಕೊಂಡಿದ್ದಾನೆ. ಈತನು ಸುಮಾರು ೧೭೦೦ ರಲ್ಲಿ ಆಗಿಹೋದನು. ದೊಡ್ಡವರು ಎಲ್ಲಿ ಹುಟ್ಟಿ ದರು ? ಹೇಗೆ ಹುಟ್ಟಿದರು ? ಎಂದು ಹುಟ್ಟಿದರು ? ಲಗ್ನವಾಗಿದ್ದರೋ ಇಲ್ಲವೋ ? ಇತ್ಯಾದಿ ವಿಷಯಗಳು ನಮಗೆ ಅಷ್ಟು ಮಹತ್ವವಲ್ಲ. ಆದರೆ ಅವರಲ್ಲಿ ಎಂಥ ಉದಾರ ಗುಣಗಳಿದ್ದವು ? ಅವರು ಜಗತ್ತಿಗೆ ಏನೇನು ಕಲ್ಯಾಣ ಮಾಡಿದ್ದಾರೆ ಈ ವಿಷಯಗಳು ಅತ್ಯಂತ ಮಹತ್ವ ವಾದವುಗಳು. ಆದುದರಿಂದ ಸರ್ವಜ್ಞನ ಗುಣಸ್ವಭಾವ ಮತ್ತು ಅವನು ಬರೆದ ಕಾವ್ಯದ ಮಹತ್ವ ಇವುಗಳ ಕಡೆಗೇ ನಾವು ವಿಶೇಷ ಗಮನಿಸ ಬೇಕಲ್ಲದೆ ಆತನ ಜನ್ಮ, ಕಾಲ, ದೇಶ, ಲಗ್ನ ಮೊದಲಾದ ಶುಷ್ಕವಿಷಯ ಗಳಿಗಾಗಿ ತಲೆಯೊಡೆದುಕೊಳ್ಳುವದು ಹುಚ್ಚುತನವು.

ಕಾಳಿದಾಸನು "ಕ್ವ ಸೂರ್ಯ ಪ್ರಭವೋ ವಂಶಃ ಕ್ವ ಚಾಲ್ಪ ವಿಷ ಯಾಮತಿಃ" ಎಂದು ದೀನೋಕ್ತಿಗಳನ್ನಾಡಿದಂತೆ ಸರ್ವಜ್ಞನು ವಚನಗ ಳನ್ನು ನಾನು ಮಾಡಿದೆನೆಂಬ ಹೆಮ್ಮೆಪಡದೆ ಶಿವಶರಣರ ಆಳಾಗಿ ಹೇಳಿದೆನೆಂಬ ವಿನಯವನ್ನು ತಾಳಿದ್ದಾನೆ. "ಹೇಳಲರಿಯೆನು ನಾನು। ಹೇಳಿನಲು ಹೇಳಿದೆನು। ಭಾಳಲೋಚನನ ಶರಣರ ಆಳಾಗಿ। ಹೇಳಿ ದೆನು ನೋಡ ಸರ್ವಜ್ಞನು। ಶಿವಶರಣರ ಸಂಗದಲ್ಲಿಯೇ ಈತನು ತನ್ನ ಕಾಲವನ್ನು ಕಳೆದವನಾದುದರಿಂದ ಹೀಗೆ ಹಾಡಿಕೊಂಡಿರುವನು. "ಗಂಗೆಯಾ ತಡಿ ಲೇಸು। ಮಂಗಳನ ಬಲ ಲೇಸು। ಜಂಗಮರ ನಡೆಯು ಸಲೆ ಲೇಸು ಶರಣರ। ಸಂಗವೇ ಲೇಸು ಸರ್ವಜ್ಞ॥ ಶರಣಾಗ್ರಣಿ ಯಾದ ಬಸವನ ಧ್ಯಾನ ಮಾಡಿದರೆ ಪಾಪಗಳೆಲ್ಲ ಬಯಲಾಗುವವೆಂಬ

ಸಂದರ್ಭದಲ್ಲಿ ಸರ್ವಜ್ಞನು ಹೇಳಿರುವದೇನಂದರೆ "ಬಸವನೆಂದರೆ ಪಾಪ। ದೆಸೆಗೆಟ್ಟು ಪೋಗುವದು। ಬಿಸಿಲಿಗೆ ಹಸುರೊಳಿಸೆದಿರ್ಪ ಹನಿಯಾರಿ। ಹುಸಿದು ಹೋದಂತೆ ಸರ್ವಜ್ಞ॥ ಕಾಲಜ್ಞಾನವನ್ನು ಹೇಳುವ ಸಂದರ್ಭದಲ್ಲಿ ಬಸವನಿಂದಲೇ ತನಗೆ ಜ್ಞಾನೋದಯವಾಯಿತೆಂದು ಹೇಳಿಕೊಂಡಿದ್ದಾನೆ, "ಬಸವನೆನಗೆ ನಿರೂ। ಪಿಸಿದಂಥ ಕಾಲಜ್ಞಾನ। ಭಸಿತವಿಟ್ಟು ಮರ್ತ್ಯರಿರವನು ನಾ ನಿಮ್ಮ। ಶಿಶುವಾಗಿ ಪೇಳ್ವೆ ಸರ್ವಜ್ಞ॥ ಒಟ್ಟಿನ ಮೇಲೆ ಸರ್ವಜ್ಞನು ವಿನಯಶೀಲನೂ ಶಿವಶರಣರಲ್ಲಿ ಭಕ್ತಿಭಾವವುಳ್ಳವನೂ ಆಗಿದ್ದನೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

---

# ಕರ್ನಾಟಕದಲ್ಲಿಯ ಪಾಶುಪತರು ಮತ್ತು ಶೈವರು.

**ಪ್ರೊ॥ ಕೆ ಜಿ. ಕುಂದಣಗಾರ. (ರಾಜಾರಾಮ ಕಾಲೇಜ ಕೊಲ್ಹಾಪುರ.)**

**'ದಿ ಕರ್ನಾಟಕ ಹಿಸ್ಟಾರಿಕಲ್ ರಿವ್ಯೂ' ಎಂಬ ಪತ್ರಿಕೆಯ ೧೯೩೮ ನೇ ಜನೆವರಿ ಸಂಚಿಕೆಯಲ್ಲಿಯ ಲೇಖದ ಅನುವಾದವು.**

ಪೂರ್ವಕಾಲದಲ್ಲಿ ಅನೇಕ ಧರ್ಮಗಳು ಕರ್ನಾಟಕದಲ್ಲಿ ಉದ್ಭವಿಸಿ ಹಿಂದುಸ್ತಾನ ದೇಶದ ಎಲ್ಲ ಭಾಗಗಳಲ್ಲಿ ಅವು ಹರಡಿದ್ದು ತೋರಬರುತ್ತದೆ. ಹಾಗೆಯೇ ಉತ್ತರ ದೇಶದಲ್ಲಿಯ ಕೆಲವು ಧರ್ಮಗಳು ಕರ್ನಾಟಕದಲ್ಲಿಯೂ ಆಗಮಿಸಿವೆ. ಬೌದ್ಧ, ಜೈನ, ಮತ್ತು ಕಾಶ್ಮೀರ ಶೈವ ಧರ್ಮಗಳು ಇದಕ್ಕೆ ಉದಾಹರಣೆಯಾಗಿವೆ. ಈ ವಿಷಯವನ್ನು ಕುರಿತು ಸವಿಸ್ತಾರವಾಗಿ ಈ ಲೇಖದಲ್ಲಿ ವಿವೇಚಿಸುವದು ಶಕ್ಯವಲ್ಲವಾದರೂ ವಿಜಾಪುರ ಮತ್ತು ಬೆಳಗಾವ ಜಿಲ್ಹೆಗಳಲ್ಲಿ ಈಚೆಗೆ ಉಪಲಬ್ಧವಾದ ಕೆಲವು ಶಿಲಾಶಾಸನಗಳಲ್ಲಿ ಕಂಡು ಬರುವ ಸಂಗತಿಗಳ ಮೇಲಿಂದ ಇಲ್ಲಿ ಕೆಲವು ವಿಷಯಗಳು ಹೇಳಲ್ಪಟ್ಟಿವೆ.

ಬಾಗೇವಾಡಿ ತಾಲೂಕಿನಲ್ಲಿ ಮುತ್ತಿಗಿ ಎಂಬ ಗ್ರಾಮವಿದ್ದು ಅಲ್ಲಿ ಸಂಗಮೇಶ್ವರ ದೇವಸ್ಥಾನದಲ್ಲಿಯ ಶಿಲಾಶಾಸನದಲ್ಲಿ ಆಚಾರ್ಯ

ಣನಿಂದ ಜನ್ಮ ತಾಳಿ ಮುಂದೆ ಸದ್ಗುರುವಿನಿಂದ ವೀರಶೈವ ದೀಕ್ಷೆಯನ್ನು ಹೊಂದಿ ವಿರಕ್ತನಾಗಿ ತಂದೆತಾಯಿಗಳ ಹಂಗುಹರಿದು "ತಂದೆ ವಿಪ್ರನು ಅಲ್ಲ। ತಾಯಿ ಮಾಳಿಯು ಅಲ್ಲ। ಇಂದುಶೇಖರನ ವರದಿಂದ ಹುಟ್ಟಿದ। ಕಂದ ತಾನೆಂದ ಸರ್ವಜ್ಞ॥ ಹೀಗೆಂದು ತಾನು ಶಿವಸ್ವರೂಪಿಯಾದು ದನ್ನು ಪರ್ಯಾಯದಿಂದ ಹೇಳಿಕೊಂಡಿದ್ದಾನೆ. "ದಾಸೀ ಪುತ್ರನಾಗಲಿ। ವೇಶ್ಯಾ ಪುತ್ರನಾಗಲಿ ಶಿವದೀಕ್ಷೆ ಹೊಂದಿದ ಬಳಿಕ ಆತನನ್ನು ಶಿವಸ್ವ ರೂಪಿಯೆಂದು ವಂದಿಸಬೇಕೆಂ"ದು ಶಿವಶರಣರು ಹಾಡಿಕೊಂಡಿದ್ದಾರೆ. ಅದರಂತೆಯೇ ಸರ್ವಜ್ಞನು "ಕುಲಗೆಟ್ಟು ಶಿವನ ಮೊರೆಹೊಕ್ಕ ಋಷಿ ಗಳು। ಕುಲವಾದರಯ್ಯ ಸರ್ವಜ್ಞ" ಎಂದು ಹೇಳಿ ತಾನು ಲಿಂಗಭಕ್ತಿಯ ಬಲದಿಂದ ಕುಲಜನಾದುವನ್ನು ದೃಢಪಡಿಸಿಕೊಂಡಿದ್ದಾನೆ. ಈತನು ಸುಮಾರು ೧೭೦೦ ರಲ್ಲಿ ಆಗಿಹೋದನು. ದೊಡ್ಡವರು ಎಲ್ಲಿ ಹುಟ್ಟಿದರು? ಹೇಗೆ ಹುಟ್ಟಿದರು? ಎಂದು ಹುಟ್ಟಿದರು? ಲಗ್ನವಾಗಿದ್ದರೋ ಇಲ್ಲವೋ? ಇತ್ಯಾದಿ ವಿಷಯಗಳು ನಮಗೆ ಅಷ್ಟು ಮಹತ್ವವಲ್ಲ. ಆದರೆ ಅವರಲ್ಲಿ ಎಂಥ ಉದಾರ ಗುಣಗಳಿದ್ದವು? ಅವರು ಜಗತ್ತಿಗೆ ಏನೇನು ಕಲ್ಯಾಣ ಮಾಡಿದ್ದಾರೆ ಈ ವಿಷಯಗಳು ಅತ್ಯಂತ ಮಹತ್ವ ವಾದವುಗಳು. ಆದುದರಿಂದ ಸರ್ವಜ್ಞನ ಗುಣಸ್ವಭಾವ ಮತ್ತು ಅವನು ಬರೆದ ಕಾವ್ಯದ ಮಹತ್ವ ಇವುಗಳ ಕಡೆಗೇ ನಾವು ವಿಶೇಷ ಗಮನಿಸ ಬೇಕಲ್ಲದೆ ಆತನ ಜನ್ಮ, ಕಾಲ, ದೇಶ, ಲಗ್ನ ಮೊದಲಾದ ಶುಷ್ಕವಿಷಯ ಗಳಿಗಾಗಿ ತಲೆವೊಡೆದುಕೊಳ್ಳುವದು ಹುಚ್ಚುತನವು.

ಕಾಳಿದಾಸನು "ಕ್ವ ಸೂರ್ಯ ಪ್ರಭವೋ ವಂಶಃ ಕ್ವ ಚಾಲ್ಪ ವಿಷ ಯಾಮತಿಃ" ಎಂದು ದೀನೋಕ್ತಿಗಳನ್ನಾಡಿದಂತೆ ಸರ್ವಜ್ಞನು ವಚನಗ ಳನ್ನು ನಾನು ಮಾಡಿದೆನೆಂಬ ಹೆಮ್ಮೆಪಡದೆ ಶಿವಶರಣರ ಆಳಾಗಿ ಹೇಳಿದೆನೆಂಬ ವಿನಯವನ್ನು ತಾಳಿದ್ದಾನೆ. "ಹೇಳಲರಿಯೆನು ನಾನು। ಹೇಳಿನಲು ಹೇಳಿದೆನು। ಭಾಳಲೋಚನನ ಶರಣರ ಆಳಾಗಿ। ಹೇಳಿ ದೆನು ನೋಡ ಸರ್ವಜ್ಞನು। ಶಿವಶರಣರ ಸಂಗದಲ್ಲಿಯೇ ಈತನು ತನ್ನ ಕಾಲವನ್ನು ಕಳೆದವನಾದುದರಿಂದ ಹೀಗೆ ಹಾಡಿಕೊಂಡಿರುವನು. "ಗಂಗೆಯಾ ತಡಿ ಲೇಸು। ಮಂಗಳನ ಬಲ ಲೇಸು। ಜಂಗಮರ ನಡೆಯು ಸಲೆ ಲೇಸು ಶರಣರ। ಸಂಗವೇ ಲೇಸು ಸರ್ವಜ್ಞ॥ ಶರಣಾಗ್ರಣಿ ಯಾದ ಬಸವನ ಧ್ಯಾನ ಮಾಡಿದರೆ ಪಾಪಗಳೆಲ್ಲ ಬಯಲಾಗುವವೆಂಬ

ಸಂದರ್ಭದಲ್ಲಿ ಸರ್ವಜ್ಞನು ಹೇಳುವದೇನಂದರೆ "ಬಸವನೆಂದರೆ ಪಾಪ। ದೆಸೆಗೆಟ್ಟು ಪೋಗುವದು। ಬಿಸಿಲಿಗೆ ಹಸುರೊಳೆಸೆದಿರ್ಪ ಹನಿಯಾರಿ। ಹುಸಿದು ಹೋದಂತೆ ಸರ್ವಜ್ಞ॥ ಕಾಲಜ್ಞಾನವನ್ನು ಹೇಳುವ ಸಂದರ್ಭದಲ್ಲಿ ಬಸವನಿಂದಲೇ ತನಗೆ ಜ್ಞಾನೋದಯವಾಯಿತೆಂದು ಹೇಳಿಕೊಂಡಿದ್ದಾನೆ, "ಬಸವನೆನಗೆ ನಿರೂ। ಪಿಸಿದಂಥ ಕಾಲಜ್ಞಾನ। ಭಸಿತವಿಟ್ಟು ಮರ್ತ್ಯರಿರವನು ನಾ ನಿಮ್ಗ। ಶಿಶುವಾಗಿ ಪೇಳ್ವೆ ಸರ್ವಜ್ಞ॥ ಒಟ್ಟಿನ ಮೇಲೆ ಸರ್ವಜ್ಞನು ವಿನಯಶೀಲನೂ ಶಿವಶರಣರಲ್ಲಿ ಭಕ್ತಿಭಾವವುಳ್ಳವನೂ ಆಗಿದ್ದನೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

---

# ಕರ್ನಾಟಕದಲ್ಲಿಯ ಪಾಶುಪತರು ಮತ್ತು ಶೈವರು.

ಪ್ರೊ॥ ಕೆ. ಜಿ. ಕುಂದಣಗಾರ. (ರಾಜಾರಾಮ ಕಾಲೇಜ ಕೊಲ್ಹಾಪುರ.)

**'ದಿ ಕರ್ನಾಟಕ ಹಿಸ್ಟಾರಿಕಲ್ ರಿವ್ಯೂ' ಎಂಬ ಪತ್ರಿಕೆಯ ೧೯೩೮ ನೇ ಜನೆವರಿ ಸಂಚಿಕೆಯಲ್ಲಿಯ ಲೇಖದ ಅನುವಾದವು.**

ಪೂರ್ವಕಾಲದಲ್ಲಿ ಅನೇಕ ಧರ್ಮಗಳು ಕರ್ನಾಟಕದಲ್ಲಿ ಉದ್ಭವಿಸಿ ಹಿಂದುಸ್ತಾನ ದೇಶದ ಎಲ್ಲ ಭಾಗಗಳಲ್ಲಿ ಅವು ಹರಡಿದ್ದು ತೋರಿಬರುತ್ತದೆ. ಹಾಗೆಯೇ ಉತ್ತರ ದೇಶದಲ್ಲಿಯ ಕೆಲವು ಧರ್ಮಗಳು ಕರ್ನಾಟಕದಲ್ಲಿಯೂ ಆಗಮಿಸಿವೆ. ಬೌದ್ಧ, ಜೈನ, ಮತ್ತು ಕಾಶ್ಮೀರ ಶೈವ ಧರ್ಮಗಳು ಇದಕ್ಕೆ ಉದಾಹರಣೆಯಾಗಿವೆ. ಈ ವಿಷಯನ್ನು ಕುರಿತು ಸವಿಸ್ತಾರವಾಗಿ ಈ ಲೇಖದಲ್ಲಿ ವಿವೇಚಿಸುವದು ಶಕ್ಯವಲ್ಲವಾದರೂ ವಿಜಾಪುರ ಮತ್ತು ಬೆಳಗಾವ ಜಿಲ್ಹೆಗಳಲ್ಲಿ ಈಚೆಗೆ ಉಪಲಬ್ಧವಾದ ಕೆಲವು ಶಿಲಾಶಾಸನಗಳಲ್ಲಿ ಕಂಡು ಬರುವ ಸಂಗತಿಗಳ ಮೇಲಿಂದ ಇಲ್ಲಿ ಕೆಲವು ವಿಷಯಗಳು ಹೇಳಲ್ಪಟ್ಟಿವೆ.

ಬಾಗೇವಾಡಿ ತಾಲೂಕಿನಲ್ಲಿ ಮುತ್ತಿಗಿ ಎಂಬ ಗ್ರಾಮವಿದ್ದು ಅಲ್ಲಿ ಸಂಗಮೇಶ್ವರ ದೇವಸ್ಥಾನದಲ್ಲಿಯ ಶಿಲಾಶಾಸನದಲ್ಲಿ ಆಚಾರ್ಯ

ಲಕುಲೀಶನ ಉಲ್ಲೇಖವಿದೆ. ಅದರಲ್ಲಿ ಅವನು 'ಲಾಕುಳಾಗಮ ಸುಧಾಂಭೋರಾಶಿ ತಾರಾಧಿಪ' ಎಂದು ವರ್ಣಿಸಲ್ಪಟ್ಟಿದ್ದಾನೆ. 'ಲಾಕುಳಾಗಮ' ಎಂಬ ಶಬ್ದವು ವಾಯು ಪುರಾಣ ೨೩ ನೇ ಅಧ್ಯಾಯದಲ್ಲಿ ಮತ್ತು ಲಿಂಗ ಪುರಾಣದ ೨೪ ನೇ ಅಧ್ಯಾಯದಲ್ಲಿ ಬರುತ್ತಿದೆ. ಇವುಗಳಲ್ಲಿ ಹೇಳಿರುವುದೇನಂದರೆ ಯುಗಗಳು ೨೮ ಬಾರಿ ತಿರುಗಿ ಬಂದ ಬಳಿಕ ಕೃಷ್ಣದ್ವೈಪಾಯನನ ಕಾಲದಲ್ಲಿ ವಸುದೇವನಲ್ಲಿ ವಾಸುದೇವನು ಜನಿಸುವನು ಮತ್ತು ಅವನು ಒಂದು ಸಮಾಧಿಯಲ್ಲಿದ್ದ ಮೃತದೇಹದೊಳಗಿಂದ 'ಲಕುಲೀಶ'ನೆಂಬ ಹೆಸರಿನಿಂದ ಬ್ರಹ್ಮಚಾರಿಯಾಗಿ ಅವತಾರ ಧರಿಸುವನು. ಮತ್ತು ಈ ಸಂಗತಿಯು ಭೃಗುಕಚ್ಛ (ಬಡೋಚ) ಎಂಬಲ್ಲಿ ಸಂಭವಿಸುವದು. ಮತ್ತು ಹೀಗಾದ ಸ್ಥಳವು 'ಕಾಯಾವತಾರ' ಎಂದು ಕರೆಯಲ್ಪಡುವದು. ಎಂದು ಈ ಗ್ರಂಥಗಳಲ್ಲಿದೆ. ಲಕುಲೀಶನ ಉಲ್ಲೇಖಗಳು ಉದಯಪುರದ ಉತ್ತರಕ್ಕೆ ೧೪ ಮೈಲು ದೂರವಿರುವ ಏಕಲಿಂಗಜಿ ಎಂಬಲ್ಲಿಯ 'ನಾಥ' ದೇವಾಲಯದಲ್ಲಿ (ಕ್ರಿ. ಶ. ೯೭೧) ಮತ್ತು ಮೈಸೂರ ಸಂಸ್ಥಾನ ಸೀರ್ಯ ತಾಲೂಕಿನಲ್ಲಿರುವ ಹೇಮಾವತಿಯಲ್ಲಿ (ಕ್ರಿ. ಶ. ೯೪೩) ಇರುವ ಶಿಲಾಶಾಸನ ಮತ್ತು ಶಿಕಾರೀಪುರ ತಾಲೂಕು ೧೦೭ ನೇ ಶಿಲಾಶಾಸನ (ಕ್ರಿ. ಶ. ೧೦೭೯) ಇವುಗಳಲ್ಲಿ ದೊರೆಯುತ್ತದೆ. ಮತ್ತು ೧೨೭೪ ಮತ್ತು ೧೨೯೬ ಈ ಇಸ್ವಿಗಳ ಮಧ್ಯದಲ್ಲಿ ರಚಿತವಾದ 'ಚಿಂತ್ರಿ ಪ್ರಶಸ್ತಿ' ಎಂಬ ಗ್ರಂಥದಲ್ಲಿಯೂ ದೊರೆಯುತ್ತದೆ. ಜಯಪುರ ಸಂಸ್ಥಾನದಲ್ಲಿರುವ 'ಶಿಕಾರ' ಎಂಬ ಗ್ರಾಮದಲ್ಲಿ ಹರ್ಷನಾಥ ಗುಡಿಯಲ್ಲಿರುವ ೯೫೭ನೇ ಇಸ್ವಿಯ ಶಿಲಾಶಾಸನದಲ್ಲಿ 'ವಿಶ್ವರೂಪ' ಎಂಬವನು 'ಪಂಚಾರ್ಥ ಲಾಕುಳಾಮ್ನಾಯ'ದ ಗುರುವೆಂದು ಹೇಳಲ್ಪಟ್ಟಿದ್ದಾನೆ. ಈ ಎಲ್ಲ ಆಧಾರಗಳ ಮೇಲಿಂದಲೂ ಡಾ॥ ಆರ್. ಜಿ. ಭಂಡಾರಕರರು ಪ್ರಸಿದ್ಧಿಸಿದ ಮಾಧವ ರಚಿತ 'ಸರ್ವ ದರ್ಶನ ಸಂಗ್ರಹ' ಗ್ರಂಥದಿಂದಲೂ ಪಾಶುಪತ ಮತವು 'ಲಾಕುಲಿನ್' ಎಂಬವನಿಂದ ಸ್ಥಾಪಿಸಲ್ಪಟ್ಟಿದೆ. ಎಂತಲೂ ಅವನ ಗ್ರಂಥದ ಹೆಸರು 'ಪಂಚಾರ್ಥ' ಎಂದಿರುವದೆಂತಲೂ ತಿಳಿಯಲು ಯಾವ ಸಂದೇಹವೂ ಇರುವದಿಲ್ಲ.

ಪಶುಪತಿಯ ಅವತಾರ ಪುರುಷನೆಂದು ತಿಳಿಯಲ್ಪಟ್ಟ ಈ ಲಕುಲೀಶನು ಐದು 'ಅರ್ಥ' ಗಳನ್ನು ತನ್ನ ಗ್ರಂಥದಲ್ಲಿ ವಿವೇಚಿಸುತ್ತಾನೆ. ಅವು ಯಾವವೆಂದರೆ— (೧) ಕಾರ್ಯ ಅಥವಾ ಪರಿಣಾಮ. ಇದಕ್ಕೆ 'ಮಹತ್'

ಎಂಬ ಹೆಸರು, ಮತ್ತು ಉಳಿದವು 'ಪ್ರಧಾನ' (೨) ಕಾರಣ ಅಥವಾ ಹೇತು. ಇದು ಈಶ್ವರ ಅಥವಾ ಮಹೇಶ್ವರ ಎಂದಿದ್ದು ಇದಾದರೂ ಪ್ರಧಾನವು (೩) ಯೋಗ. ಇದು ಧ್ಯಾನವು ಅಥವಾ ಓಂಕಾರದ ಜಪವು—ಚಿತ್ತವನ್ನು ಸ್ಥಿರಪಡಿಸುವದೇ ಇದರ ಮುಖ್ಯ ಉದ್ದೇಶವು (೪) ವಿಧಿ—ದಿವಸದಲ್ಲಿ ಮೂರು ಬಾರಿ ಶರೀರಕ್ಕೆಲ್ಲ ಭಸ್ಮವನ್ನು ತೊಡೆಯುವದು (೫) ದುಃಖಾಂತ ಇದು ಮೋಕ್ಷವು. ಮಾಧವನು ಪಾಶುಪತ ಮತವನ್ನು ವಿವೇಚಿಸುವಲ್ಲಿ ಈ ವಿಷಯುಗಳನ್ನು ಕುರಿತು ವಿವರಿಸಿದ್ದಾನೆ.

ಪೂರ್ವ ಕಾಲದಲ್ಲಿ ಕಾಶ್ಮೀರ ದೇಶದ ಪಂಡಿತರು ಹಿಂದುಸ್ತಾನದಲ್ಲೆಲ್ಲ ಬಹಳ ಪ್ರಸಿದ್ಧಿಯನ್ನು ಹೊಂದಿದ್ದರು. ಮುತ್ತಿಗೆಯಲ್ಲಿಯ ಶಿಲಾಶಾಸನದಲ್ಲಿ ಈ ಮತಕ್ಕೆ ಸಂಬಂಧಿಸಿದ 'ಕಾಶ್ಮಿರ ಮುನಿ' ಯನ್ನು ಹೊಗಳುವಲ್ಲಿ ವಾಣಿಯು ಆ ಮುನಿಯೊಡನೆ ವಿಜಾಪುರದಲ್ಲಿ ಇರಲು ಬಂದಳೆಂದು ಹೇಳಿದೆ. ಕಾಶ್ಮೀರ ದೇಶದಿಂದ ಕರ್ನಾಟಕಕ್ಕೆ ಈ ಮುನಿಯು ಈ ಕಾಲದಲ್ಲಿ ಬಂದಿರಬೇಕು. ಅವನ ಶಿಷ್ಯನಾದ ಕಾಳಭೈರವ ದೇವನು ಒಳ್ಳೇ ವಿವಾದ ಚತುರನೂ ವೇದಾಂತದಲ್ಲಿ ನಿಷ್ಣಾತನೂ ಆಗಿದ್ದನು. ಶಿಷ್ಯಪರಂಪರೆಯಲ್ಲಿ ಕಡೆಯವನು ಲಕುಲೀಶನು. ಅವನು ಶಿವ ತತ್ವಗಳನ್ನು ಚನ್ನಾಗಿ ಬಲ್ಲವನಾಗಿದ್ದನು. ಅವನು ಭಕ್ತಾಗ್ರಣಿಯೂ 'ಲಾಕುಳಾಗಮ' ಎಂಬ ಅಮೃತ ಸರೋವರಕ್ಕೆ ಚಂದ್ರನಾಗಿಯೂ ಇದ್ದನು. ಈ ಮತಸ್ತರು ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ್ದು, ಇವರ ಶಿಷ್ಯ ಪರಂಪರೆಯು ಆವುದೆಂದರೆ

ಭುಜಂಗದೇವ
|
ತ್ರಿಲೋಚನದೇವ
|
ಬಾಲಸೂರ್ಯಮುನಿ
|
ಕಾಶ್ಮೀರ ಪಂಡಿತದೇವ
|
ಕಾಳಭೈರವ ಪಂಡಿತದೇವ
|
ಯೋಗೀಶ್ವರ ಪಂಡಿತದೇವ
|

3

ಅಚಲೇಶ್ವರ ದೇವ ಉರ್ಫ ವರೇಶ್ವರ ದೇವ
|
ಯೋಗೀಶ್ವರ ದೇವ
|
ಲಕುಲೀಶ್ವರ ದೇವ (೧೧೪೭ ಕ್ರಿ. ಶ.)

## ಶೈವ ಮತ

ಪಾಶುಪತರೂ ಶೈವರೂ ತಾವು ಬ್ರಾಹ್ಮಣರೆಂದು ಕರೆದುಕೊಳ್ಳುತ್ತಿದ್ದು ಅವರಿಗೆ ಗೋತ್ರ, ಸೂತ್ರ, ಪ್ರವರ, ಶಾಖೆಗಳಿವೆ. ಚೀನ ದೇಶದ ಪ್ರವಾಸಿಯಾದ ಹುವೆನ್ ತ್ಸಾಂಗನು ಹೇಳಿರುವಂತೆ ಅವರು ದೇವಾಲಯಗಳಲ್ಲಿ ಪೂಜಕರಾಗಿದ್ದರು. ವಿಜಾಪುರ 'ಮ್ಯೂಝಿಯಮ್' ದಲ್ಲಿರುವ ೧೮ನೇ ಶಿಲಾಶಾಸನದಲ್ಲಿ (೧೨೭೮) ಚಂದ್ರದೇವನು ವಿಶ್ವಾಮಿತ್ರ ಗೋತ್ರದವನಾದ ಬ್ರಾಹ್ಮಣನೆಂದು ಹೇಳಲ್ಪಟ್ಟಿರುತ್ತದೆ. ಮತ್ತು ಬೆಳಗಾವಿ ಜಿಲ್ಲಾ ಕೊಕಟನೂರಲ್ಲಿರುವ ಚಂದ್ರನಾಥ ಗುಡಿಯಲ್ಲಿರುವ ಶಿಲಾಶಾಸನದಲ್ಲಿ ಮಲ್ಲಿದೇವನು 'ವಿಪ್ರರಾಜ ಕುಲದೀಪಕ' ನೆಂತಲೂ 'ಪಾರ್ವರ ಬಲ್ಲಹ' ನೆಂತಲೂ ಕರೆಯಲ್ಪಟ್ಟಿದ್ದಾನೆ.

ಶೈವರಲ್ಲಿ ಮೂರು ತತ್ವಗಳಿವೆ. ಅವು ಯಾವವೆಂದರೆ (೧) ಪತಿ-ಪರಮಾತ್ಮ (೨) ಪಶು- ಜೀವಾತ್ಮ (೩) ಪಾಶ-ಬಂಧನ. ಇವರ ಗ್ರಂಥಗಳಲ್ಲಿ ವಿದ್ಯಾ, ಕ್ರಿಯಾ, ಯೋಗ ಮತ್ತು ಚರ್ಯ ಎಂಬ ನಾಲ್ಕು ಭಾಗ ಅಥವಾ ಪಾದಗಳನ್ನು ನೂಡುವರು. ೧ನೇ ಪಾದದಲ್ಲಿ ಪಶು ಪಾಶ ಮತ್ತು ಈಶ್ವರ ಇವುಗಳ ಸ್ವರೂಪನ್ನು ವಿವೇಚಿಸುತ್ತಾರೆ. ಅದರಲ್ಲಿ ಮಂತ್ರಗಳು, ಮಂತ್ರೇಶ್ವರರು ಇವುಗಳ ಮಹತ್ವವನ್ನು ವರ್ಣಿಸಿ ಮನುಷ್ಯನ ಅಂತಿಮಸಾಧನೆಗೋಸ್ಕರ ಅವಶ್ಯವಾಗಿರುವ ದೀಕ್ಷೆಯ ವಿಷಯವಾಗಿ ಹೇಳುತ್ತಾರೆ. ಎರಡನೆಯ ಪಾದದಲ್ಲಿ ದೀಕ್ಷಾವಿಧಿಯನ್ನು ಹೇಳುತ್ತಾರೆ. ಅದರಲ್ಲಿ ಅನೇಕ ಸ್ವರೂಪಗಳೂ ಭಾಗಗಳೂ ಇವೆ. ಮೂರನೆಯ ಪಾದದಲ್ಲಿ ಧ್ಯಾನ ಅಥವಾ ಮನಸ್ಸಿನ ಏಕಾಗ್ರತೆಯನ್ನು ಕುರಿತು ವಿವೇಚಿಸುತ್ತಾರೆ. ನಾಲ್ಕನೆಯ ಪಾದದಲ್ಲಿ ಶಿಷ್ಯನು ಮಾಡತಕ್ಕ ಮತ್ತು ಮಾಡಬಾರದ ಕ್ರಿಯೆಗಳನ್ನು ಹೇಳುತ್ತಾರೆ. ಧ್ಯಾನವಿಲ್ಲದಿದ್ದರೆ ಯೋಗವು ಶಕ್ಯವಿಲ್ಲ. (ವಿಶ್ವನಾಥಾಚಾರ್ಯನ ದಶಗ್ರಂಥಿ ಮತ್ತು ಆ ಗ್ರಂಥದ ಮೇಲೆ ಕನ್ನಡದಲ್ಲಿ ಅವನ ಮಗನಾದ ವೀರಣಾರಾಧ್ಯನು ಬರೆದ ಟೀಕೆಯನ್ನು ನೋಡಿರಿ.)

ಶೈವ ಮತ್ತು ಪಾಶುಪತ ಮತಗಳಲ್ಲಿ ಲಿಂಗಪೂಜೆಯು ಇದೆ. ಶೈವ ಪದ್ಧತಿಯಲ್ಲಿ ಚರ ಮತ್ತು ಸ್ಥಿರ ಲಿಂಗಗಳ ಪೂಜೆಗಳಿವೆ. 'ಸ್ಥಾವರ ಜಂಗಮಂ ದ್ವಿವಿಧಂ' (ಕೊಕಟನೂರು ಚಂದ್ರನಾಥ ದೇವಾಲಯುದಲ್ಲಿಯ ಶಾಸನವನ್ನು ನೋಡಿರಿ ಕ್ರಿ. ಶ. ೧೨೩೫) ಪಾರಮೇಶ್ವರಾಗಮದಲ್ಲಿ "ಲಿಂಗಂ ಭವೇತ್ ಸ್ಥಿರಚರಂ ಯನ್ಮದ್ಭಕ್ತ ತನೂಧೃತಂ" ಎಂದು ಹೇಳಲ್ಪಟ್ಟಿವೆ. ಪಾಶುಪತ ಮತದ ಪ್ರಕಾರ ಭಕ್ತನು ತನ್ನ ಎಲ್ಲ ಶರೀರವನ್ನು ಭಸ್ಮೋದ್ಧೂಳಿತ ಮಾಡಿಕೊಳ್ಳಬೇಕು. ಶೈವ ಪದ್ಧತಿಯ ಪ್ರಕಾರ ಅವನು ತನ್ನ ಲಲಾಟದಲ್ಲಿ ನಿಚ್ಚಳವಾಗಿ ಭಸ್ಮಧಾರಣ ಮಾಡುತ್ತಾನೆ. 'ಲಲಾಟಪಟ್ಟ ವಿನ್ಯಸ್ತ ವಿಭೂತಿ ತತಿ' ಎಂದು ವಿಜಾಪುರ ಮ್ಯೂಜಿಯುಮ್ಮದ ೧೮ನೇ ಶಿಲಾಶಾಸನದಲ್ಲಿ ಬರೆದಿದೆ. ಶೈವರಿಗೆ ಶ್ರುತಿಗಳೂ ಶಿವಾಗಮುಗಳೂ ಆಧಾರ ಗ್ರಂಥಗಳಾಗಿವೆ. 'ಆಗ್ನೇಯಪ ಇತಿ ತ್ವಾದ್ಯ ಜಾತಾ ಸತ್ಯವತೀ ಶ್ರುತಿಃ' ಮತ್ತು 'ಶಿವಾಗಮೆ ನಿಗಮೆ ಸೋಯಮಾತ್ಯ ಸದೃಕ್ಷಃ' ಶೈವ ಧರ್ಮದ ಪ್ರಕಾರ ಶಿವನಲ್ಲಿ ಪೂರ್ಣ ಭಕ್ತಿಯನ್ನಿಟ್ಟರೆ ಮೋಕ್ಷವು ಉಂಟಾಗುವದು. "ಶಿವ ಸದ್ಭಕ್ತಿ ಭಾವನ ಹರ ಬೋಧಿತಂ" ( ವಿಜಾಪುರ ಮ್ಯೂಜಿಯುಮ್ಮದಲ್ಲಿಯ ೧೮ನೇ ಶಾಸನ ) ಲಿಂಗಾನು ಪ್ರೇಮ ಶಿವಪಥ ದೃಷ್ಟಾಂತಂ ಲಿಂಗಾವಧಾರು ಲಿಂಗಾನುಗೊಂಡಂ' ಮತ್ತು 'ಶಿವಲೋಕ ಮುತ್ತಿದ ಮೂರು ಕಂಗಳೊಳು' (ಕೊಕಟನೂರ ಚಂದ್ರನಾಥ ದೇವಾಲಯುದ ಶಿಲಾಶಾಸನ) ಶೈವರು 'ಶಿವಗಣ' ಗಳನ್ನೂ ಅವರ ಅನೇಕ ರೂಪಗಳಾದ 'ಮಹಾಗಣೇಶ್ವರ' ರನ್ನೂ ಅವರ ಶಕ್ತಿ (ಶಿವಗಣ ದೊಂದು ಸಂಗ್ರಹ ಶಕ್ತಿಯಂ) ಗಳನ್ನೂ ನಂಬುತ್ತಾರೆ.

ಕ್ರಿ. ಶ. ೧೨೭೮ ರ ಒಳಗೆ ವೀರಶೈವ ಧರ್ಮವು ಕರ್ನಾಟಕದಲ್ಲೆಲ್ಲ ಪಸರಿಸಿತ್ತು. ಆದರೂ ಜನರು ಮೊದಲಿನ ತಮ್ಮ ಶಿವಸಂಬಂಧದ ಭಾವನೆಗಳನ್ನು ಬಿಟ್ಟಿದ್ದಿಲ್ಲವೆಂದು ತೋರುತ್ತದೆ. ಯಾಕಂದರೆ ಶೈವ ಬ್ರಾಹ್ಮಣನಾದ ಮತ್ತು ಅರ್ಚಕನಾದ ಬಸವಿದೇವನೆಂಬವನು ಬಸವಣ್ಣನ ಅನುಯಾಯಿಯೂ ಶಿವಶರಣೆಯೂ ಆದ ವರದಾನಿ ಗುಡ್ಡಾದೇವಿಯ ಮೂರ್ತಿಯನ್ನು ಸ್ಥಾಪಿಸಿ ಆಕೆಯ ಪೂಜೆಯನ್ನು ಮಾಡಿದ್ದರ ಉಲ್ಲೇಖವು ವಿಜಾಪುರ ಮ್ಯೂಜಿಯುಮ್ಮ ೧೮ನೇ ನಂಬರು ಶಾಸನದಲ್ಲಿ ಬಂದಿದೆ.

ಶೈವರಲ್ಲಿಯೂ ಪಾಶುಪತರಲ್ಲಿಯೂ ಎಲ್ಲ ದೇವತೆಗಳನ್ನು ಸರಿಯಾಗಿ ಪೂಜಿಸುವ ಪದ್ಧತಿಯು ಇದ್ದುದು ತೋರುತ್ತಿದೆ. ವಿಜಾಪುರದಲ್ಲಿಯ

ಜಲಮಂಟಪದ ನೃಸಿಂಹ, ಲಕ್ಷ್ಮೀನೃಸಿಂಹ ಮತ್ತು ಮುತ್ತಗಿಯ ಲ್ಲಿಯ ಚೆನ್ನಕೇಶವ ಈ ದೇವರನ್ನು ಇವರು ಪೂಜಿಸುತ್ತಿದ್ದುದು ಕಂಡು ಬರುತ್ತಿದೆ. ಅಲ್ಲದೆ ಇಲ್ಲಿ ಆರಾಧ್ಯಬ್ರಾಹ್ಮಣರೆಂಬ ಇನ್ನೊಂದು ವರ್ಗದ ಬ್ರಾಹ್ಮಣರಿದ್ದರು. ಅವರು ಲಿಂಗ ಮತ್ತು ಯಜ್ಞೋಪವೀತಗಳೆರಡನ್ನೂ ಧರಿಸುತ್ತಿದ್ದರು. ಇವರಲ್ಲಿ ಕೆಲವರು ಹಿಂದುಗಡೆ ವೀರಶೈವ ಧರ್ಮ ವನ್ನು ಸ್ವೀಕರಿಸಿದರು. ಈ ಪಾಶುಪತರಿಗೆ ಹಿಂದಿನಿಂದ 'ಗೊರವ' ಎಂಬ ಹೆಸರು ಪ್ರಾಪ್ತವಾದದ್ದು ವಿಲಕ್ಷಣವು. ಇವರು ಶಿವ ದೇವಾಲ ಯಗಳಲ್ಲಿ ಪೂಜಕರಾಗಿ ಉಳಿದರು. ಈ ವರೆಗೂ ಅವರಿಗೆ ಗುರುಗ ಳಿದ್ದು ಅವರು ಮುಂಜೆಯನ್ನು ಮಾಡಿಕೊಂಡು ಯಜ್ಞೋಪವೀತವನ್ನು ಧರಿಸುತ್ತಾರೆ. ಮತ್ತು ದೇವಾಲಯಗಳ ಸಮೀಪದಲ್ಲಿಯೇ ವಾಸಿಸು ತ್ತಾರೆ. ಆದರೆ ಅವರ ಮೊದಲಿನ ಕ್ರಿಯೆಗಳು ನಷ್ಟವಾಗಿವೆ.

---

## ಭಕ್ತ ಜಂಗಮರು.

(ಲೇಖಕ – ಬ. ಚೆ. ಪಟ್ಟೇದ ಮು. ವಂಟಮುರಿ.)



ಭಕ್ತರು ಜಂಗಮರೆಂದು ಹೇಳುವದು ಇದು ಸ್ವಾಭಿಮಾನದಿಂದ ಪ್ರೇರಿತವಾದುದೆಂದು ಹೇಳಬಹುದು. ಆದರೂ ಬಹು ಒಳ್ಳೇದು. ಪ್ರಾಪಂಚಿಕರೆಲ್ಲರಲ್ಲಿಯೂ ಸ್ವಾಭಿಮಾನವು ಅವಶ್ಯವಾಗಿ ಬೇಕು. ಅದಿ ಲ್ಲದೆ ಅದಾವ ಲೌಕಿಕಕಾರ್ಯವೂ ನೆರವೇರದು. ಅದೇ ಮಾನವ ಪ್ರಗತಿಯ ಮೂಲ ಸೂತ್ರವು. ಆದುದರಿಂದ ಅಭಿಮಾನವಿರುವದು ಸಂತೋಷದ ಸಂಗತಿಯು. ಆದರೆ ಅದು ನಿಜವಾದ ಕೆಚ್ಚುಳ್ಳುದಿರ ಬೇಕೇ ಹೊರತು ಪೊಳ್ಳಾದುದಿರಕೂಡದು. ಜೊಳ್ಳು ಅಭಿಮಾನವು ಮಾತ್ರ ವಿನಾಶಕ್ಕೆ ಕಾರಣ. ಮಾಹೇಶ್ವರರೆಂದು ಹೇಳಿಕೊಳ್ಳುವವರೆ ಲ್ಲರು ದಿಟವಾದ ಮಾಹೇಶ್ವರರಾಗಬೇಕೆಂದೇ ಭಕ್ತರೆಲ್ಲರು ಅಂತಃಕರಣ ಪೂರ್ವಕವಾಗಿ ಅದನ್ನು ಬಯಸುವರು ಕಂಡಿರಾ!

ವೀರಶೈವ ಸಿದ್ಧಾಂತದಂತೆ ಮಾನವರಲ್ಲಿ ಭವಿ, ಭಕ್ತ ಎಂಬವೆ ರಡೇ ಜಾತಿಗಳಲ್ಲದೆ, ಭಕ್ತರಲ್ಲಿ ಮತ್ತೆ ಜಾತಿಗಳುಂಟೆ? ಅವು ಭವಿ

ಗಳಲ್ಲಿದ್ದುದರಿಂದ ಶ್ರೀ ಬಸವಣ್ಣನವರು ಅವರ ಮತವನ್ನು ದೂರ ತ್ಯಜಿಸಿ, ಸಮತಾಭಾವದ ಸತ್ಯನಿತ್ಯ ಮತಕ್ಕೆ ಅಂಟಿಕೊಂಡು, ಅದನ್ನು ಮತ್ತಿಷ್ಟು ನಿಷ್ಕಲಂಕವಾಗುವಂತೆ ಅನುಭವ ಮಂಟಪದ ದ್ವಾರವಾಗಿ ಶುದ್ಧೀಕರಿಸಿ ಕರ್ನಾಟಕದಲ್ಲೆಲ್ಲ ಹರಡಿದರೆಂಬುದು ಸುಪ್ರಸಿದ್ಧವೇ ಉಂಟು.

ಭಕ್ತಿಯು ಶ್ರದ್ಧಾದಿ ಸಮರಸಾಂತ ಷಡ್ವಿಧವಾಗಿರುವದರಿಂದ, ಭಕ್ತರಲ್ಲಿಯೂ ಆರು ಸ್ಥಲಗಳಾಗಿವೆ. ಅವು ಕ್ರಮದಿಂದ ಕೆಳಗಿನ ಸ್ಥಲಗಳನ್ನು ತಮ್ಮೊಳಗೆ ಗರ್ಭೀಕರಿಸಿಕೊಳ್ಳುತ್ತಲೇ ಹೋಗಿರುವವು. ಆದರ ಯೋಗದಿಂದ ಭಕ್ತಿಯು ಹೆಚ್ಚೆಚ್ಚು ಬಲಗೊಳ್ಳುತ್ತ ನಡೆದು, ಭಕ್ತತ್ವವು ಬರಬರುತ್ತ ಉದಾತ್ತ ಸ್ವರೂಪವನ್ನು ಹೊಂದಿ ಕೊನೆಗೆ ಪೂರ್ಣಾವಸ್ಥೆಯನ್ನು ಹೊಂದುವದು. ಇಷ್ಟೇ ಸರಿ! ಆ ಭಕ್ತಿಯ ಸ್ವರೂಪ ನಿದರ್ಶನಕ್ಕಾಗಿಯೇ ಭಕ್ತಾದಿ ಐಕ್ಯಾಂತ ಅಂಗಸ್ಥಲಗಳು ಇರುವವಲ್ಲದೆ, ಅವೇನು ಭಕ್ತರಲ್ಲೆಂಬುದನ್ನು ತೋರಿಸುವದಿಲ್ಲ. ಇವುಗಳಲ್ಲಿ ಮಾಹೇಶ್ವರನು ಎರಡನೆಯ ಸ್ಥಲದವನು. ಅವನು ತನ್ನ ಕೆಳಗಿನ ಪ್ರಾಥಮಿಕ ಭಕ್ತನಿಗಿಂತಲೂ ತುಸು ಬಲಿತ ಭಕ್ತನೇ ಹೊರತು, ತಾನು ಭಕ್ತನಲ್ಲೆಂಬುದು ಯುಕ್ತವಲ್ಲ, ವಿಹಿತವಲ್ಲ. ಇದಕ್ಕೊಂದು ಉದಾಹರಣೆಯನ್ನು ತಕ್ಕೊಳ್ಳುವಾ. ಜನತೆಯಲ್ಲಿ ಅಕ್ಷರಸ್ಥರು (ಓದುಬರಹ ಬಲ್ಲವರು), ನಿರಕ್ಷರಿಗಳು (ಓದು ಬರಹವರಿಯದವರು) ಎಂದು ಎರಡೇ ವರ್ಗಗಳನ್ನು ಮಾಡಬಹುದು. ಅಕ್ಷರಸ್ಥರಾಗಲು ಪಾಠಶಾಲೆಗಳಿಗೆ ಹೋಗಿ ಗುರುಗಳ ಬಳಿಯಲ್ಲಿ ಕಲಿಯಬೇಕಾಗುವದು. ಅಲ್ಲಿ ಬೇರೆ ಬೇರೆ ಇಯತ್ತೆಗಳಿರುವವು. ವಿದ್ಯಾರ್ಥಿಗಳಾಗಿ ಹೊಸದಾಗಿ ಪ್ರವೇಶಿಸಿದ ಬಾಲಕರು ಮೊದಲನೆಯ ಇಯತ್ತೆಯಿಂದ ಆರಂಭಿಸಿ ಕಲಿಯುತ್ತ, ಕ್ರಮವಾಗಿ ಅಲ್ಲಿಯ ಶಿಕ್ಷಣವನ್ನೆಲ್ಲ ಕೊನೆಯ ವರೆಗೆ ಹೊಂದಬೇಕಾಗುವದಷ್ಟೇ. ಆಗ ಆ ಹುಡುಗರಿಗೆ "೧ನೆಯ ಇಯತ್ತೆಯಿಂದ, ಎರಡನೆಯ ಇಯತ್ತೆಯವ,... ಆರನೆಯ ಇಯತ್ತೆಯವ" ಎಂದು ಹೇಳುವರು. ಹೀಗೆ ಅವರಲ್ಲಿ ತರಗತಿಗಳಿದ್ದರೂ ಅವರೆಲ್ಲರು ವಿದ್ಯಾರ್ಥಿಗಳೆಂಬ ಒಂದೇ ಸಂಜ್ಞೆಗೆ ಒಳಗಾಗಿರುವರಲ್ಲದೆ, ಮೇಲಿನ ಇಯತ್ತೆಯವನು 'ನಾನು ವಿದ್ಯಾರ್ಥಿಯಲ್ಲ' ಎಂದು ಭಾವಿಸಿಕೊಳ್ಳುವದು ಸಮಂಜಸವಾದುದೇ? ಒಬ್ಬನು ಹೆಚ್ಚು ಶಿಕ್ಷಣ ಪಡೆದು ಇಂದು ಮೇಲಿನ ತರಗತಿಯನ್ನು ಹೊಂದಿರಬಹುದು. ಆದರೆ ಕೆಳಗಿನ ತರಗತಿಯವನು ಕೂಡ, ಬರುಬರುತ್ತ ಮೇಲಿನ ತರ

ಗತಿಯನ್ನು ಪಡೆಯುತ್ತಾನೆಂಬ ಅರಿವು ಪ್ರತಿಯೊಬ್ಬನಿಗೆ ಇರಲಿಕ್ಕೆಬೇಕು. ಇಲ್ಲಿ ಅಹಂಕಾರಕ್ಕಾಗಲಿ ಭೇದಭಾವನೆಗೂ ಎಳ್ಳನಿತೂ ಅವಕಾಶವಿಲ್ಲ. ಯಾಕಂದರೆ ಈ ತರಗತಿಗಳೇನು ಸ್ವಾಭಾವಿಕ (ಜನ್ಮವಿಶಿಷ್ಟ) ವಾದವುಗಳಲ್ಲ. ಕೃತ್ರಿಮತನದಿಂದ (ಕಲಿಯುವದರಿಂದ) ಬಂದವುಗಳು; ಗುಣಕರ್ಮಯುಕ್ತವಾದವುಗಳು. ಆದ ಕಾರಣ ಅವರೆಲ್ಲರೂ ವಿದ್ಯಾರ್ಥಿಗಳೇ. ಅಂದರೆ ಒಂದೇ ಸಾಲಿನವರೂ ಒಂದೇ ಮಾಲೆಯ ಮಣಿಗಳೂ (ಅರ್ಥಾತ್ ಒಂದೇ ಜಾತಿಯವರು) ಎಂದು ಭಾವಿಸಿ ಸಮಾನತೆಯಿಂದ ನಡೆಯುವದೇ ಬುದ್ಧಿವಂತಿಕೆ! ಇದೇ ಮಾತು ಶಿವಭಕ್ತರಿಗೆ ಅಕ್ಷರಶಃ ಅನ್ವಯಿಸುವದೆಂಬನ್ನು ಎಲ್ಲ ವೀರಶೈವರೂ ಗಮನಿಸಬೇಕು. ಅಂಗಸ್ಥಲೀಯರಲ್ಲಿ ಮೊದಲಿಗನು ಶ್ರದ್ಧಾಭಕ್ತಿಯನ್ನು ವಹಿಸಿದರೆ, ದ್ವಿತೀಯಕನಾದ ಮಹೇಶ್ವರನಲ್ಲಿ ಅದು ನಿಷ್ಠಾಸ್ವರೂಪವನ್ನು ಹೊಂದುತ್ತದೆ. ಇದರಂತೆಯೇ ಮುಂದೆ ಐಕ್ಯನ ವರೆಗೂ ಅದು ಬಲಿಯುತ್ತಲೇ ಸಾಗುವದು.

೧. ಜಾತಿಯನ್ನೆಣಿಸುವದು — ಶಿವಭಕ್ತರಲ್ಲಿ ಜಾತಿಗಳಿಲ್ಲ. ಆದರೂ ಮಾಹೇಶ್ವರರು ಸ್ವಾರ್ಥಮೂಲಕವಾಗಿ ತಮ್ಮನ್ನು ಶ್ರದ್ಧಾ (?) ಭಕ್ತರಿಂದ ಪ್ರತ್ಯೇಕಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದು, ಜನ್ಮತಃ ತಮ್ಮದೊಂದು ಜಾತಿ ಇರುವದೆಂದು ಸ್ಥಾಪಿಸಲು ಹೆಣಗುತ್ತಾರೆ. ಇದಕ್ಕೆ ನಿದರ್ಶನವೆಂದರೆ ತಮ್ಮ ಕನ್ನೆಯರನ್ನು ಇತರರಿಗೆ ಕೊಡದಿರುವದೇ. ಭವಿಗಳೆಂದೆಣಿಸುವ ಬ್ರಾಹ್ಮಣರಲ್ಲಿ ಕೂಡ ಈ ನಡಾವಳಿಯಿಲ್ಲ. ವೈದಿಕರ ಹೆಣ್ಣು ಗೃಹಸ್ಥರಿಗೆ ಕೊಡುವ ರೂಢಿಯು ಅವರಲ್ಲಿ ನಿರಾತಂಕವಾಗಿ ಯಾವಾಗಲೂ ನಡೆದು ಬಂದಿದೆ. ಮುಂದೆ ಕಾಯಕಭೇದದಿಂದ ಜನರು ಒಳಪಂಗಡಗಳನ್ನು ಕಲ್ಪಿಸುತ್ತ ಅವರೊಡನೆ ಸಂಬಂಧತನ ಮಾಡಲಿಕ್ಕೆ ಒಪ್ಪದಾದರು. ಆದರೂ ಅನುಲೋಮ ವಿವಾಹಗಳು ಎಂದಾದರೂ ಕಂಡುಬರುತ್ತವೆ. ಪ್ರತಿಲೋಮಗಳು ಮಾತ್ರ ಇದ್ದಿಲ್ಲ. ಈಗ ಅವಕ್ಕೂ ಪ್ರಾಥಮಿಕರು ಮುಂದಾಗಿರುವರು. ಹೀಗಾದರೆ ಯೋಗ್ಯ ಮನೆತನಗಳು ದೊರೆಯುವದಿಲ್ಲೆಂದಾಗಲಿ ತಕ್ಕ ಕನ್ನಿಕೆಯರು ಸಿಗುವದಿಲ್ಲೆಂದಾಗಲಿ ಈಗಿರುವ ಕೃತ್ರಿಮ ತೊಂದರೆಯು ಅದೆಷ್ಟೋ ಮಟ್ಟಿಗೆ ದೂರಾಗುವದಲ್ಲದೆ, ಧರ್ಮತತ್ವ ಪಾಲನೆಯೂ ಘಟಿಸಿದಂತಾಗುವದು. ಕೆಳಗಿನ ವಚನಗಳನ್ನು ಎಲ್ಲರೂ ಮುಖ್ಯವಾಗಿ ಮಾಹೇಶ್ವರರು ಗಮನಿಸತಕ್ಕದ್ದು.

(೧) 'ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು. ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬರು. ಅವರ ಭಕ್ತರೆಂತೆಂಬೆ? ಯುಕ್ತರೆಂತೆಂಬೆ? ಕೂಡಲಸಂಗಮದೇವಾ! ಹೊಲತಿ ಶುದ್ಧನೀರು ಮಿಂದಂತಾಯಿತ್ತು'

(೨) 'ಆವ ಕುಲದವನಾದರೇನು? ಶಿವಲಿಂಗವಿದ್ದವನೇ ಕುಲಜ! ಕುಲವನರಸುವರೇ ಶರಣರಲ್ಲಿ ಜಾತಿ ಸಂಕರವಾದ ಬಳಿಕ? 'ಉಮಾ ಮಾತಾ ಪಿತಾ ರುದ್ರ ಈಶ್ವರಃ ಕುಲಮೇವಚ' ಎಂದುದಾಗಿ. ಒಕ್ಕುದ ನುಂಬೆ, ಅವರಲ್ಲಿ ಕೂಸ ಕೊಡುವೆ. ಕೂಡಲಸಂಗಮದೇವಾ ನಂಬುವೆ ನಿಮ್ಮ ಶರಣರನು.'

೨. ಅಹಂಕಾರಕ್ಕೆ ಇಂಬುಗೊಡುವದು-ಮಾಹೇಶ್ವರರು 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂದು ವ್ಯರ್ಥವಾಗಿ ಹೇಳಿಕೊಳ್ಳುವವರನ್ನೇ ಅನುಕರಿಸಿದರು. ಗುಣವಿಹೀನರಾದ ಯಾರಿಗೂ ಬರೀ ಲಾಂಛನವಾಗಲಿ ವಯಸ್ಸಾಗಲಿ ಎಂದೂ ಪೂಜ್ಯತೆಯನ್ನು ಕೊಡಲಾರವು. 'ಗುಣಾಃ ಪೂಜಾಸ್ಥಾನಂ, ನ ಚ ಲಿಂಗಂ ನ ಚ ವಯಃ' ಎಂಬುದು ಸಿದ್ಧಾಂತ ವಾಕ್ಯವು. ಸುಮ್ಮ ಸುಮ್ಮನೆ ಪೂಜ್ಯತೆ ದೊರೆಯಲಾರದು. ಕಣ್ಣಿಗೆ ಬಲು ಅಂದವಾಗಿದ್ದರೂ ನಿರ್ಗಂಧವಾದ ಮುತ್ತುಗದ ಹೂವನ್ನು ಆದಾರು ಲೆಕ್ಕಿಸುವರು! ಗುರುತ್ವವೇನೂ ಸಾಧಾರಣವಾದುದಲ್ಲ. ಅದಕ್ಕೆ ತಕ್ಕ ಗುಣಕರ್ಮಗಳು ಅವಶ್ಯವಾಗಿ ಬೇಕು. ಸದ್ಗುಣ ಸತ್ಕ್ರಿಯಾವಂತರಾಗಿ, ವಿದ್ಯಾಯುತರಾಗಿ, ಭಕ್ತಾನುಗ್ರಹ ಸಮರ್ಥರಾಗಿ, ಸಂಸ್ಕಾರವಿಧಾನ ಪ್ರಾಜ್ಞರಾಗಿ, ಲೌಕಿಕಾಚಾರ ಸಂಸ್ಕೃತಿಯುಕ್ತರಾಗಿ ಪ್ರತಿಷ್ಠೆಯನ್ನು ಪಡೆಯದಿದ್ದರೆ, ಅದೆಂತು ಶ್ರೇಷ್ಠತೆಯು ಪ್ರಾಪ್ತವಾಗುವದು? ಇದನ್ನು ಮರೆತು ಬರೀ ಅಯ್ಯಾಚಾರ ಸಂಸ್ಕಾರದಿಂದಲೇ ತಾವು ಪೂಜ್ಯರಾಗುವೆವೆಂದು ಊಹಿಸಿದರು. ಹಾಗು ತಮ್ಮನ್ನು ನಂಬಿದವರನ್ನಾದರೂ ಹಾಗೆಯೇ ಮಾಡಿದರು. ಈಗ ನಡೆದುದನ್ನು ನೋಡಿದರೆ, ಅಯ್ಯಾಚಾರ ಹೊಂದಿದ ವಟುಗಳು ಕೂಡಲೆ ಗದ್ದಿಗೆಯನ್ನೇರಿ ಪಾದೋದಕ ಪ್ರಸಾದವೀಯಲಿಕ್ಕೆ ಓಡಾಡುತ್ತಾರೆ. ಆ ಯೋಗ್ಯತೆಯೂ ವಂದನೀಯತೆಯೂ ತತ್ಕ್ಷಣವೇ ಹಿಂಬಾಲಿಸುವವಂತೆ! ಅವರ ಹಸ್ತಸ್ಪರ್ಶದಿಂದಲೇ ಎಲ್ಲವೂ ಪವಿ

ತ್ರವಾಗುದಂತೆ! ಆವರು ಅಕ್ಷರಶತ್ರುಗಳೂ ಅದೆಂತಹ ನಡತೆಯುವರೂ ಇದ್ದರೂ ಕೂಡ, ಇಷ್ಟೆಲ್ಲ ಮಹಿಮೆಯು ಅವರಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾಗುವದಂತೆ ನೋಡಿರಿ. ಇದೆಂತಹ ವಿಪರೀತವೂ ಅಜ್ಞಾನ ಮೂಲ ಭಾವಿಕತನವೂ ಆಗಿರುವದು. ಪ್ರಮಥರು ಬೋಧಿಸಿದ ಈ ಅಹಂಕಾರ ಆತ್ಮಸ್ತುತಿನಿರಾಕರಣ ಪರವಾದ ವಚನಗಳನ್ನು ಚಿತ್ತೈಸಿರಿ.

(೧) 'ನಾ ನೀ ಎಂಬ ಅಹಂಕಾರ ತಲೆಗೇರಿದಲ್ಲಿ ಆಟಮಾಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು. ಬಿರುಗಾಳಿ ಹುಟ್ಟಲೊಡನೆ ಜ್ಞಾನ ಜ್ಯೋತಿ ಕೆಟ್ಟಿತ್ತು. ಜ್ಞಾನಜ್ಯೋತಿ ಕೆಡಲೊಡನೆ ಬಲು ಬಲ್ಲಿದರೆಂಬ ಅರುಹಿರಿಯರೆಲ್ಲರು ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಗುಹೇಶ್ವರಾ'

(೨) 'ಮದ್ಯಮಾಂಸ ಮುಟ್ಟೆವೆಂಬಿರಿ. ನೀವು ಕೇಳಿರೆ! ಮದ್ಯವ ಲ್ಲವೇನು ಅಷ್ಟಮದಂಗಳು? ಇವನತಿಗಳೆದಾತನೇ ಗುಹೇಶ್ವರಲಿಂಗ ದಲ್ಲಿ ಲಿಂಗೈಕ್ಯನು'

(೩) 'ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯ ನಿಮ್ಮ ಧರ್ಮ..... ಕೂಡಲಸಂಗಮದೇವಾ'

(೪) 'ಆನು ಭಕ್ತನು ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ, ನಿಮಗಾನು ದ್ರೋಹಿಯಯ್ಯ. ಕೂಡಲಸಂಗಮದೇವಾ ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯ'

(೫) 'ನಾ ಘನ ನಾ ಘನ ಎಂಬ ಹಿರಿಯರುಂಟೇ ಜಗದೊಳಗೆ? ......ಹಿರಿದು ಕಿರಿದೆಂಬವಡಗಿದರೆ ಆತನೇ ಶರಣ! ಗುಹೇಶ್ವರಾ'

೩. ಭಿಕ್ಷಾವೃತ್ತಿಗೆ ಮನಸೋತದ್ದು.—ಅಯ್ಯಾಚಾರ ಕಾಲದಲ್ಲಿ ಸಂಸ್ಕಾರಿಗೆ ಗುರುವು ಜೋಳಿಗೆಯನ್ನು ಕರುಣಿಸುತ್ತಾನೆಂಬದು ಸರಿ! ಆದರೆ ಅದರ ನಿಜವಾದ ಉದ್ದೇಶವನ್ನಾರೂ ನೆನೆಯುವದಿಲ್ಲ. ಇದೂ ಅಲ್ಲದೆ ತಿರುಗಿ ಅನೇಕರು 'ಇದೊಂದು ತಮ್ಮ ಹೊಟ್ಟೆ ತುಂಬಿಕೊಳ್ಳಲಿಕ್ಕೂ ಭಕ್ತರಿಂದ ದಾನ ಸ್ವೀಕರಿಸಲಿಕ್ಕೂ ಸಾಧನವಾಯಿತು' ಎಂದೇ ತಿಳಿಯು ವರು. ಹಾಗು ಅವರು ಉಪಜೀವನದ ಸಲುವಾಗಿ ಬೇರೆ ಯಾವ ಕಾಯಕವನ್ನೂ ಮಾಡಲಿಕ್ಕೆ ಹವಣಿಸುವದಿಲ್ಲ. 'ಎಲ್ಲಕ್ಕೆ ಹುಲ್ಲು ಹಗು ರದು! ಹುಲ್ಲಿಂದಂ ಹಗುರದಲ್ತೆ ಬೂರಲದರಳಿ॥ ಹುಲ್ಲಿಂ ಬೂರಲ

ಕಿಂದಂ। ನಿಲ್ಲದೆ ಎಲ್ಲರಲಿ ಬೇಡು ವಾತನೆ ಹಗರೂ ॥೧॥ ಎಂಬುದನ್ನು ಅವರು ಗಮನಿಸುವದೇ ಇಲ್ಲ. ತಮಗೆ ಬೇಕಾದದ್ದನ್ನು ಬೇಡಿ ಭಕ್ತರನ್ನು ಪಿನಾಕಾರಣ ಪೀಡಿಸುವರು. ತಮ್ಮ ಆಶೆ ಆಕಾಂಕ್ಷೆಗಳ ಪರಿಪೂರ್ಣತೆಗೆಲ್ಲ ಭಿಕ್ಷೆಯೊಂದೇ ದೊಡ್ಡ ಆಧಾರವೆಂದು ನೆರೆನಂಬುವರು. ಇದು ದೇವರಲ್ಲಿ ದೊಡ್ಡ ಅಪರಾಧಮಾಡಿದಂತಾಗುವದೆಂಬ ಕಲ್ಪನೆಯು ಇವರ ಕನಸು ಮನಸುಗಳಲ್ಲಿ ಎಂದೂ ಬರುವದಿಲ್ಲ. ಭಿಕ್ಷೆಯು ನಿಷಿದ್ಧವೆಂಬ ಬಗ್ಗೆ ವಚನ ಶಾಸ್ತ್ರವು ಏನು ಹೇಳುತ್ತದೆ ನೋಡಿರಿ !

೧ ಬೇಡುವವ ಭಕ್ತನಲ್ಲ, ಜಂಗಮನಲ್ಲ.

೨ ಧೃತಿಗೆಟ್ಟು ಅನ್ಯರನು ಬೇಡದಂತೆ ಎನ್ನ ಸಲಹಯ್ಯ ಕೂಡಲ ಸಂಗಮದೇವಾ.

೩ ಛಲಬೇಕು ಶರಣಂಗೆ ಪರಧನವ ನೊಲ್ಲೆನೆಂಬ .. ಇತ್ಯಾದಿ.

ಶಿವಭಕ್ತರು ಯಾಚಿಸುವದನ್ನು ಬಿಡುವುದಲ್ಲದೆ, ತಾವು ಸತ್ಕಾಯಕದಿಂದ ಸಂಪಾದಿಸಿದುದನ್ನೇ ಅನ್ಯರಿಗೆ ಕೊಡಲು ಹವಣಿಸುತ್ತಾರೆ. "ಪರೋಪಕಾರಾರ್ಥಮಿದಂ ಶರೀರಂ" ಮತ್ತು "ಪಾಪಾಯ ಪರಪೀಡನಂ" ಎಂಬ ತತ್ವಗಳನ್ನು ಅವರು ಒಳಿತಾಗಿ ಬಲ್ಲರು. "ಕಾಗೆಯೊಂದಗುಳ ಕಂಡರೆ ಕರೆಯದೇ ತನ್ನ ಬಳಗವೆಲ್ಲವನು! ಕೋಳಿಯೊಂದು ಗುಟುಕ ಕಂಡರೆ ಕರೆಯದೆ ತನ್ನ ಕುಲವನೆಲ್ಲವನು! ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರಕಷ್ಟ ಕಾಣಾ ಕೂಡಲ ಸಂಗಮದೇವಾ" ಎಂದು ಅವರಿಗೆ ಪ್ರಮಥರ ಬೋಧೆ ಇರುವದು.

೪. ಅತ್ಯಾಶೆಗೊಳಗಾದರು- ದುಡಿಯದೆ ಬೇಡಿಕೊಳ್ಳುವದರಿಂದ ಮಾತ್ರವೇ ತಮಗೆ ಕಮ್ಮಗೆ ಸಿಗುವದನ್ನು ಕಂಡು, ಈ ವರ್ಗದವರ ಆಶೆ ಬೆಳೆಯಹತ್ತಿ ಅದರ ಪರಿಣಾಮವು ದುರಾಶೆಯೊಳಗಾಯಿತು. ಮಠ ಕಟ್ಟಿಸುವದಾದರೆ ಭಿಕ್ಷೆ, ಮದುವೆ ಮಾಡುವದಾದರೆ ಭಿಕ್ಷೆ, ಅಯ್ಯಾಚಾರ ಗೊಳಿಸುವದಾದರೆ ಭಿಕ್ಷೆ, ಯಾತ್ರೆಗೆ ಹೋಗುವದಾದರೆ ಭಿಕ್ಷೆ, ಮೈಮೇಲೆ ಅರಿವೆ ಅಂಚಡಿಗಳಿಲ್ಲವಾದರೆ ಭಿಕ್ಷೆ, ಹೊಟ್ಟೆಗೆ ಕಾಳುಕಡಿ ಬೇಕಾದರೆ ಭಿಕ್ಷೆ, ಹಿಟ್ಟಿನ ಭಿಕ್ಷೆ, ರೊಟ್ಟಿಯ ಭಿಕ್ಷೆ, ಅಕ್ಕಿಯ ಭಿಕ್ಷೆ, ಹೀಗೆ ಬಹುವಿಧದಿಂದ ಕೇವಲ ಪರೋಪಜೀವಿಗಳಾಗಿ ಸಮಾಜದ ರಕ್ತವನ್ನು ಶೋಷಿಸುವದಕ್ಕೆ ಎಷ್ಟು ಹಿಂದೆ ಮುಂದೆ ನೋಡದವರಾಗಿರುವರು. ತಾವು ಮಾತ್ರ ಇತರ ಸಾಮಾಜಿಕರ ಬಗ್ಗೆ ದೊಡ್ಡ ಮನಸ್ಸು

ತಾಳಿ, ಯತ್ಕಿಂಚಿತವೂ ಉಪಯೋಗಕ್ಕೆ ಬೀಳುವಂತೆಯೇ ಇಲ್ಲ. ಪರೋಪಕಾರ ತತ್ವಕ್ಕೆ ಇವರಲ್ಲಿ ಪೂರ್ಣ ಬಹಿಷ್ಕಾರವೆಂದರೂ ಅತಿಶಯೋಕ್ತಿಯಾಗದು. ಪ್ರಸಂಗದಲ್ಲಿ ಮುಂದಾಗಿಯೇ ಗೊತ್ತುಮಾಡಿಕೊಂಡು ಆ ಮೇಲೆಯೇ ಕಾರ್ಯಕ್ಕೆ ಆರಂಭ! ಪುರಾಣ ಪ್ರವಚನ ಕಥಾಕೀರ್ತನ ನಡಿಸಿದರೂ ಕೊಡಿರಿ. ಲಿಂಗಧಾರಣ ಶಿವದೀಕ್ಷಾದಿ ಯಾವ ಧಾರ್ಮಿಕ ಸಂಸ್ಕಾರ ಮಾಡಿದರೂ ಕೊಡಿರಿ. ಪಾಠ ಹೇಳಿರೆಂದರೂ ಕೊಡಿರಿ. ಮಂತ್ರೋಪದೇಶ ಮಾಡಿರೆಂದರೂ ಕೊಡಿರಿ. ಊಟಕ್ಕೆ ಬರ್‍ರೆಂದರೂ ಕೊಡಿರಿ. ಹುಟ್ಟಿದರೂ ಕೊಡಿರಿ. ಸತ್ತರೂ ಕೊಡಿರಿ. ಇತ್ಯಾದಿ ಅನೇಕ ರೀತಿಯಿಂದ ಸೆಳೆಯುವದೊಂದೇ ಇವರ ಕಾರ್ಯ! ಆಗ ಇದ್ದುಳ್ಳವರೂ ಬಡವರೂ ಎಂಬ ಯಾವ ತಾರತಮ್ಯವನ್ನು ನೋಡುವದಿಲ್ಲ. ಮೇಲಾಗಿ ಬಡವರ ಮತ್ತೇ ಹೆಚ್ಚು ಕಾಟ! "ಭಕ್ತರು ಗುರು ಲಿಂಗ ಜಂಗಮ ಸೇವೆ ಮಾಡಬೇಕು" ಎಂಬ ಧರ್ಮಾಜ್ಞೆಯ ಲಾಭವನ್ನು ಒಳ್ಳೇ ಧೂರ್ತತನದಿಂದ ಉಪಯೋಗಿಸಿ ಕೊಂಡರು. ಇವರು ನಿಜವಾಗಿ ತಮ್ಮ ಕರ್ತವ್ಯವನ್ನು ಸ್ಮರಿಸಿ ನಿರಾಶೆ ವಹಿಸಿ ಭಕ್ತೋದ್ಧಾರಕ್ಕೆ ತಮ್ಮನ್ನು ಮೀಸಲಾಗಿರಿಸುತ್ತಿದ್ದರೆ, ಮೇಲೆ ವರ್ಣಿಸಿದುದಷ್ಟೇ ಏಕೆ? ಇನ್ನೂ ಬೇಕಾದದ್ದು ಮಾಡಲಿಕ್ಕೂ ಕೊಡಲಿಕ್ಕೂ ಸಮಾಜವು ಆನಂದದಿಂದ ಸಿದ್ಧವಾಗುತ್ತಿತ್ತು! "ಬೇಡಲಾಗದು ಜಂಗಮ" ಎಂಬ ತತ್ವವನ್ನೇ ಇವರು ಅರಿಯರು. ಇವರು ಇದನ್ನು ಪಾಲಿಸಿದರೆ "ಬೇಡಿಸಿಕೊಳ್ಳಲಾಗದು ಭಕ್ತನು" ಎಂಬ ತತ್ವವು ತಾನೇ ಬಳಿಕೆಯಲ್ಲಿ ಬರುವದು. ಇವರ ಯೋಗಕ್ಷೇಮವನ್ನೆಲ್ಲ ಭಕ್ತರು ತಾವಾಗಿಯೇ ವಹಿಸುವರು. ಅಷ್ಟೊಂದು ಬುದ್ಧಿಯು ಅವರಿಗೆ ಹುಟ್ಟುವದೇ ಕಷ್ಟ! ಅಂತೇ ಈಗ ಅವರ ಕೃತಿಯೆಲ್ಲ ವಿಪರೀತವಾಗಿ ತೋರುತ್ತಿರುವದು.

ಆಶೆಯು ಕೆಡಕು, ಅದನ್ನು ತೊರೆಯಬೇಕು; ಎಂಬ ಬಗ್ಗೆ ವಚನ ಶಾಸ್ತ್ರವು ಹೇಳುವದೇನಂದರೆ: – (೧) ಎಲೆ ಎಲೆ ಮಾನವಾ ಅಳಿಯಾಶೆ ಬೇಡೆಲೊ. (೨) ಎನ್ನ ಮನದ ದುರಾಶೆಯ ಬಿಡಿಸಿ, ನಿಮ್ಮತ್ತ ತೋರಾ. (೩) ಆಶೆಯುಳ್ಳಾತನೊಬ್ಬರಾಧೀನದಲ್ಲಿರುವನು. ಇತ್ಯಾದಿ. ಇದೇ ಮೇರೆಗೆ "ಆಶೆಯಿಂದಲೇ ಗಾಸಿ" "ಅಹಂಕಾರ ಆಶೆಗಳು ಅನೀತಿಯ ಅಪ್ಪರು." "ಆಶೆಗಿಂತ ಕಿರಿದಿಲ್ಲ-ನಿರಾಶೆಗಿಂತ ಹಿರಿದಿಲ್ಲ" ಎಂಬಿವು ಗಾದೆಯ ಮಾತುಗಳು. "ಆಶಾಯಾಃ ಪರಮಂ ದುಃಖಂ ನಿರಾಶಾಯಾಃ ಪರಮಂ

ಸುಖಂ" ಎಂಬುದು ಸುಭಾಷಿತ. ಇವನ್ನೆಲ್ಲ ಲಕ್ಷ್ಯಕ್ಕೆ ತಂದು ಕಡೆಗೆ ದುರಾಶೆಗಾದರೂ ಒಳಗಾಗಬಾರದೆಂದು ಮಾಹೇಶ್ವರರಿಗೆ ವಿಜ್ಞಾಪನೆ.

೫ ಧರ್ಮವಳಿದು ದಾಂಭಿಕತೆ ಬೆಳೆಯಿತು.—"ಅಹಿಂಸಾ ಸತ್ಯ ಮಸ್ತೇಯಂ, ಬ್ರಹ್ಮಚರ್ಯಂ ದಯಾಕ್ಷಮಾ। ದಾನಂ ಪೂಜಾ ಜಪೋ ಧ್ಯಾನಂ, ಇತಿ ಧರ್ಮಸ್ಯ ಸಂಗ್ರಹಃ" ಎಂದು ಉಪದೇಶಿಸುವ ವರ್ಗದವರೇ ಪ್ರತಿಯಾಗಿ, ಹಿಂಸಾ, ಅಸತ್ಯ, ಪರಧನಾಪಹಾರ, ಪರವಧೂ ಸೇವನೆ, ನಿರ್ದಯ, ಕ್ರೋಧಾಂಧತೆ, ಪ್ರತಿಗ್ರಹ, ಸ್ವಾರ್ಥಪೂಜೆ, ದುರ್ವಿಷಯಜಪ, ದುರ್ಬಲ ಘಾತಧ್ಯಾನ, ಈ ಹತ್ತು ತೆರದಿಂದ ವಿರುದ್ಧವಾಗಿ ಆಚರಿಸಹತ್ತಿದ ಮೇಲೆ ಉಳಿಯಿತೇನು? ಬೇಲಿ ಪೊಲನೆಲ್ಲಂ ಮೆದ್ದೊಡೆ ಕಾವರಾರ್" ಈ ರೀತಿ ಧಾರ್ಮಿಕತೆಯು ರಸಾತಳಕ್ಕೆ ಹೋಗಿ, ದಾಂಭಿಕತೆಯ ಭೂತವು ಥೈಮಾನ ನಡಿಸಿದೆ. ಬಹಿರಂಗದ ವೇಷ ಭೂಷಾದಿಗಳೇ ಅಳತೆಗೆಟ್ಟಿವೆ. ಇಂತಹರ ಕೈಯೊಳಗಿಂದ ಭಾವಿಕ ಅಜ್ಞ ಸಮಾಜವನ್ನು ದೇವರೇ ಕಾಯಬೇಕು! ಇರಲಿ. ಇನ್ನು ಈ ವಚನಗಳನ್ನು ಪರಿಶೀಲಿಸಿರಿ.

"ಆಡಿದರೇನು? ಹಾಡಿದರೇನು? ತ್ರಿವಿಧದಾಸೋಹವಿಲ್ಲದನ್ನಕ್ಕ!"
"ಅವರ ನಡೆಯೊಂದು, ನುಡಿಯೊಂದು ಆದರೆ, ಶಿವಾಚಾರಕ್ಕೆ ಸಲ್ಲರಯ್ಯ"
"ಸದಾಚಾರ ಸದ್ಭಕ್ತಿ ಇಲ್ಲದರನೊಲ್ಲನಯ್ಯ ಕೂಡಲಸಂಗಮದೇವಾ."

ಈ ಮುಂತಾದ ಅತ್ಯುತ್ತಮ ವಚನಗಳಿಗೆ ಮಾಹೇಶ್ವರರು ಕಿವಿಗೊಡುವರೇ?

ಸಾರಾಂಶ— ಸಾಂಪ್ರತಕಾಲದಲ್ಲಿ ವೀರಶೈವ ಸಮಾಜದ ಸಿಂಹಾವಲೋಕನ ಮಾಡಿದರೆ, ಶ್ರದ್ಧಾ ಭಕ್ತರು ಭೃತ್ಯಭಾವದಿಂದಿದ್ದು, ಉಳಿದ ಲಿಂಗಾಂಗಿಗಳನ್ನು ಶಿವಭಾವನೆಯಿಂದ ಕಂಡು, ವಿನಯ ಸೇವೆ ದಯೆ ದಾನಧರ್ಮಾದಿ ಗುಣಗಳನ್ನು ಕಾಲಪರಿಸ್ಥಿತ್ಯನುರೂಪವಾಗಿ ಶಕ್ಯವಿದ್ದಷ್ಟು ಸ್ವೀಕರಿಸಿ, ತುಸುವಾದರೂ ಉದ್ಧಾರ ಮಾರ್ಗದ ಒಲವನ್ನು ಹಿಡಿದು ನಡೆಯುವದು ಕಂಡುಬರುತ್ತದೆ. ಆದರೆ ಮಾಹೇಶ್ವರರಾದ ಅಯ್ಯನವರುಗಳು "ನಾವು ಶ್ರೇಷ್ಠರು ಗುರುಗಳು" ಎಂದು ಹೆಮ್ಮೆಯನ್ನು ತೊಟ್ಟು ಅಧಃಪತನಕ್ಕೆ ಎಡೆಯಾಗುತ್ತಿರುವರು. ಪ್ರಾಥಮಿಕ ಭಕ್ತರು ಕಾಯಕದಿಂದ ಧನಸಂಪಾದಿಸಿ, ದಯೆವಿಡಿದು ದಾನಧರ್ಮ ಪರೋಪಕಾರಾ

ದಿಗಳಿಗೆ ಕಿಂಚಿತ್ತಾದರೂ ಆಶ್ರಯಕೊಡುತ್ತಾರೆ. ಆದರೆ ಮಾಹೇಶ್ವರರು ಉಪಜೀವನೆಗಾಗಿ "ಭಿಕ್ಷೆಬೇಡುವದು, ದಾನವನ್ನು ಗ್ರಹಿಸುವದು, ಇವೇ ತಮ್ಮ ಜನ್ಮಸಿದ್ಧಹಕ್ಕು (ಕಾಯಕ)" ಎಂದು ಹೇಳಿಕೊಳ್ಳುತ್ತ, ಕುಟುಂಬ ಪೋಷಣ ಮಾಡಿಕೊಳ್ಳುವದಲ್ಲಿ ನಿಮಗ್ನರಾಗಿರುವರು.

ಆದರೆ ಇನ್ನೂ ಕಾಲವು ಮೀರಿಲ್ಲ; ಮಾಹೇಶ್ವರರು ಎಚ್ಚರಾಗಬೇಕು. ಇಷ್ಟೊಂದು ಹೇಳುವ ಕಾರಣವೇನಂದರೆ-- ವೀರಶೈವ ಸಮಾಜದ ಅಳಿವು ಉಳಿವುಗಳು ನಿಮ್ಮನ್ನೇ ಅವಲಂಬಿಸಿವೆ. ಆದ ಕಾರಣ ನೀವು ನಾಶವಾಗಿ ಬಂಗಾರದಂತಹ ವೀರಶೈವ ಮತವನ್ನೂ ಸಮಾಜವನ್ನೂ ಕೆಡಿಸಬೇಡಿರೆಂಬುದೇ ಕೊನೆಯ ಬೇಡಿಕೆ! ಶ್ರೀ.ಬಸವಣ್ಣನವರು "ನ್ಯಾಯ ನಿಷ್ಠುರ ದಾಕ್ಷಿಣ್ಯಪರ ನಾನಲ್ಲ, ಲೋಕ ವಿರೋಧಿ ಶರಣನು ಆರಾರಿಗೂ ಅಂಜುವವನಲ್ಲ, ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ' ಎಂದ ನುಡಿದಿದ್ದಾರೆ. ಅದರಂತೆಯೇ ಸದೋಷಿಗಳಾದ ಶಿವ ಭಕ್ತರನ್ನು ಕಂಡು ಕೆಳಗಿನಂತೆ ಬುದ್ಧಿವಾದ ಹೇಳಿದ್ದಾರೆ.

೧. ಆಪ್ಯಾಯನಕ್ಕೆ ನೀಡುವೆ. ಲಾಂಛನಕ್ಕೆ ಶರಣೆಂಬೆ. ಅದರೆ ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆ.

೨. ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯನು. ಲಿಂಗವಂತನು ಲಿಂಗವಂತಂಗೆ ಬುದ್ಧಿಯ ಹೇಳುವಲ್ಲಿ ಅವರ ಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕಲ್ಲ. ಲಿಂಗ ಭಕ್ತನು ಲಿಂಗಪಥವ ಹೇಳಿದರೆ, ಮಚ್ಚರಿಸುವವರ ಮೆಚ್ಚನು ನಮ್ಮ ಕೂಡಲಸಂಗಮದೇವ.

ಸೂಚನೆ:— ಇದರೊಳಗಿನ ಆರೋಪಗಳು ಬಹುಸಂಖ್ಯಾಕರಾದ ಮಾಹೇಶ್ವರರ ಸಾಮಾನ್ಯ ನಡಾವಳಿಯನ್ನನುಲಕ್ಷಿಸಿ ಮಾಡಲ್ಪಟ್ಟಿರುವವೇ ವಿನಾ, ಸರ್ವರಿಗೂ ಅಲ್ಲ. ಮಾಹೇಶ್ವರರಲ್ಲಿ ಉಪಯುಕ್ತ ಕಾರ್ಯ ಮಾಡುತ್ತಲಿರುವವರು ಅನೇಕರು ಇದ್ದಾರೆ.

---

# ವೀರಶೈವ ವಾಙ್ಮಯಾವತಾರ.

(ಡಾ. ಚಿಲುಕೂರು ನಾರಾಯಣರಾವ್ ಇವರ ಲೇಖದ ವಿಮರ್ಶೆ.)



(ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು.)

ಈ ವಿವರವೆಲ್ಲಾ ಶ್ರೀಕರ ಭಾಷ್ಯದಲ್ಲಿ ವಿವರಿಸಲ್ಪಡಲಿಲ್ಲ. ಈ ವಿವರಣವು ಎಂದಿನಿಂದ ಬರುತ್ತಿದೆಯೋ ಹೇಳಲಿಕ್ಕೆ ಆಧಾರಗಳಿಲ್ಲ. ಶಿವ ತತ್ವಸಾರವೆಂಬ ಗ್ರಂಥವು ಮಲ್ಲಿಕಾರ್ಜ್ಜುನ ಪಂಡಿತಾರಾಧ್ಯಕೃತವೇ ಆದರೆ ಆ ಗ್ರಂಥದಲ್ಲಿ ಇದು ಕೊಂಚ ಮಟ್ಟಿಗೆ ಸೂಚಿತವಾಗಿದೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಬಸವೇಶ್ವರನಿಗಿಂತಲೂ ವೃದ್ಧನಾಗಿ ಆತನಿಗೆ ಸಮಕಾಲಿಕನಾಗಿದ್ದನೆಂದು ಪಾಲ್ಕುರಿಕೆ ಸೋಮನಾಥನ ಗ್ರಂಥಗಳಿಂದ ತಿಳಿಯ ಬರುತ್ತದೆ. ಆದರೂ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವತತ್ವಸಾರವನ್ನು ಬರೆಯಲಿಲ್ಲವೆಂದೇ ನನ್ನ ಅಭಿಪ್ರಾಯ. ಸೋಮನಾಥನು ತೆಲುಗಿನಲ್ಲಿ ಮಹಾಕವಿ. ಆ ಭಾಷೆಯಲ್ಲಿ ಅವನು ಬಸವಪುರಾಣ, ಪಂಡಿತಾರಾಧ್ಯಚರಿತ್ರ, ಎಂಬ ಮಹಾ ಗ್ರಂಥಗಳನ್ನೇ ಅಲ್ಲದೇ ಇನ್ನೂ ಅನೇಕ ಕೃತಿಗಳನ್ನು ರಚಿಸಿದ್ದಾನೆ. ಅವನ ಪಂಡಿತಾರಾಧ್ಯ ಚರಿತ್ರದಲ್ಲಿ ಶಿವ ತತ್ವ ಸಾರವೆಲ್ಲಾ ಪ್ರತ್ಯಕ್ಷವೂ ಸೇರಿದೆ. ಸೋಮನಾಥನಂತಹ ಮಹಾತ್ಮರಿಗೆ ಇಂತಹ ಗ್ರಂಥಚೌರ್ಯವನ್ನು ಆಪಾದಿಸುವದು ನ್ಯಾಯವಲ್ಲ. ಪಂಡಿತಾರಾಧ್ಯನು ಶಿವತತ್ವಸಾರವನ್ನು ರಚಿಸಿದನೆಂದು ಸೋಮನಾಥನು ಹೇಳಿರುವುದೇನೋ ಸತ್ಯವೇ. ಆದರೂ ತಾನೇ ತನ್ನ ಗ್ರಂಥದಿಂದ ಕೆಲವು ಭಾಗಗಳನ್ನು ತೆಗೆದು ಪಂಡಿತಾರಾಧ್ಯನ ಹೆಸರಿನಿಂದ ಪ್ರಕಟಿಸಿರಬಹುದೆಂದು ನನಗೆ ತೋರುತ್ತದೆ. ಅರ್ವಾಚೀನ ವೀರಶೈವ ಸಿದ್ಧಾಂತವೆಲ್ಲಾ ಸೋಮನಾಥನ ಪಂಡಿತಾರಾಧ್ಯ ಚರಿತ್ರದಲ್ಲಿ ಸಂಪೂರ್ಣವಾಗಿ ವಿವರಿಸಲ್ಪಟ್ಟಿರುವುದರಿಂದ ಅವನ ಕಾಲಕ್ಕೆ ಒಂದು ಸ್ಪಷ್ಟ ರೂಪವನ್ನು ಹೊಂದುತ್ತಿರುವುದನ್ನು ಅವನು ಒಂದೆಡೆಗೆ ಸೇರಿಸಿ ಉಪಯೋಗಿಸಿಕೊಂಡಿದ್ದಾನೆಂದು ಹೇಳುವುದೇ ಸರಿಯೆಂದು ನನ್ನ ಅಭಿಪ್ರಾಯ.

ಮೇಲೆ ಸೂಚಿಸಲ್ಪಟ್ಟಿದ್ದೆಲ್ಲಾ ಸಂಪ್ರದಾಯವಾಗಿ ಬರುತ್ತಿರುವುದಕ್ಕೆ ವಿರುದ್ಧವಾಗಿದೆಯೆಂದು ನನಗೆ ಗೊತ್ತುಂಟು. ವೀರಶೈವ ಸಿದ್ಧಾಂತವು ಬಸವನಿಗಿಂತಲೂ ಪೂರ್ವದಲ್ಲಿಯೇ ಇದ್ದಿತೆಂದು ಕೆಲವರೂ, ಅದು

ಬಸವೇಶ್ವರೋಪಜ್ಞನೇ ಎಂದು ಕೆಲವರೂ, ಹೇಳುತ್ತಾರೆ. ಬಸವನಿಗೆ ಪೂರ್ವದಲ್ಲಿ ಈಯರ್ವಾಚೀನರೂಪದಿಂದ ವೀರಶೈವವು ಇತ್ತೆಂಬುದಕ್ಕೆ ಯಾವ ಆಧಾರವೂ ಇಲ್ಲ. ಮತ್ತೆ ಬಸವೇಶ್ವರನು ಕೇವಲ ಭಕ್ತನೇ ಅಲ್ಲದೆ ಮಹಾ ಸಿದ್ಧಾಂತ ಸ್ಥಾಪಕನೂ ಎಂಬುವುದಕ್ಕೆ ಆಧಾರಗಳಿಲ್ಲ. ಬಸವೇಶ್ವರನು ರಚಿಸಿದ ಸಿದ್ಧಾಂತ ಗ್ರಂಥಗಳು ಯಾವವೂ ದೊರೆತಿಲ್ಲ. ಅವನು ರಚಿಸಿದನೆಂದು ಹೇಳಲ್ಪಡುವ ಷಟ್‌ಸ್ಥಲ ವಚನ, ಶಿಖಾ ರತ್ನವಚನ, ಕಾಲಜ್ಞಾನ ವಚನ, ಎಂಬುವವು ವಚನರೂಪವಾಗಿವೆ. ಮಂತ್ರಗೋಪನವು ಹಾಡಿನ ರೂಪದಿಂದಿವೆ. ವಚನಗಳೆಂಬ ಹೆಸರೇ ಹೊರತು ಅವು ಕೂಡಾ ಹಾಡುಗಳೇ ಎಂದೆನ್ನಬಹುದು. ಈ ಗ್ರಂಥ ಗಳನ್ನು ಬಸವೇಶ್ವರನೇ ರಚಿಸಿದ್ದಾನೋ ಅವನ ಹೆಸರನ್ನಿಟ್ಟು ಈಚೆ ಯವರು ರಚಿಸಿದ್ದಾರೋ ಹೇಳಲಸಾಧ್ಯವಾಗಿದೆ. ಒಂದು ವೇಳೆ ಬಸ ವನೇ ಅವುಗಳನ್ನು ರಚಿಸಿದ್ದರೂ, ಅವು ವೀರಶೈವ ಸಿದ್ಧಾನ್ತವನ್ನು ಬೋಧಿ ಸುವ ವಚನಗಳಾಗದೆ, ತಮಿಳ ಶೈವ ನಾಯನಾರ್ಗಳ ಹಾಡುಗಳ ಹಾಗೆ ಅತಿನಿಶಿತ ಭಕ್ತಿಯನ್ನು ತೋರಿಸುವ ಶಿವನಿಗೆ ಆತ್ಮಾರ್ಪಣವನ್ನು ಮಾಡುವ ಹೃದಯ ಪರಿತಾಪವನ್ನು ಪ್ರಕಟಿಸುವ, ಶಿವಸಾಮರಸ್ಯವನ್ನು ಅರ್ಥಿಸುವ ಮಹಾವಚನ ರೂಪವನ್ನು ಹೊಂದಿವೆ. ಅದರಿಂದ ಬಸವೇಶ್ವರನು ದಕ್ಷಿಣ ದೇಶದಲ್ಲಿ ಚಿರಕಾಲಾನುಗತವಾಗಿ ಬರುತ್ತಿರುವ ಶೈವಸಂಪ್ರದಾಯವನ್ನು ಪುನರುಜ್ಜೀವನಗೊಳಿಸಿದವನೇ ಹೊರತು ಪ್ರತ್ಯೇಕ ಸಿದ್ಧಾಂತಸ್ಥಾಪನಾ ಚಾರ್ಯನ ಹಾಗೆ ಕಾಣಬರುವುದಿಲ್ಲ. ಪಾಲ್ಕುರಿಕೆ ಸೋಮನಾಥನು ಬಸ ವನ ಸಮಕಾಲಿಕನೆಂದು ಹೇಳಿದ ಅನೇಕ ಶೈವಭಕ್ತರುಗಳ ಹೆಸರಿ ನಿಂದಲೂ ಅನೇಕ ವಚನಗಳೂ, ಹಾಡುಗಳೂ ಹೊರಟಿವೆ. ಚನ್ನಬ ಸವನು ಷಟ್‌ಸ್ಥಲವಚನ, ಕರಣಹಸುಗೆ, ಮಿಶ್ರಾರ್ಪಣ, ಪದಮಂತ್ರ ಗೋಪ್ಯ, ಮಂತ್ರಗೋಪ್ಯ, ಕಾಲಜ್ಞಾನ, ರುದ್ರಭಾರತದ ಸೃಷ್ಟಿ ಎಂಬ ದನ್ನೂ, ಪ್ರಭುದೇವನು ಷಟ್‌ಸ್ಥಲಜ್ಞಾನಚಾರಿತ್ರ, ಶೂನ್ಯಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯ ವಚನ, ಬೆಡಗಿನ ವಚನ' ಮಂತ್ರಮಹಾತ್ಮ್ಯೆ, ಕಾಲಜ್ಞಾನದ ವಚನ, ಎಂಬುದನ್ನು ಮಡಿವಾಳ ಮಾಚಯ್ಯನು ವಚನ ಗಳನ್ನು, ಒಂದು ಕಾಲಜ್ಞಾನವನ್ನು, ಸಿದ್ಧರಾಮನು ವಚನಗಳನ್ನು, ಮಿಶ್ರ ಸ್ತೋತ್ರದ ತ್ರಿವಿದಿ, ಬಸವಸ್ತೋತ್ರದತ್ರಿವಿಧಿ, ಅಷ್ಟಾವರಣಸ್ತೋತ್ರದ ತ್ರಿವಿಧಿ, ಮಂತ್ರಗೋಪ್ಯ, ಕಾಲಜ್ಞಾನಗಳನ್ನು, ತೋಂಡಗೂಳ ಕೇಶಿ ರಾಜನು ಷಡಕ್ಷರ ಕಂದವನ್ನು, ಸೊಡ್ಡಳ ಬಾಚರಸನು ವಚನಗಳನ್ನು

ಒಂದು ಕಾಲಜ್ಞಾನವನ್ನು, ಮಹಾದೇವಿಯಕ್ಕ ವಚನಗಳನ್ನು, ಯೋಗಾಂಗತ್ರಿವಿಧಿಯನ್ನು, ಸೃಷ್ಟಿಯ ವಚನವನ್ನು ಘಟ್ಟಿವಾಳಯ್ಯ ವಚನಗಳನ್ನು ಕಾಲಜ್ಞಾನವನ್ನು ರಚಿಸಿದ್ದಾರಂತೆ. ಮೋಳಿಗೆಯ ಮಾದಯ್ಯ, ಮಹಾದೇವಿ, ಅಯ್ದಕ್ಕಿಯ ಮಾರಯ್ಯ, ಅಂಬಿಗರ ಚೌಡಯ್ಯ, ಕೋಲ ಶಾಂತಯ್ಯ, ನುಲಿಯ ಚಂದಯ್ಯ, ಅಜಗಣ್ಣ, ನಿಜಗುರುದೇವ, ಅಮುಗಿದೇವಯ್ಯ, ಕಲಿದೇವಯ್ಯ, ಗಜೇಶಮಸಣಯ್ಯ, ಸಿಮ್ಮಲಿಗೆಯ ಚೆನ್ನಯ್ಯ, ಮನುಮುನಿ ಗುಮ್ಮಟದೇವ, ಇವರ ಹೆಸರಿನಿಂದ ವಚನಗಳಿವೆ. ಮೈದುನ ರಾಮಯ್ಯ ಗೀತಿಗಳನ್ನು, ನೀಲಮ್ಮ ಪ್ರಸಾದ ಸಂಪಾದನೆಯನ್ನು ಒಂದು ಕಾಲಜ್ಞಾನವನ್ನು, ಶೀಲವಂತಯ್ಯ, ಆತ್ಮಲಿಂಗ ಪ್ರಣವ ಸಂಯೋಗ ಸ್ಥಲದ ತ್ರಿವಿಧಿಯನ್ನು, ಮರುಳದೇವನು ಒಂದು ಕಂದವನ್ನು, ಒಂದು ವಚನವನ್ನು ಬರೆದಿದ್ದಾರಂತೆ. ಇನ್ನೂ ಜೇಡರದಾಸಿಮಯ್ಯ, ಮೆರೆಮಿಂಡಯ್ಯ, ಒಬ್ಬ ಬಾಚಯ್ಯ, ಏಕೇಶ್ವರದ ಕೇತಯ್ಯ, ಆದಯ್ಯ, ಹಾವಿನ ಹಾಳ ಕಲ್ಲಯ್ಯ, ಮಾದರ ದೂಳಯ್ಯ, ಬಾಹೂರ ಬೊಮ್ಮಣ್ಣ, ಪ್ರಸಾದಿ ಭೋಗಣ್ಣ, ಅರಿವಿನ ಮಾರಿ ತಂದೆ, ಮನಸಂದಮಾರಿ ತಂದೆ, ನಗೆಯ ಮಾರಿತಂದೆ, ಕಲ್ಯಾಣದ ವಚನ ಭಂಡಾರಿ ಶಾಂತರಸ, ಡಕ್ಕೆಯ ಬೊಮ್ಮಣ್ಣ, ನಗರದ ಬೊಮ್ಮಣ್ಣ, ಅವಸರದ ಕೇರಣ್ಣ, ತುರುಗಾಯಿ ರಾಮಣ್ಣ, ದಾಸೋಹದ ಸಂಗಣ್ಣ, ಗುಪ್ತ ಮಂಚಣ್ಣ, ಸುಂಕದ ಬಂಕಣ್ಣ, ಬಹುರೂಪಿಚೌಡಯ್ಯ, ಮುಂತಾದವರು ಕೂಡ ವಚನಗಳನ್ನು ಬರೆದಿದ್ದಾರೆ. ಇವರೆಲ್ಲರೂ ಬಸವನ ಸಮಕಾಲಿಕರೆಂದೂ, ಮಹಾಮಹಿಮವಂತರೆಂದೂ, ಪಾಲ್ಕುರಿಕೆಯ ಸೋಮನಾಥನು ಅವರ ಮಹಿಮಾಸೂಚಕವಾದ ಕಥೆಗಳನ್ನು ಸೇರಿಸಿ ಬರೆದಿದ್ದಾನೆ. ಅವರು ಮಹಾಭಕ್ತರೆಂದೇ ಅವನು ಹೇಳಿದ್ದಾನೇ ಹೊರತು, ಪಂಡಿತಾರಾಧ್ಯರನ್ನು ಕುರಿತು ಹೇಳಿದ ಹಾಗೆ ಅವರು ಕವಿಗಳೆಂದಾಗಲಿ, ವಚನಕಾರರೆಂದಾಗಲಿ ಹೇಳಲಿಲ್ಲ. ಇವರು ರಚಿಸಿದರೆಂದು ಹೇಳಲ್ಪಡುವ ಆಯಾ ಗ್ರಂಥಗಳೆಲ್ಲಾ ಪಾಲ್ಕುರಿಕೆಯ ಸೋಮನಾಥನಿಗೆ ತರುವಾಯ ಹುಟ್ಟಿವೆಯೆಂದೂ, ಶೈವಭಕ್ತರಾದ ಕವಿಗಳು ಅವುಗಳಿಗೆ ಪ್ರಸಿದ್ಧಿಯನ್ನು ಪಡೆಯಬೇಕೆಂದಾಯಾ ಭಕ್ತರ ಅಂಕಿತದಿಂದ ರಚಿಸಿದ್ದಾರೆಂದೂ ಹೇಳಬಹುದಾಗಿದೆ. ಇವರಲ್ಲಿ ಕೆಲವರು ಬಸವನಿಗೆ ಸಮಕಾಲಿಕರಾಗಿರಬಹುದು. ಆದರೂ ಕೆಲವರು ಅವನ ತರುವಾಯ ಇದ್ದವರು. ಹೀಗೆಯೇ ವೀರ

ಶೈವಪಂಡಿತತ್ರಯ, ವೀರಶೈವಾಚಾರ್ಯಪಂಚಕದಲ್ಲಿ ಕೆಲವರು ಬಸವನಿಗೆ ಪೂರ್ವಿಕರು, ಕೆಲವು ಸಮಕಾಲಿಕರು, ಕೆಲವರು ಈಚೆಯವರು. ಜನ ಶ್ರುತಿಯಲ್ಲಿರುವ ಈ ಭಕ್ತರ ಹೆಸರುಗಳನ್ನೆಲ್ಲಾ ತಾನು ಹಿರಿಯರಿಂದ ಕೇಳಿದ ಹಾಗೆ ಸೋಮನಾಥನು ಒಂದೆಡೆಗೆ ಸೇರಿಸಿ ಅವರನ್ನು ಬಸವನ ಸಮಕಾಲಿಕರನ್ನು ಮಾಡಿದ್ದಾನೆ.

ಮೇಲೆ ಹೇಳಿದ ವೀರಶೈವ ವಾಙ್ಮಯವೆಲ್ಲಾ ಬಸವೇಶ್ವರನ ಕಾಲ ದಲ್ಲಿ ಹುಟ್ಟಿರಲಿಲ್ಲವೆಂದೂ ಪಾಲ್ಕುರಿಕೆ ಸೋಮನಾಥನಿಗೆ ಈಚೆಯೇ ಹುಟ್ಟಿತೆಂದೂ ಹೇಳುವುದಕ್ಕೆ ನಿನಗೆ ಪ್ರಮಾಣವೇನೆಂದು ನೀವು ಕೇಳ ಬಹುದು. ಬಸವೇಶ್ವರನ ಅನಂತರ ಒಂದು ಶತಾಬ್ದದ ವರೆಗೂ ಜೈನ ವಾಙ್ಮಯವೇ ಪ್ರಬಲವಾಗಿರುವುದೇ ಇದಕ್ಕೊಂದು ಪ್ರಮಾಣ. ಪಾಲ್ಕು ರಿಕೆ ಸೋಮನಾಥನು, ಬಸವೇಶ್ವರನ ಸಮಕಾಲಿಕರೆಂದು ಹೇಳಿದ ಮೇಲೆ ತೋರಿಸಿದ ಹೆಸರುಗಳೇ ಹೊರತು ಮತ್ತೊಬ್ಬ ವೀರಶೈವ ಕವಿಯ ಹೆಸ ರಾದರೂ ಬಸವನಿಗೀಚೆಗೆ ಒಂದು ಶತಾಬ್ದದ ವರೆಗೂ ಕಾಣಲ್ಪಡದಿರು ವುದೇ ಎರಡನೆಯ ಪ್ರಮಾಣ. ಆದರೆ ಹರೀಶ್ವರ, ರಾಘವಾಂಕ, ಕೆರೆಯ ಪದ್ಮರಸ ಮುಂತಾದ ವೀರಶೈವ ಕವಿಗಳು ಬಸವೇಶ್ವರನಿಗೆ ಸ್ವಲ್ಪ ಕಾಲದ ನಂತರದವರು ಇದ್ದಾರಲ್ಲವೇ ಎಂದು ಯಾರಾದರೂ ಹೇಳಬಹುದು. ಹರೀಶ್ವರ ರಾಘವಾಂಕ ಕೆರೆಯ ಪದ್ಮರಸರು ಪಾಲ್ಕುರಿಕೆ ಸೋಮನಾ ಥನಿಗೆ ಸಮಕಾಲಿಕರು. ಆದರಿಂದ ಇವರ ಕಾಲನಿರ್ಣಯವು ಸೋಮನಾ ಥನ ಕಾಲನಿರ್ಣಯದ ಮೇಲೆ ಆಧಾರಪಟ್ಟಿದೆ. ಸೋಮನಾಥನು ದ್ವಿತೀಯ ಪ್ರತಾಪರುದ್ರನ ಕಾಲದವನೆಂದು ಇಂದಿನ ವರೆಗೂ ನಾವು ನಂಬಿರುತ್ತೇವೆ. ಈ ನಿರ್ಣಯಕ್ಕೆ ನಾವು ತೆಲುಗು ಕವಿಯಾಗಿ, ಸೋಮನಾಥನಿಗೆ ಆರ ನೆಯ ತರನಾಗಿದ್ದನೆಂದು ಹೇಳಿದ ಪಿಡುಪರ್ತಿ ಸೋಮನಾಥನ ಹೇಳಿ ಕೆಯ ಆಧಾರವಾಗಿದೆ. ಅಂದರೆ ಸೋಮನಾಥನು ಹದಿಮೂರನೆಯ ಶತಾಬ್ದಾಂತ್ಯದಲ್ಲಿಯೂ, ಹದಿನಾಲ್ಕನೆಯ ಶತಾಬ್ದಾದಿಯಲ್ಲಿಯೂ ಇದ್ದ ನೆಂದು ಇದರಿಂದ ತಿಳಿಯುತ್ತದೆ. ಈ ನಿರ್ಣಯವು ಸರಿಯಾಗಿಲ್ಲವೆಂದು ಶ್ರೀ ನರಸಿಂಹಾಚಾರ್ಯರು ಹೇಳಿ, ಶೃಂಗಾರಸಾರವೆಂಬ ನಾಮಾಂತರವುಳ್ಳ ಉದ್ಭಟ ಕಾವ್ಯವನ್ನು ರಚಿಸಿದ ಸೋಮರಾಜನು ಪಾಲ್ಕುರಿಕೆ ಸೋಮ ನಾಥನನ್ನು ಸ್ತುತಿಸಿ ಇರುವುದರಿಂದಲೂ, ಸೋಮರಾಜನು ತನ್ನ ಕಾವ್ಯದ ಕೊನೆಯಲ್ಲಿ

" ಜನನಾಥೋತ್ತಮ! ಸೋಮರಾಜನುಸಿರ್ದೀ
ಕಾವ್ಯಂ ವಲಂ ಶಾಲಿವಾಹನ ಶಕಾಬ್ದಮು
ದೆಯ್ದಿ ಸಾಸಿರದನೂಱುಂ ಸಂದ ನಾಲ್ವತ್ತು
ನಾಲ್ಕನೆಯಾರಂಜಿತ ಚಿತ್ರಭಾನುವವರಾಶ್ವೀ
ಜೋಕ್ಷಿತೈಕಾದಶೀ ವನಜಾರಾತಿತನೂಜ
ವಾಸರದೊಳಾದತ್ತಲ್ಲಮುಂಗರ್ಪಿತಂ "

ಎಂದು ಹೇಳಿರುವುದರಿಂದಲೂ, ಸೋಮರಾಜನ ಕಾಲವು ಶಕೆ ೧೧೪೪ ಎಂದರೆ ಕ್ರಿ. ಶ. ೧೨೨೨ ಸಂ॥ ವಾದುದರಿಂದ ಪಾಲ್ಕುರಿಕೆ ಸೋಮನಾಥನ ಕಾಲ ಅದಕ್ಕೆ ಹಿಂದೆಯಾಗಿರಬೇಕೆಂದೂ ಅದು ಕ್ರಿ. ಸ. ೧೧೯೦ ಪ್ರಾಂತವಾಗಿರಬಹುದೆಂದೂ ನರಸಿಂಹಾಚಾರ್ಯರು ಹೇಳಿದ್ದಾರೆ. ಈ ನಿರ್ಣಯವನ್ನೇ ಸ್ವೀಕರಿಸಿ ಶ್ರೀ. ವೀರೇಶಲಿಂಗಮು, ಶ್ರೀ. ಪ್ರಭಾಕರ ಶಾಸ್ತ್ರೀಮುಂತಾದ ಆಂಧ್ರರು ಕೂಡ ಸೋಮನಾಥನ ಕಾಲವು ಕ್ರಿ. ಶ. ೧೧೯೦ ಸಂ. ರವೇ ಎಂದು ಬರೆದಿದ್ದಾರೆ. ಆದರೆ, ಉದ್ಭಟ ಕಾವ್ಯದಲ್ಲಿಯ ಮೇಲಿನ ಪದ್ಯದಲ್ಲಿ ಸರಿಯಾಗಿ ಸಾಸಿರದ ನೂಱುಂಸಂದ ಎಂಬ ಕಡ್ಡೆಯಲ್ಲಿಯೇ ಅಕ್ಷರಪಾತವಿದೆ. ಮುದ್ರಿತ ಪ್ರತಿಯಲ್ಲಿ "ಸಾಸಿರದ ನೂಱ್ ಸಂದ" ನಾಲ್ವತ್ತುನಾಲ್ಕನೆ ಎಂದಿದೆ. ಇಲ್ಲಿ ಗಣಭಂಗವಾಗಿದೆ. ಇಲ್ಲಿ ಅಕ್ಷರವನ್ನು ಕೂಡಿಸಿ 'ಸಾಸಿರದ ನಾನೂಱ್ಸಂದ' ಎಂದು 'ನಾ'ಯನ್ನು ಸೇರಿಸಿ ಹೇಳಬಹುದೇ ಹೊರತು 'ಸಾಸಿರದನೂಱುಂಸಂದ' ಎಂದು ಪೂರಿಸಬಾರದು. ಇಲ್ಲಿ ನೂಱ್ ಎಂದು ಪುಳ್ಳಿಯೊಡನೆ ಇರುವ ಱ ಕಾರದ ಪುಳ್ಳಿಯನ್ನು ತೆಗೆದು ಹಾಕಿ, ಇಕಾರವನ್ನೂ ಅದರ ಮೇಲೆ ಅನುಸ್ವಾರವನ್ನೂ ಸೇರಿಸುವುದು ಉಚಿತವಲ್ಲ. "ನಾನೂಱ್" ಎಂದು ಪೂರಿಸುವುದೇ ಸರಿ. ಮೈಸೂರ್ ಓರಿಯಂಟಲ್ ಲೈಬ್ರರಿಯಲ್ಲಿರುವ ಓಲೆಯ ಪುಸ್ತಕದಲ್ಲಿ ನಾನೂಱ್ ಎಂದೇ ಇದೆ. ನರಸಿಂಹಾಚಾರ್ಯರಿಗೆ "ನೂಱುಂಸಂದ" ಎಂಬ ಪಾಠವು ಎಲ್ಲಿ ಸಿಕ್ಕಿದೆಯೋ ಅವರು ಹೇಳಲಿಲ್ಲ. "ಎಲ್ಲಿಯೋ ನೋಡಿದ್ದೇನೆ; ಹೇಳಲಾರೆ" ಎಂದು ಅವರು ಹೇಳಿ "ನೂಱುಂ ಸಂದ" ಎಂಬ ಪಾಠವೇ ಶಬ್ದಮಣಿದರ್ಪಣಕಾರನ ವ್ಯಾಕರಣ ಸೂತ್ರಕ್ಕನುಸಾರವಾಗಿದೆಯೆಂದೂ, "ನಾನೂಱ್ಸಂದ" ಎಂಬ ಪಾಠವು ವ್ಯಾಕರಣಾನುಸಾರವಾಗಿ ತಪ್ಪೆಂದೂ, ಆದರಿಂದ ಸೋಮರಾಜನು ಶಕವರ್ಷ ೧೪೪೪ನೇ ವರ್ಷದಲ್ಲಿಯೇ ಇದ್ದವನೆಂದೂ ನಿಶ್ಚಯಿಸಿದ್ದಾರೆ. ವೈಯಾ

ಕರಣನು ಪ್ರಯೋಗಗಳನ್ನು ಅನುಸರಿಸಿ ಸೂತ್ರಗಳನ್ನು ರಚಿಸಬೇಕೇ ಹೊರತು, ಪೂರ್ವ ಕವಿಗಳ ಪ್ರಯೋಗಗಳನ್ನು ತಿದ್ದಬಾರದು. ಸೋಮರಾಜನು ಪ್ರಯೋಗ ಪ್ರಕಾರ ಶಬ್ದಮಣಿ ದರ್ಪಣಕಾರನ ಸೂತ್ರಕ್ಕೆ ಅವ್ಯಾಪ್ತಿ ದೋಷವು ಪ್ರಾಪ್ತವಾಗಿದೆಯೆಂದು ಹೇಳಲಾಗಿದೆ. ಪರಂತು ಸೋಮರಾಜನ ಪ್ರಯೋಗವು ತಪ್ಪೆಂದು ಹೇಳಬಾರದು. ಶಬ್ದಮಣಿ ದರ್ಪಣಕಾರನು ಸೋಮರಾಜನ ಪ್ರಯೋಗಗಳನ್ನೆಲ್ಲಾ ನೋಡಿ ತನ್ನ ವ್ಯಾಕರಣವನ್ನು ರಚಿಸಿಲ್ಲವೆಂದು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಆದಿ ಪಂಪನು ತನ್ನ ಆದಿಪುರಾಣದ ಕೊನೆಯಲ್ಲಿ

" ಶತವರ್ಷಮೆಂಟುನೂಱ
ರ್ಕೆ ಕಡೆಯೊಳಱುವತ್ತು ಮೂಱುಸಂದದುಜಗತ್
ಪ್ರಕಟಪ್ಲವಸಂವತ್ಸರ
ದಕಾರ್ತಿಕಂಮುದಮುನೀಯೆ ನಂದೀಶ್ವರದೊಳ್ "

ಎಂಬ ಪದದಲ್ಲಿ "ಅಱುವತ್ತುಮೂಱು ಸಂದ" ಎಂದು ಪ್ರಯೋಗಿಸಿದ್ದಾನೆ. ಅಱುವತ್ತುಮೂಱುಂ ಸಂದ ಎಂದು ಬರೆದರೆ ಗಣವು ಕೆಟ್ಟು ಹೋಗುತ್ತದೆ. ಆದರಿಂದ ಸೋಮರಾಜನ ಪದ್ಯದಲ್ಲಿ ನಾನೂಱ್‌ಸಂದ ಎಂಬ ಪಾಠವು ಸರಿಯಾಗಿಯೇ ಇದ್ದು ಅವನ ಕಾಲವು ಕ್ರಿ. ಶ. ೧೫೨೨ ಆಗುತ್ತದೆ. ಆದರಿಂದ ಪಾಲ್ಕುರಿಕೆ ಸೋಮನಾಥನ ಕಾಲವು ಕ್ರಿ. ಶ. ೧೧೯೦ನೆಯ ಸಂವತ್ಸರವೇ ಆಗಬೇಕೆಂಬ ಅಭಿಪ್ರಾಯವು ಪರಾಸ್ತವಾಗುತ್ತದೆ. ಸ್ವಲ್ಪಕಾಲದಲ್ಲಿಯೇ ದೇಶವು ತುರಷ್ಕಾಕ್ರಾಂತವಾಗುತ್ತದೆಂದು ಪಾಲ್ಕುರಿಕೆ ಸೋಮನಾಥನು ಹೇಳಿದನೆಂದು ಪಿಡುಪರ್ತಿ ಸೋಮನಾಥನು ಬರೆದಿರುವುದರಿಂದಲೂ ಎರಡನೆಯ ಪ್ರತಾಪರುದ್ರನ ಅನಂತರವೇ ದಕ್ಷಿಣ ದೇಶವು ತುರುಷ್ಕಾಕ್ರಾಂತವಾಗಿ ಇರುವುದರಿಂದಲೂ ಪಾಲ್ಕುರಿಕೆ ಸೋಮನಾಥನ ಕಾಲವು ಸುಮಾರು ಕ್ರಿ. ಶ. ೧೩೦೦ ಪ್ರಾಂತ ಆಗುತ್ತದೆ. ಅದರಿಂದ ಆತನಿಗೆ ಸಮಕಾಲಿಕರಾದ ಹರೀಶ್ವರ, ರಾಘವಾಂಕ, ಕೆರೆಯ ಪದ್ಮರಸರು ಕೂಡ, ಕ್ರಿ. ಶ. ೧೩೦೦ ಸಂ॥ ಪ್ರಾಂತದವರೇ ಆಗುತ್ತಾರೆ. ಬಸವನ ಕಾಲದವರು ಮಾತ್ರವೇ ವೀರಶೈವ ಕವಿಗಳಾಗಿ ಅವನ ಅನಂತರ ಒಂದು ಶತಾಬ್ದದ ವರೆಗೂ ವೀರಶೈವ ಕವಿಗಳು ಇರದಿರುವುದು ಸಂಭಾವ್ಯವಾದ ವಿಷಯುವಲ್ಲವಷ್ಟೆ! ಆದರಿಂದ ಬಸವನ ಕಾಲದಲ್ಲಿ

ಆಗಲಿ, ಅವನ ಆನಂತರ ಒಂದು ಶತಾಬ್ದದ ವರೆಗಾಗಲಿ ಕನ್ನಡದಲ್ಲಿಯೂ ತೆಲುಗಿನಲ್ಲಿಯೂ ಕೂಡ ವೀರಶೈವ ವಾಙ್ಮಯವು ಹುಟ್ಟಿರಲಿಲ್ಲವೆಂದು ಹೇಳುವದೇ ಸರಿಯೆಂದು ತೋರುತ್ತದೆ.

ಅದು ಹಾಗಿರಲಿ. ವೀರಶೈವ ಮತಕ್ಕೆ ಸೇರಿದ ಮತ್ತೊಂದು ಸಮಸ್ಯೆ ಇದೆ. ಬಸವೇಶ್ವರನು ಯಾವನು? ಅವನು ಚಾರಿತ್ರಕ ಪುರುಷನೋ ಅಲ್ಲವೋ ಎಂಬುವುದೇ ಆ ಸಮಸ್ಯೆಯು. ಬಸವಣ್ಣನು ಮೂರನೆಯ ಬಿಜ್ಜಳನಿಗೆ ದಂಡನಾಥನಾಗಿಯೂ ಭಾಂಡಾರಾಧ್ಯಕ್ಷಕನಾಗಿಯೂ ಇದ್ದ ನೆಂದೂ ವೀರಶೈವ ಗ್ರಂಥಗಳೆಲ್ಲಾ ಹೇಳುತ್ತಿವೆ. ಜೈನ ಮತದ ಗ್ರಂಥ ಗಳು ಕೂಡ ಇದೇ ವಿಷಯವನ್ನು ಹೇಳುತ್ತಿವೆ. ಬಸವಣ್ಣನ ಚರಿತ್ರ ವನ್ನು ಕುರಿತು ಮಾತ್ರ ಈ ಎರಡು ಮತಗ್ರಂಥಗಳಲ್ಲಿಯೂ ಪರಸ್ಪರ ವಿರುದ್ಧವಾದ ವಿಷಯಗಳಿವೆ. ಈ ಮತಗಳು ಒಂದಕ್ಕೊಂದು ವಿರೋಧ ಮತಗಳಾಗಿರುವುದರಿಂದ ಈ ವ್ಯತ್ಯಾಸಗಳಿರುವುದು ಆಶ್ಚರ್ಯವಲ್ಲ. ಬಸ ವಣ್ಣನ ಕುರಿತು ಗ್ರಂಥಗಳಲ್ಲಿರುವ ಒಂದು ವಿಷಯಕ್ಕೂ ಶಾಸನಾ ಧಾರ ಒಂದಾದರೂ ಇಲ್ಲ ಎಂಬುದೇ ಆಶ್ಚರ್ಯವು. ಇಂತಹ ಮಹಾ ಪುರುಷನನ್ನು ಕುರಿತು ಶಾಸನಗಳೆಲ್ಲಾ ಮೌನಮುದ್ರೆಯನ್ನು ವಹಿ ಸಿವೆ. ಬಿಜ್ಜಳನ ಮಂತ್ರಿಗಳೂ, ದಂಡನಾಯಕರೂ, ಎಷ್ಟೋ ಮಂದಿ ಶಾಸನಗಳಲ್ಲಿ ಹೇಳಲ್ಪಟ್ಟಿದ್ದಾರೆ. ಅವರಲ್ಲಿ ಬಸವಣ್ಣನ ಹೆಸರೊಂದು ಕಡೆಯಲ್ಲಿಯೂ ಇಲ್ಲ. ಇದೇ ಬಸವಣ್ಣನು ಚಾರಿತ್ರಕ ಪುರುಷನೋ ಅಲ್ಲವೋ ಎಂಬ ಸಂದೇಹಕ್ಕೆ ಮೂಲವು. ಪಾಲ್ಕುರಿಕೆ ಸೋಮನಾ ಥರು ಬಸವಣ್ಣನ ಸಮಕಾಲಿಕರೆಂದು ಹೇಳಿದ ಅನೇಕರ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ. ಅವರಲ್ಲಿ ಕೆಲವರು ಅರಸರಾಗಿಯೂ ಕೆಲವರು ಅರಸಿಯರಾಗಿಯೂ, ಇನ್ನೂ ಇತರರು ಸುಪ್ರಸಿದ್ಧ ಜನರಾ ಗಿಯೂ ಇದ್ದಾರೆ. ಇದನ್ನು ನೋಡಿದರೆ ಬಸವನು ಚಾರಿತ್ರಕ ಪುರು ಷನಲ್ಲವೇನೋ ಎಂದು ಆಶೆಯೂ ತೋರುತ್ತದೆ. ಬಿಜ್ಜಳನ ಕಾಲಕ್ಕೆ ಸೇರಿದ ಅಬ್ಬಲೂರು ಶಾಸನದಲ್ಲಿ ಮಾತ್ರ ಬಸವನ ಹೆಸರು ಕಾಣಬ ರುತ್ತದೆ. ಆದರೂ ಶಾಸನದಲ್ಲಿಯ ಬಸವನೂ ವೀರಶೈವ ಗ್ರಂಥಗಳು ಬಿಜ್ಜಳನ ದಂಡನಾಥನೆಂದು ಹೇಳಿರುವ ಬಸವನೂ ಒಬ್ಬರೋ ಬೇರೆ ಪುರುಷರೋ ಹೇಳಸಾಧ್ಯವಾಗಿಲ್ಲ. ವೀರಶೈವ ಗ್ರಂಥಗಳಲ್ಲಿ ಹೇಳಲ್ಪಟ್ಟ ಬಸವನು ಬ್ರಾಹ್ಮಣ ಮತದ್ವೇಷಿ, ಶಾಸನದ ಬಸವನು ಮುನಿಗವಲ್ಲಿ

ಯಲ್ಲಿದ್ದ ಬ್ರಾಹ್ಮಣರ ಹೃದಯಾಬ್ಜಗಳಿಗೆ ಭಾಸ್ಕರನಂತಿದ್ದು, ಅವರ ಗೌರವಕ್ಕೆ ಪಾತ್ರನಾದವನು. ವೀರಶೈವ ಗ್ರಂಥಗಳು ಹೇಳಿರುವ ಬಸವಣ್ಣನ ತಂದೆಯು ಹೆಸರು ಮುಂಡೆಂಗ ಮಾದಿರಾಜ; ಶಾಸನದ ಬಸವಣ್ಣನ ತಂದೆಯು ಹೆಸರು ಬೇರೆ. ಶಾಸನದಲ್ಲಿ ಒಬ್ಬ ಮಾದರಸನ ಹೆಸರಿದ್ದರೂ ಅವನು ಮನಿಗವಲ್ಲಿ ಗ್ರಾಮಕ್ಕೆ ಅಧಿಕಾರಿಯಾಗಿರುವ ಮಾದರಸನು. ಈ ಬಸವನ ಮಾದರಸರ ಗೋತ್ರಗಳೇ ಬೇರೆಯಾಗಿವೆ. ಬಸವನದು ಕಾಶ್ಯಪ ಗೋತ್ರವು; ಮಾದಿರಾಜನದು ಹರಿತ ಗೋತ್ರವು. ಈ ಬಸವಣ್ಣನಿಗೆ ದಂಡನಾಯಕಾದಿ ಬಿರುದುಗಳಿಲ್ಲ. ವೀರಶೈವ ಗ್ರಂಥಗಳ ಬಸವನಿಗೆ ಗೋತ್ರವಿಲ್ಲ. ವರ್ಣಭೇದವಿಲ್ಲ. ಅವನಿಗೆ ಭವಿ ಶರಣ ಎಂಬ ಭೇದವೇ ಹೊರತು ಮತ್ತೇನೂ ಇಲ್ಲ. ಅದರಿಂದ ಈ ಇಬ್ಬರು ಬಸವಣ್ಣಗಳಿಗೂ ಯಾವ ವಿಧವಾದ ಸಂಬಂಧವಿಲ್ಲವೆಂದೇ ಹೇಳಬೇಕಾಗಿದೆ.

ಆದರೂ ಬಿಜ್ಜಳನ ದಂಡನಾಯಕನೆಂದು ಹೇಳಲ್ಪಟ್ಟ ಬಸವಣ್ಣನಿಗೂ ಅಬ್ಬಲೂರು ಶಾಸನದ ಬಸವಣ್ಣನಿಗೂ ಸಂಬಂಧವನ್ನು ಕಲ್ಪಿಸಿ ಬಿಜ್ಜಳ ಮಂತ್ರಿ ಬಸವಣ್ಣ ಚಾರಿತ್ರಕ ಪುರುಷನೇ ಎಂದು ಹೇಳುವುದಕ್ಕೆ ಒಂದೇ ಒಂದು ಸಣ್ಣ ಆಧಾರವಿದೆ. ಈ ಆಧಾರವು ಕೂಡ ನಿರಾಧಾರವಾದರೆ ಬಸವಣ್ಣನ ಚಾರಿತ್ರತ್ವವನ್ನು ನಿರ್ಧರಿಸಲಿಕ್ಕೆ ಯಾವ ಪ್ರಮಾಣವೂ ಇಲ್ಲವೆಂದು ನಮಗೆ ಈಗಿನ ವರೆಗೂ ದೊರೆತಿರುವ ಶಾಸನ ವಿಜ್ಞಾನದಿಂದ ಹೇಳಬೇಕಾಗಿದೆ. ಬಿಜ್ಜಳನ ಶಾಸನಗಳಲ್ಲಿ ಅವನ ಮಂತ್ರಿಯಾಗಿ ಕಾಶ್ಯಪನೆಂಬುವ ಒಬ್ಬನಿದ್ದಾನೆಂದು ತಿಳಿದುಬರುತ್ತದೆ. ಅಬ್ಬಲೂರ ಶಾಸನದ ಬಸವಣ್ಣನು ಕಾಶ್ಯಪಗೋತ್ರದವನು. ಆ ಶಾಸನದ ಬಸವಣ್ಣನೇ ಬಿಜ್ಜಳನ ಶಾಸನಗಳಲ್ಲಿ ಕಾಶ್ಯಪನೆಂದು ಹೇಳಲ್ಪಟ್ಟಿದ್ದಾನೆಂದು ಊಹಿಸಿದರೆ, ಅವನ ಚಾರಿತ್ರಕ ರಹಸ್ಯವು ಗೊತ್ತಾಗುತ್ತದೆ. ಕಾಶ್ಯಪ ಮಂತ್ರಿಯು ಬಿಜ್ಜಳನ ಕೋಶವನ್ನು ಬಹಳವಾಗಿ ಅಭಿವೃದ್ಧಿಗೆ ತಂದನೆಂದು, ಅದಕ್ಕೋಸ್ಕರ ಸಮರ್ಥರಾದ ಪಂಚ ಕರಣಿಕರನ್ನು ಬಿಜ್ಜಳನ ವಿವಿಧ ರಾಜ್ಯಭಾಗಗಳಲ್ಲಿ ನಿಲ್ಲಿಸಿದನೆಂದೂ, ಆ ಕರಣಿಕರು ಮಹಾಶೈವ ಭಕ್ತರಾಗಿ, ಶೈವ ಭಕ್ತರನ್ನು ಪೋಷಿಸಿದರೆಂದೂ, ಬಿಜ್ಜಳನ ಶಾಸನಗಳಿಂದ ತಿಳಿಯಬರುತ್ತದೆ. ಈ ಪಂಚ ಕರಣಿಕರಲ್ಲಿ ಮೂವರ ಹೆಸರುಗಳು ವೀರಶೈವ ಗ್ರಂಥಗಳಲ್ಲಿ ಕಾಣಬರುತ್ತವೆ. ಅವರು ಮಹಾಶಿವ

ಭಕ್ತರಾಗಿ ಬಸವನೊಡನೆ ನಿಂತು ಶೈವ ಪ್ರಾಬಲ್ಯವನ್ನು ಮಾಡಿದ್ದಾರೆಂದು ವೀರಶೈವ ಗ್ರಂಥಗಳು ಹೇಳುತ್ತವೆ. ಬಸವಣ್ಣನ ಕಾಲದಲ್ಲಿ ಕಲ್ಯಾಣ ಕಟಕದಲ್ಲಿ ಅನೇಕಲಕ್ಷ ಸಂಖ್ಯಾಕರಾಗಿ ಶೈವಭಕ್ತರಿದ್ದಾರೆಂದೂ, ತನ್ನನ್ನು ಯಾವ ಭಕ್ತನು ಯಾವದನ್ನು ಯಾಚಿಸಿದರೂ ಬಸವಣ್ಣನು ಅವರಿಗೆ ಇಲ್ಲವೆಂದು ಹೇಳದೆ ಕೊಡುತ್ತಿದ್ದನೆಂದೂ ಅವರಿಂದ ಅರಸರ ಭಂಡಾರವೆಲ್ಲಾ ಶೂನ್ಯವಾದುದರಿಂದ ಅರಸನಿಗೆ ಬಸವಣ್ಣನ ಮೇಲೆ ಸಿಟ್ಟುಬಂದು ಅವನನ್ನು ವಾರಿಸಿದನೆಂದೂ, ಬಸವಣ್ಣನು ಚಿನ್ನದ ವರ್ಷವನ್ನು ಕಲ್ಪಿಸಿ ಭಂಡಾರವನ್ನು ಪೂರಿಸಿದನೆಂದೂ ವೀರಶೈವ ಕಾವ್ಯಗಳಿಂದ ತಿಳಿಯ ಬರುತ್ತದೆ. ತಾನೇರ್ಪಡಿಸಿದ ಕರಣಿಕರ ಸಹಾಯದಿಂದಲೇ ಕಾಶ್ಯಪನಾದ ಬಸವಣ್ಣನು ಹೀಗೆ ಮಾಡಿದ್ದಾನೆಂದು ನಾವು ಹೇಳಬಹುದು. ಜನಶ್ರುತಿಯಲ್ಲಿ ಯಥಾರ್ಥ ವಿಷಯಗಳಲ್ಲಿ ಅನೇಕ ವ್ಯತ್ಯಾಸಗಳು ಸಂಭವಿಸುತ್ತವೆ. ಮಹಾಪುರುಷರ ಮಹಾತ್ಮ್ಯ ವಿಷಯದಲ್ಲಿ ಈ ವ್ಯತ್ಯಾಸಗಳು ಇನ್ನೂ ಅನೇಕವಾಗಿ ಸೇರುತ್ತವೆ. ಬಸವಣ್ಣನ ವಿಷಯದಲ್ಲಿಯೂ ಹೀಗೆಯೇ ಆಗಿರಬೇಕು. ವೀರಶೈವ ವಾಙ್ಮಯದಲ್ಲಿ ಬಸವಣ್ಣನ ಮಾಹಾತ್ಮ್ಯ ಪ್ರಕಟನೆಗಾಗಿ ಭಕ್ತರೂ ಕವಿಗಳೂ ಅನೇಕಾದ್ಭುತವಿಷಯಗಳನ್ನು ಸೇರಿಸಿದ್ದಾರೆ. ವೀರಶೈವ ವಾಙ್ಮಯವು ಬಸವಣ್ಣನಿಗೆ ಬಹಳ ಕಾಲಕ್ಕೆ ಅನಂತರದಲ್ಲಿಯೇ ಉದ್ಭವಿಸಿತೆಂದು ಎನ್ನುವುದಕ್ಕೆ ಇದೊಂದು ಪ್ರಮಾಣವಾಗಿದೆ. ಬಸವಣ್ಣನು ಚಾರಿತ್ರಕ ಪುರುಷನೇ. ಅವನು ಬಿಜ್ಜಳನ ಮಂತ್ರಿಯಾಗಿಯೇ ಇದ್ದವನು. ಅವನು ಪರಮ ಶಿವಭಕ್ತನು. ಶಿವಭಕ್ತಿಯು ವ್ಯಾಪಿಸುವುದಕ್ಕೆ ಅವನು ಬಹಳ ಪ್ರಯತ್ನವನ್ನು ಮಾಡಿದನು. ಬಿಜ್ಜಳನು ಸರ್ವಮತಗಳನ್ನು ಸಮನಾಗಿಯೇ ಆವರಿಸಿದ್ದಾನೆಂದು ಅವನ ದಾನಶಾಸನಗಳಿಂದ ತಿಳಿದುಕೊಳ್ಳಬಹುದು. ಬಸವಣ್ಣನು ಕೇವಲ ಶೈವ ಭಕ್ತರಿಗೆ ಮಾತ್ರ ಸರ್ವ ದ್ರವ್ಯವನ್ನು ವಿನಿಯೋಗಿಸಿ ಭಂಡಾರವನ್ನು ನಾಶ ಮಾಡುವುದರಿಂದ ಬಿಜ್ಜಳನಿಗೂ, ಅವನಿಗೂ ವೈರವು ಬಂದಿತು. ಸ್ತ್ರೀ ವಿಷಯಕವಾದ ಸ್ಪರ್ಧೆ ಕೂಡ ಅವರ ವೈರವನ್ನು ಹೆಚ್ಚಿಸುವುದಕ್ಕೆ ಸಹಾಯವಾಯಿತು. ಬಸವಣ್ಣನು ಬಿಜ್ಜಳನನ್ನು ಕೊಲ್ಲಿಸಿದನು. ಬಸವನು ಬಿಜ್ಜಳನ ಮಗನ ಭಯದಿಂದ ರಾಜ್ಯವನ್ನು ಬಿಟ್ಟುಹೋದನು.

ಬಿಜ್ಜಳನ ರಾಜ್ಯವನ್ನು ಬಿಟ್ಟುಹೋದ ಸ್ವಲ್ಪ ಕಾಲದಲ್ಲಿಯೇ ಬಸವಣ್ಣನು ಕೂಡಲಿ ಸಂಗಮೇಶ್ವರ ಲಿಂಗ ಗರ್ಭದಲ್ಲಿ ಸೇರಿ ಬಯಲಾ

ದನೆಂದು ವೀರಶೈವ ಗ್ರಂಥಗಳು ಹೇಳುತ್ತಿವೆ. ಹೀಗೆ ಹೇಳುವುದು ಸರಿಯಲ್ಲವೆಂದು ನನ್ನ ಅಭಿಪ್ರಾಯ. ಬಿಜ್ಜಳನು ಕ್ರಿ. ಶ. ೧೧೬೭ ಸಂ ದಲ್ಲಿ ಮೃತನಾದನು. ಅವನ ಮಕ್ಕಳು ಕ್ರಿ. ಶ. ೧೧೮೩ ಸಂ. ದ ವರೆಗೂ ರಾಜ್ಯವನ್ನಾಳಿದರು. ಆದರೂ ಅವರ ರಾಜ್ಯವು ದಿನದಿನಕ್ಕೆ ಕ್ಷೀಣವಾಗಿಬಂತು. ಬಿಜ್ಜಳನ ರಾಜ್ಯವನ್ನು ಹೊಯ್ಸಳ ಬಲ್ಲಾಳನಾಕ್ರಮಿಸಿದನು. ಬಲ್ಲಾಳನಿಗೆ ಬಸವನ ದಂಡನಾಯಕನ ಸಹಾಯದಿಂದಲೇ ಈ ವಿಜಯವು ಪ್ರಾಪ್ತವಾಗಿದೆ. ಈ ಅಭಿಪ್ರಾಯವು ಬಳ್ಳಾರಿ ಜಿಲ್ಲೆ, ಹಡಗಲಿ ತಾಲೂಕ ಓರುವಾಯಿ ಗ್ರಾಮದಲ್ಲಿರುವ ಬೆಣಕಪ್ಪನ ಆಲಯದಲ್ಲಿರುವ ಒಂದು ಶಾಸನದಿಂದ ತಿಳಿಯಬರುತ್ತದೆ. ಈ ಶಾಸನವು ಕ್ರಿ. ಶ. ೧೨೦೪ ರಲ್ಲಿ ಹುಟ್ಟಿತು. ಅದರಲ್ಲಿ ಬಲ್ಲಾಳನ ದಂಡನಾಥನಾದ ಬಸವಣ್ಣ ದಂಡನಾಯಕನು ಆಲಯಕ್ಕೆ ಕೆಲವು ದಾನಗಳನ್ನು ಮಾಡಿದಂತಿದೆ. ಬಸವಣ್ಣನು ಬಿಜ್ಜಳನ ರಾಜ್ಯವನ್ನು ಬಿಟ್ಟು ಪ್ರಚ್ಛನ್ನವಾಗಿ ಹೋಗಿ ಬಲ್ಲಾಳನಾಸ್ಥಾನವನ್ನು ಸೇರಿದನೆಂದೂ ಬಿಜ್ಜಳನ ವಂಶವು ಸಂಪೂರ್ಣವಾಗಿ ನಾಶನವನ್ನು ಹೊಂದಿದ ವರೆಗೂ ಬಲ್ಲಾಳನಿಗೆ ಸಹಾಯಮಾಡಿ ತನ್ನ ಹಗೆ ತೀರಿಸಿಕೊಂಡನೆಂದೂ, ಅವನು ವೃದ್ಧಾಪ್ಯದ ವರೆಗೂ ಜೀವಿಸಿದ್ದನೆಂದೂ ನಾನು ಊಹಿಸುತ್ತೇನೆ. ಕಲ್ಯಾಣ ಕಟಕ ಪ್ರಾಂತದಲ್ಲಿ ಜನರು ಬಸವಣ್ಣನು ಬಯಲಾದನೆಂದೇ ನಂಬಿದ್ದಾರೆ. ಅವನ ಶಾಪದಿಂದಲೇ ಬಿಜ್ಜಳನ ವಂಶವು ಹಾಳಾಯಿತೆಂದು ಅವರು ನಂಬಿದ್ದಾರೆ. ಅವನ ಮಹಾತ್ಮ್ಯವನ್ನು ಕುರಿತು ಅನೇಕ ಕಥೆಗಳನ್ನು ಕಲ್ಪಿಸಿದ್ದಾರೆ. ದಿನದಿನಕ್ಕೆ ಬಸವಣ್ಣನ ಚರಿತ್ರದಲ್ಲಿ ಅದ್ಭುತ ವಿಷಯಗಳು ಸೇರಿ ಹೋಗಿವೆ. ಇದೆಲ್ಲಾ ಆಗುವದಕ್ಕೆ ಒಂದು ಶತಾಬ್ದವಾದರೂ ಗತಿಸಿರಬೇಕು. ಆ ಕಥೆಗಳನ್ನೆಲ್ಲಾ ವೀರಶೈವ ಭಕ್ತರು ಸಂಪ್ರದಾಯವಾಗಿ ಹೇಳುತ್ತಿರುವುದನ್ನು ಒಂದು ಕಡೆಗೆ ಸೇರಿಸಿ ಪಾಲ್ಕುರಿಕೆ ಸೋಮನಾಥನು ಬಸವಪುರಾಣವನ್ನು ರಚಿಸಿದ್ದಾನೆ. ಸೋಮನಾಥನು ಮಹಾಕವಿಯಾಗಿರುವುದಲ್ಲದೆ ಮಹಾಶೈವನಿಷ್ಠಾಗರಿಷ್ಠನಾಗಿರುವುದರಿಂದಲೂ, ಅವರ ಗ್ರಂಥಗಳಿಗೆ ಬಹಳ ಪ್ರಚಾರವು ಬಂತು. ಅವನ ಗ್ರಂಥಗಳಲ್ಲಿರುವ ವಿಷಯಗಳನ್ನೇ ಸ್ವೀಕರಿಸಿ ಕನ್ನಡ ವೀರಶೈವ ಕವಿಗಳು ಕೂಡ ಗ್ರಂಥಗಳನ್ನು ರಚಿಸಿ ಕನ್ನಡ ಕಾವ್ಯಾಭಿವೃದ್ಧಿಯನ್ನು ಮಾಡಿದ್ದಾರೆ. ಸೋಮನಾಥನು ಮೈಸೂರುರಾಷ್ಟ್ರ ತುಮ್ಕೂರು ಜಿಲ್ಲೆಗೆ ಸೇರಿದ ಪಾಲ್ಕುರಿಕೆಯಲ್ಲಿ ಹುಟ್ಟಿದವನು. ಶ್ರೀ ನರಸಿಂಹಾಚಾರ್ಯರು ಅವನು ಗೋದಾವರಿ ಜಿಲ್ಲೆಯ

ಪಾಲ್ಕುರಿಕೆಯಲ್ಲಿ ಹುಟ್ಟಿದವನೆಂದು ಹೇಳಿದ್ದಾರೆ. ಗೋದಾವರಿ ಜಿಲ್ಲೆಯಲ್ಲಿ ಪಾಲ್ಕುರಿಕೆ ಎಂಬ ಗ್ರಾಮವಿಲ್ಲ. ಶ್ರೀ ವೀರೇಶ ಲಿಂಗಮು, ಶ್ರೀ ಪ್ರಭಾಕರಶಾಸ್ತ್ರಿ ಮುಂತಾದ ತೆಲುಗು ವಿಮರ್ಶಕರು ಅವನು ನೈಜಾಮು ಇಲಾಖೆಯ ವರಂಗಲ್ಲು ಪ್ರಾಂತದಲ್ಲಿರುವ ಪಾಲ್ಕುರಿಕೆಯ ನಿವಾಸಿಯೆಂದು ಹೇಳಿದ್ದಾರೆ. ಓರಂಗಲ್ಲು ಪ್ರಾಂತದಲ್ಲಿ ಪಾಲಗುರ್ತಿಯೆಂಬ ಗ್ರಾಮವಿದೆ: ಪಾಲಕುರಿಕೆಯಿಲ್ಲ. "ಕುಱಿಕೆ" "ಗುಱಿಕೆ" ಎಂಬ ಅಂತಗಳುಳ್ಳ ಗ್ರಾಮಗಳು ಕನ್ನಡ ಪ್ರಾಂತಗಳಲ್ಲಿಯೇ ಇರಬೇಕು. ಆ ಪದಗಳು ಗ್ರಾಮ ಶಬ್ದಕ್ಕೆ ಪರ್ಯಾಯಪದಗಳಾಗಿರುವ ಕನ್ನಡ ಪದಗಳು. ಆದರಿಂದ ಸೋಮನಾಥನು ಕನ್ನಡ ಪ್ರಾಂತದವನು. ಈಗ ಪಾಲ್ಕುರಿಕೆ ಗ್ರಾಮವು ಒಂದು ಹೋಬಳಿಗೆ ಮುಖ್ಯ ಪಟ್ಟಣವಾಗಿ, ಅನಂತಪುರ ಜಿಲ್ಲಾ ಮಡಕಶಿರಾ ಗ್ರಾಮಕ್ಕೆ ಇಪ್ಪತ್ತು ಮೈಲುಗಳ ದೂರದಲ್ಲಿದೆ. ಸೋಮನಾಥನು ವೀರಶೈವಕ್ಕೆ ಪ್ರಧಾನ ಸ್ಥಾನವಾದ ಶ್ರೀಶೈಲಕ್ಕೆ ಸೇರಿಕೊಂಡು, ಅದರ ಮೂಡವಿನ ಬಾಗಿಲಾದ ತ್ರಿಪುರಾಂತಕದಲ್ಲಿ ವಾಸವನ್ನೇರ್ಪಡಿಸಿಕೊಂಡನು. ತನ್ನ ಬಸವ ಪುರಾಣವನ್ನು ತ್ರಿಪುರಾಂತಕದಲ್ಲಿಯೂ, ಪಂಡಿತಾರಾಧ್ಯ ಚರಿತ್ರವನ್ನು ಶ್ರೀಶೈಲದಲ್ಲಿಯೂ ಇದ್ದು ರಚಿಸಿದನು.

ಸೋಮನಾಥನು ರಚಿಸಿದ ಗ್ರಂಥಗಳೆಲ್ಲಾ ಕನ್ನಡಕ್ಕೆ ಅನುವರ್ತಿಸಲ್ಪಟ್ಟವೆ. ಅವನ ಮೇಲಿನ ಗೌರವದಿಂದಲೂ ಅವನ ಮಹಿಮ ಕಥೆಗಳಿಂದಲೂ, ವೀರಶೈವ ವಾಙ್ಮಯವು ಕನ್ನಡದಲ್ಲಿಯೂ ವ್ಯಾಪಿಸಿತ್ತು. ಇವನ "ಬಸವಪುರಾಣವನ್ನೇ —

"ಅಸಮಲಿಂಗೈಕ್ಯಾನುಭಾವ
ಪ್ರಸರಮತಿಕವಿಸೋಮನಾಥಂ
ರಸಮುಸರೆಮುನ್ನುಸಿರ್ದುದನೆಕನ್ನಡಿಸಿಪೇೞ್ವೆಂ"

ಎಂದು ಭೀಮಕವಿಯು ಶಕೆ ೧೨೪೧ ರಲ್ಲಿ ಎಂದರೆ ಕ್ರಿ. ಶ. ೧೩೬೯ ರಲ್ಲಿ ರಚಿಸಿದನು. ಶ್ರೀ. ನೀಲಕಂಠಾಚಾರ್ಯನು (ಕ್ರಿ. ಶ. ೧೪೪೫) ಇವನ ಪಂಡಿತಾರಾಧ್ಯ ಚರಿತ್ರವನ್ನೇ ಅಕ್ಷರಶಃ ಕನ್ನಡಿಸಿದನು. ಸೋಮನಾಥನ ಇತರ ತೆಲುಗು ಕೃತಿಗಳು ಕೂಡ ಕರ್ಣಾಟಕ ಕೃತಿಗಳು ಆಗಿವೆ. ಇವನ ಪಂಡಿತಾರಾಧ್ಯ ಚರಿತ್ರವನ್ನೇ ಗುರುರಾಜಕವಿ ಸಂಸ್ಕೃತದಲ್ಲಿ

ಬರೆದಿದ್ದಾನೆ. ಸೋಮನಾಥನು ರಚಿಸಿದ ಕನ್ನಡ ಗ್ರಂಥಗಳಲ್ಲಿ ರಚಿಸಿದ ಶೀಲಸಂಪಾದನೆ, ಸೋಮೇಶ್ವರ ಶತಕ, ಸಹಸ್ರಗಣನಾಮ, ಸದ್ಗುರು ರಗಳೆ, ಚೆನ್ನಬಸವ ಸ್ತೋತ್ರದ ರಗಳೆ, ಶರಣುಬಸವ ರಗಳೆ ಎಂಬ ಗ್ರಂಥಗಳು ದೊರೆಯುತ್ತಿವೆ. ಇನ್ನೂ ಯಾವ ಕನ್ನಡ
ಇವನು ರಚಿಸಿದ್ದಾನೋ ತಿಳಿಯದು. ಇವನನ್ನು ಅನೇಕ ತಿಗಳನ್ನು ಕವಿಗಳು ಸ್ತುತಿಸಿದ್ದಾರೆ. ಉಸ್ಭಟಕಾವ್ಯವನ್ನು ರಚಿಸಿದ ಸೋ ಕರ್ಣಾಟಕ (ಕ್ರಿ. ಶ. ೧೫೩೨) ಭಾವಚಿಂತಾರತ್ನ, ವೀರಶೈವಾಮೃತ ಪುರಾಣ ರಾಜನ್ನು ರಚಿಸಿದ ಗುಬ್ಬಿಯ ಮಲ್ಲಿನಾರ್ಯನೂ, (ಕ್ರಿ. ಶ. ೧೫೧೩) ಇವ ಬಹ ಳವಾಗಿ ಹೊಗಳಿದ್ದಾರೆ. ಇವನಿಗೆ ತತ್ವವಿದ್ಯಾಕಲಾಪ, ಕವಿತಾಸಾರ, ಅನ್ಯವಾದ ಕೋಲಾಹಲ, ಪ್ರತ್ಯಕ್ಷ ಭೃಂಗೀಶನವತಾರ, ಎಂಬ ಬಿರುದುಗಳಿಂದ ಶೈವಭಕ್ತರು ಇವನನ್ನು ಗೌರವಿಸುತ್ತಾರೆ. ಸೋಮನಾಥನನ್ನು ಕುರಿತು ವಿಶೇಷ ವಿಷಯಗಳನ್ನು ನಾನು ಬರೆದ ತೆಲುಗು ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿ ನೋಡಬಹುದು.

ಸೋಮನಾಥನು ಕನ್ನಡದಲ್ಲಿಯೂ, ತೆಲುಗಿನಲ್ಲಿಯೂ ವೀರಶೈವ ವಾಙ್ಮಯದಲ್ಲಿ ಪ್ರಥಮನಾಗಿರುವುದರಿಂದ ಅವನನ್ನು ಕುರಿತು ಹೀಗೆ ವಿಸ್ತರಿಸಿ ಹೇಳಿದ್ದೇನೆ. ಇವನ ಅನಂತರ ವೀರಶೈವ ವಾಙ್ಮಯವು ಅಧಿಕವಾಗಿ ಬೆಳೆಯುತ್ತಾ ಬಂದಿದೆ. ಈಗ ಸಮಯವಿಲ್ಲ. ಮತ್ತೊಂದು ವೇಳೆ ವೀರಶೈವ ವಾಙ್ಮಯ ವಿಸ್ತಾರವನ್ನು ಕುರಿತು ಹೇಳುತ್ತೇನೆ.

ಗೆಳೆಯರೇ, ನನ್ನ ಈ ಭಾಷಣದಿಂದ ಏನಾದರೂ ಪ್ರಯೋಜನವಿದ್ದರೆ, ಅದನ್ನು ವಿದ್ಯಾರ್ಥಿಗಳು ಗುರ್ತಿಸಬೇಕೆಂದು ಹಾರೈಸುತ್ತೇನೆ. ಕನ್ನಡ ವಾಙ್ಮಯ ಚರಿತ್ರೆಯಲ್ಲಿ ಈ ವಿಧವಾದ ಅನೇಕ ಸಮಸ್ಯೆಗಳುಂಟು. ನೀವು ಕನ್ನಡ ಭಾಷಾಭಿಮಾನಿಗಳಾಗಬೇಕೆಂದು ನನ್ನ ಬಯಕೆಯು. ದೇಶಾಭಿಮಾನಿಯೂ ಭಾಷಾಭಿಮಾನಿಯೂ ಆದವನು "ನನ್ನ ದೇಶವು ಘನವಾದದ್ದು" "ನನ್ನ ಭಾಷೆಯು ಉತ್ಕೃಷ್ಟವಾದದ್ದು" "ನನ್ನ ವಾಙ್ಮಯವು ಮಹೋನ್ನತಿಯುಳ್ಳದ್ದು" ಎಂದು ಹೆಮ್ಮೆಪಟ್ಟ ಮಾತ್ರವೇ ಸಾಲದು. ನೀವು ದೇಶಾಭಿಮಾನಿಗಳಾದರೆ ನಿಮ್ಮ ಶಕ್ತಿ ಸಾಮರ್ಥ್ಯಗಳಿಂದ ಅದನ್ನು ಇನ್ನೂ ಉನ್ನತ ಸ್ಥಿತಿಗೆ ತರಲು ಪ್ರಯತ್ನಿಸಬೇಕು. ನಿಜವಾದ ಭಾಷಾಭಿಮಾನಿಗಳಾದರೆ, ಅದಕ್ಕೆ ಇನ್ನೂ ಹೆಚ್ಚಾದ ಮಾಧುರ್ಯವನ್ನು ತರಬೇಕು.

ಸಾಹಿತ್ಯಾಭಿಮಾನಿಗಳಾದರೆ ಸಾಹಿತ್ಯವನ್ನು ಚನ್ನಾಗಿ, ಸೂಕ್ಷ್ಮ ವಿಮರ್ಶೆಯಿಂದ ಓದಬೇಕು. ವಿದ್ಯಾರ್ಥಿಗಳು ಶುಷ್ಕಾಭಿಮಾನಿಗಳಾಗಿ ಇರದೆ ತಮ್ಮ ಅಭಿಮಾನ ವಿಷಯದಲ್ಲಿ ತಕ್ಕ ಕೃಷಿಯನ್ನು ಮಾಡಬೇಕೆಂದು ಹೇಳಿ ಈ ಭಾಷಣೆಯನ್ನು ನಿಲ್ಲಿಸುತ್ತೇನೆ.

---

# ಬಸವೇಶ್ವರನು ಚಾರಿತ್ರಿಕ ಪುರುಷನೋ ಹೇಗೆ?

(ರಾ. ಸಾ. ಫ. ಗು. ಹಳಕಟ್ಟಿ-ವಿಜಾಪುರ.)



ಮೊಳ್ಕಂಡ ಉಪನ್ಯಾಸಕರಾದ ಡಾ. ಚಿಲುಕೂರು ನಾರಾಯಣ ರಾಯರು ತಮ್ಮ ಉಪನ್ಯಾಸದಲ್ಲಿ ವಿಧಾನ ಮಾಡುವದೇನೆಂದರೆಃ— "ವೀರಶೈವ ಮತಕ್ಕೆ ಸೇರಿದ ಮತ್ತೊಂದು ಸಮಸ್ಯೆ ಇದೆ. ಬಸವೇಶ್ವರನು ಯಾವನು? ಅವನು ಚಾರಿತ್ರಿಕ ಪುರುಷನೋ ಅಲ್ಲವೋ ಎಂಬುದೇ ಆ ಸಮಸ್ಯೆಯು." ಈ ವಿಷಯವನ್ನು ಚರ್ಚಿಸುವಲ್ಲಿ ಅವರು ಹೇಳುವದೇನಂದರೆಃ— (೧) ಬಸವಣ್ಣನ ವಿಷಯವಾಗಿ ಜೈನ ಮತ್ತು ವೀರಶೈವ ಮತಗ್ರಂಥಗಳಲ್ಲಿ ಪರಸ್ಪರ ವಿರುದ್ಧವಾದ ವಿಷಯಗಳಿವೆ. (೨) ಬಸವಣ್ಣನನ್ನು ಕುರಿತು ಗ್ರಂಥಗಳಲ್ಲಿರುವ ವಿಷಯಕ್ಕೆ ಶಾಸನಾಧಾರ ಒಂದಾದರೂ ಇಲ್ಲ. ಇಂತಹ ಮಹಾಪುರುಷನನ್ನು ಕುರಿತು ಶಾಸನಗಳೆಲ್ಲಾ ಮೌನ ಮುದ್ರೆಯನ್ನು ವಹಿಸಿವೆ. (೩) ಬಿಜ್ಜಳನ ಕಾಲಕ್ಕೆ ಸೇರಿದ ಅಬ್ಬಲೂರು ಶಾಸನದಲ್ಲಿ ಮಾತ್ರ ಬಸವನ ಹೆಸರು ಕಾಣಬರುತ್ತದೆ. (೪) ಆದರೆ ವೀರಶೈವ ಗ್ರಂಥಗಳಲ್ಲಿ ಹೇಳಲ್ಪಟ್ಟ ಬಸವನು ಬ್ರಾಹ್ಮಣ ಮತದ್ವೇಷಿ, ಆದರೆ ಶಾಸನದ ಈ ಬಸವನು ಮುನಿಗವಲ್ಲಿಯಲ್ಲಿದ್ದ ಬ್ರಾಹ್ಮಣರ ಹೃದಯಾಬ್ಜಗಳಿಗೆ ಭಾಸ್ಕರನಂತಿದ್ದು ಅವರ ಗೌರವಕ್ಕೆ ಪಾತ್ರನಾದವನು. ಈ ಪ್ರಕಾರ ಕಾರಣಗಳನ್ನು ಶ್ರೀಯುತರು ಮುಂದುಮಾಡಿ ಬಸವನು ಚಾರಿತ್ರಿಕ ಪುರುಷನಲ್ಲೆಂದು ಉಲ್ಲೇಖಿಸಿದ್ದಾರೆ. ಆದರೆ ಇವುಗಳಲ್ಲಿ ೧ನೇ, ೪ನೇ, ೫ನೇ ಕಾರಣಗಳು ತೀರ ದುರ್ಬಲವಾಗಿದೆ. ಅವರು ತೋರಿಸಿದ ೩ನೇ, ೪ನೇ ಕಾರಣಗಳ ಮೇಲಿಂದ ಇಷ್ಟರಲ್ಲಿಯೇ ಪ್ರಸಿದ್ಧವಾದ ಶಿಲಾಶಾಸನಗಳನ್ನು ಅವರು ಚನ್ನಾಗಿ ವಿಮ

ಶಿಸಿಲ್ಲ, ಅಥವಾ ನೋಡಿಯೇ ಇಲ್ಲವೆಂದು ನಾವು ಹೇಳಬೇಕಾಗುತ್ತಿದೆ. ೨ನೇ ಕಾರಣವು ನಿಜವಿದ್ದರೆ ಮಾತ್ರ ಡಾಕ್ಟರವರು ಸಂದೇಹಿಸಿದಂತೆ ಸಂದೇಹ ಮಾಡಬೇಕಾಗುತ್ತಿತ್ತು. ಆದರೆ ಈಚೆಗೆ ಅನೇಕ ಶಿಲಾಶಾಸನಗಳು ವೀರಶೈವರ ಸುದೈವದಿಂದ ಹೊರಪಟ್ಟಿರುತ್ತವೆ. ಅವುಗಳ ಮೇಲಿಂದ ಬಸವೇಶ್ವರನು ಒಬ್ಬ ಚಾರಿತ್ರಿಕ ಪುರುಷನೆಂದು ಸಿದ್ಧವಾಗುತ್ತಿದೆ. ಅವುಗಳ ಕಡೆಗೆ ಡಾಕ್ಟರರ ಲಕ್ಷ್ಯವು ಹೋಗಿಲ್ಲ ಅಥವಾ ಅವುಗಳ ಅಸ್ತಿತ್ವವೂ ಸಹ ಅವರಿಗೆ ಗೊತ್ತಿರಲಿಕ್ಕಿಲ್ಲ. ಒಂದು ವೇಳೆ ಅವು ಅವರಿಗೆ ಗೊತ್ತಿದ್ದರೆ, ಅವರು ಈ ಬಗೆಯ ವಿಧಾನವನ್ನು ಮಾಡುತ್ತಿರಲಿಕ್ಕಿಲ್ಲವೆಂದು ನಾವು ಭಾವಿಸುತ್ತೇವೆ.

(೧) ಬಸವೇಶ್ವರನ ಚರಿತ್ರೆಯ ವಿಷಯವಾಗಿ ಡಾಕ್ಟರರು ಹೇಳುವಂತೆ ಜೈನ ಮತ್ತು ವೀರಶೈವ ಮತಗ್ರಂಥಗಳಲ್ಲಿ ವ್ಯತ್ಯಾಸಗಳಿರುವದೇನೋ ನಿಜವು. ಆದರೆ ಇಷ್ಟರಿಂದಲೇ ಬಸವನ ಅಸ್ತಿತ್ವವನ್ನು ಅಲ್ಲಗಳೆಯಲಿಕ್ಕೆ ಬರಲಾರದು. ಬಸವನ ವಿಷಯದಲ್ಲಿ ಜೈನ ಗ್ರಂಥಕಾರರು ಕಲುಷಿತ ಭಾವವುಳ್ಳವರಾಗಿದ್ದಾರೆಂಬುದು ಅವರ ಗ್ರಂಥಗಳಾದ ಬಿಜ್ಜಣರಾಯ ಪುರಾಣ ಮತ್ತು ವಿಜಲಾಂಕ ಕಾವ್ಯ ಇವುಗಳಿಂದ ಸ್ಪಷ್ಟವಾಗುತ್ತಿದೆ. ಆದ್ದರಿಂದ ಅವರು ಬಸವೇಶ್ವರನ ಚರಿತ್ರೆಯನ್ನು ಮಾರ್ಪಡಿಸಿ, ಅವನು ಮಂತ್ರಗಾರನೆಂತಲೂ, ಚೋರಚೋರರಿಗೆ ಆಶ್ರಯಕೊಡುತ್ತಿದ್ದನೆಂತಲೂ ವರ್ಣಿಸಿರುತ್ತಾರೆ. ಧಾರ್ಮಿಕ ಕ್ರಾಂತಿಕಾರರು ಆರಂಭದಲ್ಲಿ ಅನೇಕ ಶತ್ರುಗಳನ್ನು ಉಂಟುಮಾಡಿಕೊಳ್ಳುವ ಸಂಗತಿಗಳು ಅವರಿಗೆ ಒದಗುತ್ತವೆ. ಆದ್ದರಿಂದ ಇಂಥವರು ಇವರ ವಿಷಯವಾಗಿ ಜನರ ಮನಸ್ಸನ್ನು ಕಲುಷಿತ ಮಾಡುವ ಪ್ರಯತ್ನದಲ್ಲಿರುತ್ತಾರೆ. ಹೀಗೆ ಇದಿರಾಳುಗಳು ಮಾಡುವ ವರ್ಣನೆಗಳು ಅಥವಾ ವಿಧಾನಗಳು ಪೂರ್ಣ ವಿಶ್ವಾಸಾರ್ಹವಾದುವಲ್ಲ. ಆದರೆ ಇಷ್ಟರಿಂದಲೇ ಈ ಮಹಾಪುರುಷರು ಅಸ್ತಿತ್ವದಲ್ಲಿಯೇ ಇದ್ದಿಲ್ಲವೆಂದು ಹೇಳಲು ಶಕ್ಯವಾಗಲಾರದು.

೧೨ ನೇ ಶತಮಾನದಲ್ಲಿ ವೀರಶೈವ ಸಮಾಜದ ಮೂಲಕ ಕರ್ನಾಟಕದಲ್ಲಿ ಒಂದು ಕ್ರಾಂತಿಯುಂಟಾದುದು ನಿರ್ವಿವಾದವು. ಅದಕ್ಕೂ ಪೂರ್ವದಲ್ಲಿ ಈಗಿನಂತೆ ವೀರಶೈವ ಸಮಾಜದ ಅಸ್ತಿತ್ವವು ನಮ್ಮ ನಾಡಿನಲ್ಲಿ ಹೆಚ್ಚಾಗಿ ಇಲ್ಲದ್ದು ಆಗಿನ ವಾಙ್ಮಯ, ಶಿಲಾಶಾಸನ ಮೊದಲಾದವುಗಳಿಂದ ಗೊತ್ತಾಗುತ್ತದೆ. ಅಂದಬಳಿಕ ಈ ಮಹತ್ತರವಾದ ಸಾಮಾಜಿಕ

ಕ್ರಾಂತಿಯನ್ನು ಮಾಡಿದ ಪುರುಷನಾದರೂ ಯಾರು ಎಂಬುದನ್ನು ನಾವು ಕಂಡುಹಿಡಿಯಬೇಕಾಗುತ್ತದೆ. ಈ ಕಾಲದಲ್ಲಿ ಬಸವನ ಹೊರ್ತು ಮತ್ತಾರೂ ನಮ್ಮ ನಿದರ್ಶನಕ್ಕೆ ಬರುವದಿಲ್ಲ. ಅವನನ್ನು ಬಿಟ್ಟು ಬೇರೊಬ್ಬ ನಾರಾದರೂ ಇದ್ದಿದ್ದರೆ ಬಸವನಂತೆಯೇ ಅವನು ಕರ್ನಾಟಕದಲ್ಲಿ ಮತ್ತು ವೀರಶೈವ ವಾಙ್ಮಯ ಚರಿತ್ರೆಯಲ್ಲಿ ಹೆಸರುಗೊಳ್ಳುತ್ತಿದ್ದನು. ಅಂಥ ಪುರು ಷರಾರೂ ನಮಗೆ ಕಂಡುಬರುವದಿಲ್ಲ. ಆದರೆ ಅನೇಕ ಶಿವಶರಣರು ಆಗ ಉದ್ಭವಿಸಿದರೂ ಕೂಡ ಅವರು ಬಸವೇಶ್ವರನ ಸಂಗಡಿಗರೆಂದು ಅವರ ಚರಿತ್ರೆಗಳಿಂದ ತಿಳಿದುಬರುತ್ತಿದೆ. ಆದರೆ ಹಲಕೆಲವರು ಮಾತ್ರ ಬಸವನ ಹಿಂದೆ ಇದ್ದವರೆಂದು ನಾವು ಅನುಮಾನ ಮಾಡಬಹುದಾ ಗಿದೆ. ಆದರೆ ಈ ಎಲ್ಲರಕಿಂತಲೂ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿ ದವನು ಮತ್ತು ಅನೇಕ ಗ್ರಂಥಗಳಲ್ಲಿ ಮಿಗಿಲಾಗಿ ಸ್ತುತಿಸಲ್ಪಟ್ಟವನು ಬಸವೇಶ್ವರನೆಂಬುದು ಪ್ರಸಿದ್ಧವೇ. ಈ ಸ್ಥಿತಿಯಲ್ಲಿ ಬಸವೇಶ್ವರನು ಚಾರಿತ್ರಿಕ ಪುರುಷನೇ ಅಲ್ಲವೆಂದೆನ್ನುವದು ಸಾಹಸದ ಸಂಗತಿಯಾಗಿದೆ.

(೨) ಡಾ॥ ಚಿಲುಕೂರು ನಾರಾಯಣರಾಯರು ತಮ್ಮ ಉಪನ್ಯಾ ಸದಲ್ಲಿ ಅಬ್ಬಲೂರು ಶಿಲಾಶಾಸನವನ್ನು ಉಲ್ಲೇಖಿಸಿ ಅದರಲ್ಲಿ ಮಾತ್ರ ಬಸವನ ಹೆಸರು ಕಾಣಬರುತ್ತದೆಂದು ಹೇಳಿದ್ದಾರೆ. ಇದರಿಂದ ಅವರು ಈ ಶಾಸನವನ್ನು ನೋಡದೆ ಈ ರೀತಿ ಬರೆದಿರುತ್ತಾರೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ಬಸವನ ಉಲ್ಲೇಖವೇ ಇರುವದಿಲ್ಲ. ಅದು ಏಕಾಂತದ ರಾಮಯ್ಯನ ಶಿಲಾಶಾಸನವಾಗಿದೆ. ಇದರ ಸಂಪೂರ್ಣ ವಿವೇಚನೆಯು ಶಿವಾನುಭವ ೩ ನೇ ಸಂಪುಟ ೧೨ ನೇ ಸಂಚಿಕೆ ಯಲ್ಲಿ ಬಂದಿರುತ್ತದೆ. ಆದರಲ್ಲಿ ವೀರಶೈವ ಮತೋದ್ಧಾರದ ವಿಷಯ ವಾಗಿ ಮಾಡಿದ ಅದ್ಭುತ ಕಾರ್ಯಗಳು ಏಕಾಂತದ ರಾಮಯ್ಯನಿಗೆ ಸಂಬಂಧ ಪಡುತ್ತವೆ. ಅವುಗಳಿಗೂ ಬಸವನಿಗೂ ಏನೂ ಸಂಬಂಧ ಪಡು ವದಿಲ್ಲ. ಏಕಾಂತದ ರಾಮಯ್ಯನು ಬಸವನ ಕಾಲದಲ್ಲಿ ಉದ್ಭವಿಸಿದ ಅನೇಕ ಶಿವಶರಣರಲ್ಲಿ ಒಬ್ಬನು. ಇಂಥವನು ಬಸವನೇ ಎಂದು ಭಾವಿಸಿ ಡಾ॥ ನಾರಾಯಣರಾಯರು ಹೀಗೆ ಬರೆದುದು ತೀರ ತಪ್ಪಾಗಿರುತ್ತದೆ.

(೨) ಮುಂದೆ ಅವರು ಮನಿಗವಲ್ಲಿಯ ಶಿಲಾಶಾಸನದಲ್ಲಿ ಉಲ್ಲೇ ಖಿಸಲ್ಪಟ್ಟ ಬಸವನ ವಿಷಯವಾಗಿ ಬರೆದಿದ್ದಾರೆ. ಇವನು ಬಾಗೇವಾಡಿ ಯಲ್ಲಿ ಉದ್ಭವಿಸಿದ ಬಸವನಿಗೆ ಸಂಬಂಧಪಡುವದಿಲ್ಲೆಂದು ಸಿದ್ಧಮಾಡಲು

ಅವರು ಹೋಗಿದ್ದಾರೆ. ಈ ಮುಸಿಕವಲ್ಲಿಯ ಶಿಲಾಶಾಸನವು ಈಗ ವಿಜಾಪುರ ಪಟ್ಟಣಕ್ಕೆ ಸಮೀಪವರ್ತಿಯಾಗಿರುವ ಮನಗೋಳಿ ಗ್ರಾಮದಲ್ಲಿದೆ. ಈ ಶಾಸನದಲ್ಲಿ ಬಸವ ಎಂಬವನು ಉಲ್ಲೇಖಿಲ್ಪಟ್ಟಿದ್ದು, ಇವನು ಬಾಗೇವಾಡಿ ಬಸವನಿಂದ ಭಿನ್ನನೆಂಬ ವಿಷಯವಾಗಿ ಶಿವಾನುಭವ ಸಂಪುಟ ೧೩ ಪುಟ ೩೫೧ ಇದರಲ್ಲಿ ನಾವು ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಈತನು ಕಾಳಾಮುಖ ಪಂಥಿಯಾದ ಬಸವನು. ಇವನಿಗೂ ವೀರಶೈವ ಮತೋದ್ಧಾರಕನಾದ ಬಸವನಿಗೂ ಏನೂ ಸಂಬಂಧವಿಲ್ಲ. ಇಂಥವನನ್ನು ನಿಜವಾದ ಬಸವನೆಂದು ವೀರಶೈವರು ಭಾವಿಸಿರುವರೆಂದು ಡಾಕ್ಟರರವರು ನಿಷ್ಕಾರಣವಾಗಿ ಭಾವಿಸಿಕೊಂಡು ಅನೇಕ ವಿಧಾನಗಳನ್ನು ಮಾಡುತ್ತ ಹೋಗಿ ಇಷ್ಟರಿಂದಲೇ ಬಸವನ ಅಸ್ತಿತ್ವವೇ ಸಿದ್ಧವಾಗುವದಿಲ್ಲವೆಂದು ಅವರು ನಿರ್ಣಯಿಸಲು ಹೋಗಿದ್ದಾರೆ. ಆದರೆ ಹೀಗೆ ಅವರು ತಿಳಿಯುವಲ್ಲಿ ತಪ್ಪು ಗ್ರಹಿಕೆ ಮಾಡಿಕೊಂಡು ಅಡ್ಡ ಮಾರ್ಗವನ್ನು ಹಿಡಿದಿದ್ದಾರೆ.

(೩) ಆ ಮೇಲೆ ಅವರು "ಬಸವಣ್ಣನನ್ನು ಕುರಿತು ಗ್ರಂಥಗಳಲ್ಲಿರುವ ವಿಷಯಕ್ಕೆ ಶಾಸನಾಧಾರ ಒಂದಾದರೂ ಇಲ್ಲ. ಇಂತಹ ಮಹಾಪುರುಷನನ್ನು ಕುರಿತು ಶಾಸನಗಳೆಲ್ಲಾ ಮೌನಮುದ್ರೆಯನ್ನು ವಹಿಸಿವೆ" ಎಂದು ತಮ್ಮ ಉಪನ್ಯಾಸದಲ್ಲಿ ಉಲ್ಲೇಖಿಸಿದ್ದಾರೆ. ಆದರೆ ಅವರ ಈ ಉಲ್ಲೇಖವು ತೀರ ತಪ್ಪಾಗಿರುತ್ತದೆ. ಈಚೆಗೆ ಬಸವೇಶ್ವರನ ವಿಷಯವಾಗಿ ಶಾಸನಗಳಲ್ಲಿ ಕಂಡುಹಿಡಿಯಲ್ಪಟ್ಟ ಅಂಶಗಳು ಅವರಿಗೆ ತೀರ ಅಪರಿಚಿತವಾಗಿವೆಂಬುದು ಸ್ಪಷ್ಟವಾಗುತ್ತದೆ. ಈಗ ಬಸವೇಶ್ವರನ ಉಲ್ಲೇಖಗಳಿದ್ದ ಅನೇಕ ಶಿಲಾಶಾಸನಗಳು ದೊರೆತಿವೆ. ಒಂದು ವೇಳೆ ಉತ್ತರ ಕರ್ನಾಟಕ ಮತ್ತು ನಿಜಾಮು ಇಲಾಖೆಗಳಲ್ಲಿ ಈಗಲೂ ಇರುವ ಅಸಂಖ್ಯ ಶಿಲಾಶಾಸನಗಳನ್ನು ಸಂಶೋಧಿಸಿದ್ದಾದರೆ, ಬಸವೇಶ್ವರನ ಉಲ್ಲೇಖಗಳು ಅವುಗಳಲ್ಲಿ ಹೆಚ್ಚಿಗೆ ದೊರೆಯಬಹುದಾಗಿದೆ. ಆದರೆ ನಮಗೆ ಈ ವರೆಗೆ ದೊರೆದ ಶಿಲಾಶಾಸನಗಳ ಮೇಲಿಂದ ಬಸವೇಶ್ವರನು ಐತಿಹಾಸಿಕ ಪುರುಷನಿದ್ದಾನೆ, ಅವನು ಚಾರಿತ್ರಿಕ ಪುರುಷನು, ಎಂದು ನಿರ್ವಿವಾದವಾಗಿ ದೃಢಪಡುತ್ತಿದೆ. ಅವುಗಳನ್ನು ನಾವು ಈ ಲೇಖದಲ್ಲಿ ಸವಿಸ್ತಾರವಾಗಿ ವಿವರಿಸುವ ಭರಕ್ಕೆ ಬೀಳುವದಿಲ್ಲ. ಯಾಕಂದರೆ ಅವುಗಳು ಅನೇಕ ಸಂದರ್ಭಗಳಲ್ಲಿ ಶಿವಾನುಭವ ಪತ್ರಿಕೆಯಲ್ಲಿ ಆಗಿಂದಾಗ್ಗೆ ವಿಮರ್ಶಿಸಲ್ಪ

ಟ್ಟಿದೆ. ಆದ್ದರಿಂದ ಅವುಗಳನ್ನು ನಾವು ಇಲ್ಲಿ ಸ್ವಲ್ಪದರಲ್ಲಿ ಉಲ್ಲೇಖಿಸಿ ಈ ವಿಷಯವನ್ನು ಪೂರ್ತಿಗೊಳಿಸುತ್ತೇವೆ.

(೧) ಅರ್ಜುನವಾಡ ಶಿಲಾಶಾಸನವು:— ಈ ಶಿಲಾಶಾಸನದ ಪೂರ್ಣ ವಿವರಣೆಯು ಶಿವಾನುಭವ ಸಂಪುಟ ೩ ಸಂಚಿಕೆ ೯ ಇದರಲ್ಲಿ ಬಂದಿದೆ. ಇದರಲ್ಲಿ ಹೇಳಲ್ಪಟ್ಟ ಬಸವನು ಸಂಗನಬಸವನೆಂದು ಕರೆಯಲ್ಪಟ್ಟಿರುವುದಲ್ಲದೆ, ಅವನು ಬಾಗೇವಾಡಿ ಪುರವರಾಧೀಶ್ವರನಾದ ಮಾದಿರಾಜನ ತನೂಜನೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೆ. ಆತನ ಅಣ್ಣನ ವಂಶಜರ ಉಲ್ಲೇಖವು ಈ ಶಿಲಾಶಾಸನದಲ್ಲಿದೆ. ಈ ಶಿಲಾಶಾಸನದ ಪರಿಚಯವು ಡಾ॥ ನಾರಾಯಣರಾಯರಿಗೆ ಇದ್ದಿದ್ದರೆ ಅವರು ಈ ತರದ ವಿಧಾನವನ್ನು ಮಾಡುತ್ತಿದ್ದಿಲ್ಲವೆಂದು ನಾವು ಭಾವಿಸುತ್ತೇವೆ.

(೨) ಬಸವಣ್ಣನ ಉಲ್ಲೇಖವು ಧಾರವಾಡ ಜಿಲ್ಲಾ ಚೌಡದಾನಪುರ ಶಿಲಾಶಾಸನದಲ್ಲಿಯೂ ಬಂದಿರುತ್ತದೆ. ಇದು ಶಿವಾನುಭವ ಸಂಪುಟ ೪ ಪುಟ ೮೩ ಇದರಲ್ಲಿ ಕೊಡಲ್ಪಟ್ಟಿರುತ್ತದೆ. ಇದರಲ್ಲಿ ವೀರಶೈವ ಮತವನ್ನು ಜಗಕ್ಕೆ ತೋರಬೇಕೆಂದು ನಂದಿನಾಥನು "ಶ್ರೀ ಸಂಗಮೇಶನ ಪುತ್ರಂ ಬಸವಯ್ಯ" ಎಂಬ ಹೆಸರಿನಿಂದ ಉದಯಿಸಿದನೆಂದು ಹೇಳಲ್ಪಟ್ಟಿರುತ್ತದೆ.

(೩) ಕ್ರಿ. ಶ. ೧೨೮೦ ನೇಯ ಇಸ್ವಿಯಲ್ಲಿ ಹುಟ್ಟಿದ ಮುರಡೀಪುರ ಶಾಸನದಲ್ಲಿ " ಸಿರಿಯಾಳ, ದಾಸಮರ್ಯ, ಓಹಿಲ, ಉದ್ಭಟ, ನಂಬಿ, ಕುಂಬಾರಗುಂಡ, ಅಂಡವಲ, ಕರಿಕಾಲಚೋಳ, ಭೋಗದೇವ, ಬಾಣ, ಮಯೂರ, ಕಾಳಿದಾಸ, ಕೇಶಿರಾಜದಣ್ಣಾಯಕ, ಸುರಿಗೆ ಚೆಲ್ವಡರಾಯ, ಸಂಗನಬಸವಯ್ಯ, ಲಿನಿಮಿತಿ, ಕೇಶವರಾಜ, ಜಗದೇವದಣ್ಣಾಯಕ, ಏಕಾಂತದ ರಾಮಯ್ಯ, ಸೊನ್ನಲಿಗೆಯ ರಾಮಯ್ಯ, ಹುಲಿಗೆರೆಯ ಪೊನ್ನಯ್ಯ, ನೆಲುವಿಗೆಯ ಸಾಂತಯ್ಯ, ಈ ಶಿವಶರಣರ ಹೆಸರುಗಳು ಬಂದಿವೆ. ಇವರೆಲ್ಲರೂ ಶಿವಶರಣರಲ್ಲಿ ಬಹು ಪ್ರಸಿದ್ಧರಾಗಿದ್ದಾರೆ. ಇವರ ಮಾಲಿಕೆಯಲ್ಲಿಯೇ "ಸಂಗನಬಸವಯ್ಯ" ಎಂಬ ಹೆಸರಿನಿಂದ ಬಸವನು ಉಲ್ಲೇಖಿಸಲ್ಪಟ್ಟಿದ್ದಾನೆ.

(೪) ದೇವಗಿರಿ ಯಾದವವಂಶದ ರಾಮಚಂದ್ರನ (೧೨೭೧-೧೩೦೯) ಕಾಲದ ಕಲ್ಲೇದೇವರ ಪುರದ ಕಲ್ಲೇಶ್ವರ ದೇವಸ್ಥಾನದಲ್ಲಿಯ (ಜಗಳೂರು ೩೦ ನೆಯದು) ಶಾಸನದಲ್ಲಿ ಕೆಲವು ಶಿವಶರಣರ ಹೆಸರುಗಳು ಬಂದಿವೆ. ಅವು ಯಾವವೆಂದರೆ: - "ಚೇರ, ಚೋಳ, ನಂಬಿ, ಚಿಕ್ಕ, ಕಕ್ಕ, ಚೆನ್ನ, ಹೊನ್ನ, ಬಂಕ, ಬಸವರಾಜ, ಭೋಜಾದಿ ಮರ್ತ್ಯ ಲೋಕದ ಮಹಾ ಗಣಾಚಾರ"(*Epigraphica Carnatica* (*E. C*)*XI*) ಎಂದು ಇದ್ದು ಇದರಲ್ಲಿ ಬಸವರಾಜನ ಉಲ್ಲೇಖವಿದೆ.

(೫) ಅರಸಿಕೆರೆ ತಾಲೂಕಿನಲ್ಲಿರುವ ಹಿರಿಯೂರು ಗ್ರಾಮದಲ್ಲಿಯ ಕುಂಜೇಶ್ವರ ದೇವಾಲಯದಲ್ಲಿಯ (ಅರಸಿಕೆರೆ ೧೧೯ನೆಯ) ಶಾಸನದಲ್ಲಿ ಹೇಳಲ್ಪಟ್ಟಿರುವದೇನಂದರೆ:—

"ಸಿರಿಯೋಳ್ಪಂ ಬಸವಯ್ಯ ನೊಳ್ಪಿಸೆವ...ಬಾಣನುಂ ಧರ ಭೋಗಂ ಸಲೆಚೋಳನುದ್ಭಟನತರ್ಕ್ಯ ಸಿಂಧು ಬಲ್ಲಾಳನಿಂ ಧರೆ ಕೊಂಡಾಡುವ ದಾಸಿಮಯ್ಯನೆನಿಸಿರ್ದೀ ಭಕ್ತ ಸಂದೋಹ" ಎಂಬ ಉಲ್ಲೇಖವಿದೆ. ಇಲ್ಲಿ ಹೇಳಲ್ಪಟ್ಟ "ಬಸವಯ್ಯನು" ಶ್ರೀ ಬಸವೇಶ್ವರನೇ ಎಂಬುದು ಅವನ ಜತೆಗೆ ಸೇರಿಸಿ ಹೇಳಲ್ಪಟ್ಟ ಶಿವಶರಣರ ಹೆಸರುಗಳಿಂದ ಸ್ಪಷ್ಟವಾಗುತ್ತದೆ.

ಇವುಗಳ ಮೇಲಿಂದ ಡಾ. ನಾರಾಯಣರಾಯರು ತಮ್ಮ ಉಪನ್ಯಾಸದಲ್ಲಿ 'ಇಂತಹ ಮಹಾಪುರುಷನನ್ನು ಕುರಿತು ಶಾಸನಗಳೆಲ್ಲಾ ಮೌನಮುದ್ರೆಯನ್ನು ವಹಿಸಿವೆ' ಎಂದು ಹೇಳಿದ್ದು ಎಷ್ಟು ಅಸಮರ್ಥನೀಯವೆಂಬುದು ಸ್ಪಷ್ಟವಾಗುತ್ತದೆ.

---

# ಸೋಗು ಮಾಡುವೆ !

ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥ಪಲ್ಲ॥

ಜಗದ ಜನರ ತುಷ್ಟಿಗಾಗಿ,
ನನ್ನ ಸ್ವಾರ್ಥಪುಷ್ಟಿಗಾಗಿ,
ಅದನೆ ಫಲಿಪ ದೃಷ್ಟಿಗಾಗಿ,
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೧॥

ಬಡತನದ ಧಗೆಯನು ಮುಚ್ಚಿ
ಒಣಯ ಬೆಡಗನುಚ್ಚಿ ಬಿಚ್ಚಿ
ತನ್ನ ತನಕೆ ಕಿಚ್ಚು ಹಚ್ಚಿ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೨॥

ಕೆಯ್ಯಲೊಂದು ಪೈಯು ಇಲ್ಲ
ಇಲ್ಲವೆನ್ನೆ ನಾನು ಹೊಲ್ಲ
ಇದನು ಜಗದಿ ಕಲಿತೆನಲ್ಲ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೩॥

ಸತ್ಯ ಯೋಗ್ಯತೆಗಳು ಇಲ್ಲ
ಇಹವವೆಂದು ತೋರ್ಪೆನಲ್ಲ
ತೋರಿ ದಿಟದಿ ಮೆರೆವೆ ಖುಲ್ಲ
ಸೋಗು ಮಾಡುವೆ। ನೋಡು। ಸೋಗುಮಾಡುವೆ ॥೪॥

ಒಳಗೆ ಹೊರಗೆ ಒಂದೆ ಇರಲು
ತಿಳಿಸಿ ಜನಕೆ, ನಾನು ಮರುಳ
ಬೀಳುತಿರುವೆ ಬೊಕ್ಕಬೊರಲು
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೫॥

ನಾನು ಸುಳ್ಳೆ ಸಿಸ್ತು ಸಿಸ್ತು
ಪಡೆಯಲೆಳಕೆ ನೊಣಪ್ರಶಸ್ತಿ
ದೇಶವಕಟ ಅಸ್ತವ್ಯಸ್ತ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೬॥

ನುಡಿದ ತೆರದಿ ನಡೆಯಲಿಲ್ಲ
ನಡೆದ ತೆರದಿ ತೋರಲಿಲ್ಲ
ತೋರ್ಪುದೊಂದು ಸತ್ಯವಿಲ್ಲ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೭॥

ಇದ್ದುದನ್ನು ಇದ್ದ ತೆರದಿ
ತೋರ್ಪ ಧೈರ್ಯ ಬುದ್ಧಿಶುದ್ಧಿ
ಇಲ್ಲ ನನಗೆ! ಹೇಳ್ವೆ ಬುದ್ಧಿ
ಸೋಗು ಮಾಡುವೆ। ನೋಡು। ಸೋಗುಮಾಡುವೆ ॥೮॥

ಹೊಸದು ಹಾದಿ ಹುಡುಕಲಿಲ್ಲ
ಹಿಡಿದ ಹಾದಿ ಸರಿಯು ಇಲ್ಲ
ಸರಿಯದೆಂದೆ ತಿಳಿವೆನಲ್ಲ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೯॥

ದೇಶ ಕಾಲ ನೋಡಲಿಲ್ಲ
ಸ್ಥಿತಿಗತಿಗಳ ನೋಡಲಿಲ್ಲ
ನನ್ನ ಹುಚ್ಚು ಬೆಳೆವುದಲ್ಲ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೧೦॥

ಕುರುಡರಂತೆ ಹೆರವರನ್ನು
ಅನುಕರಿಸುತ, ಸತ್ವವನ್ನು
ಹಾಳುಗೈದೆ, ದೇಶವನ್ನು
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೧೧॥

ಧರ್ಮದಾತ್ಮವನ್ನು ಬಿಟ್ಟು
ಧರ್ಮಶವಕೆ ಮಾನ ಕೊಟ್ಟು
ಧರ್ಮ ಮರ್ಮ ಮರೆತು ಬಿಟ್ಟು
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೧೨॥

ಜಗದ ಜನರ ತುಷ್ಟಿಗಾಗಿ
ನನ್ನ ಸ್ವಾರ್ಥಪುಷ್ಟಿಗಾಗಿ
ಅದನೆ ಫಲಿಸ ದೃಷ್ಟಿಗಾಗಿ
ಸೋಗು ಮಾಡುವೆ। ನೋಡು। ಸೋಗು ಮಾಡುವೆ ॥೧೩॥

**"ವನವಾಸಿ"**

ವಾರ್ತೆಯು ಭೇದಿಸಿ ಗುರುಲಿಂಗ ಜಂಗಮವೇ ಸಚ್ಚಿದಾನಂದ ಬ್ರಹ್ಮ ವೆಂದರಿದು ತನುಮನಧನದಲ್ಲಿ ಸಂಬಂಧವ ಮಾಡಿಕೊಂಡು ತ್ರಿವಿಧ ಪದಾರ್ಥವನರ್ಪಿಸಿ ಆ ಪ್ರಸನ್ನ ಪ್ರಸಾದವ ಸ್ವೀಕರಿಸಿ ಪ್ರಸಾದವೆಂದೊಡೆ ಮಾಂಗಲ್ಯಸ್ವರೂಪವಾದ ಪರಶಿವತತ್ವ, ಆ ಪರಶಿವತತ್ವದಲ್ಲಿ ಸಮರಸೈಕ್ಯ ವಾದಾತನೇ ಷಟ್‌ಸ್ಥಲಜ್ಞಾನಿ ಎಂಬುದೀಗ ಇಂತೀ ಪ್ರಸಾದದ ವಿವರ ವನರಿತಲ್ಲಿ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಪ್ರಸನ್ನ ಪ್ರಸಾದವಾದನೆಂಬ ಶಬ್ದಕ್ಕರ್ಥ.

---

# ಪ್ರಸ್ತಾವನೆ.

ಇದರಲ್ಲಿ ನಾವು ಶಿವಲೆಂಕ ಮಂಚಣ್ಣಗಳ ವಚನಗಳನ್ನು ಪ್ರಸಿದ್ಧಿಸಿದ್ದೇವೆ. ವೀರಶೈವ ಗ್ರಂಥಕಾರರಲ್ಲಿ ಶಿವಲೆಂಕ ಮಂಚಣ್ಣ, ಶ್ರೀಪತಿ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತ ಈ ಮೂವರು 'ಪಂಡಿತತ್ರಯ'ರೆಂದು ಪ್ರಸಿದ್ಧರಾಗಿದ್ದಾರೆ. ಇವರಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಆಂಧ್ರದೇಶದಲ್ಲಿರುವ ದ್ರಾಕ್ಷಾರಾಮ ಕ್ಷೇತ್ರದಲ್ಲಿ ಜನಿಸಿ ಅತ್ಯಂತ ಪಾಂಡಿತ್ಯವನ್ನು ಹೊಂದಿ ವೆಲುನಾಡ ಚೋಳರಾಜನ ಆಸ್ಥಾನಕ್ಕೆ ಹೋಗಿ ಅಲ್ಲಿ ಬಂದ ವಾದಿಗಳನ್ನು ಜಯಿಸಿ ಪ್ರಖ್ಯಾತನಾದನೆಂತಲೂ ಕಡೆಗೆ ಶ್ರೀಶೈಲದಲ್ಲಿ ಶಿವೈಕ್ಯನಾದನೆಂತಲೂ ಪ್ರತೀತಿ ಇದೆ. ಶ್ರೀಪತಿ ಪಂಡಿತನು ಶ್ರೀಕರ ಭಾಷ್ಯವನ್ನು ಬರೆದು ಬಹು ಪ್ರಸಿದ್ಧವಾದನು. ಇವನು ತೆಲುಗು ದೇಶದಲ್ಲಿರುವ ಬೆಜವಾಡದಲ್ಲಿದ್ದು ಅನೇಕರನ್ನು ಶಿವಮತಕ್ಕೆ ಸೇರಿಸಿಕೊಂಡನು. ಅವನು ಅಗ್ನಿಯನ್ನು ಬಟ್ಟೆಯಲ್ಲಿ ಕಟ್ಟಿ ಅದನ್ನು ಬನ್ನಿಯ ಮರದ ಕೊಂಬೆಗೆ ಸಿಲುಕಿಸಿ ಏಳು ದಿನಗಳ ಪರ್ಯಂತ ಯಜ್ಞಾದಿ ಕಾರ್ಯಗಳಿಗೆ ಅದು ದೊರೆಯದಂತೆ ಮಾಡಿದನೆಂದು ಅನೇಕ ವೀರಶೈವ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಶಿವಲೆಂಕ ಮಂಚಣ್ಣನು ಉತ್ತರ ಹಿಂದುಸ್ತಾನದವನು. ಅವನ ಚರಿತ್ರೆಯು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ಶಿವಕಥಾಸಾಗರ, ಸಿಂಗಿರಾಜ ಪುರಾಣ ಈ ಮೊದಲಾದ ಗ್ರಂಥಗಳಲ್ಲಿ ದೊರೆಯುತ್ತದೆ. ಅವನು ವಾರಣಾಸಿಯಲ್ಲಿ ಶಂಭುಭಟ್ಟನಿಗೆ ಮಗನಾಗಿ ಜನಿಸಿದನು. ವೀರಶೈವ ದೀಕ್ಷೆಯನ್ನು ಹೊಂದಿ ಶಿವನೇ ಸರ್ವೋತ್ತಮನೆಂದು ಭಾವಿಸಿ ವಿಶ್ವನಾಥನನ್ನು ಭಕ್ತಿಯಿಂದ ಅರ್ಚಿಸುತ್ತ ಇರುತ್ತಿದ್ದನು. ಒಂದು ದಿನ ವೈಷ್ಣವರು ಶಿವನೇ ಸರ್ವೋತ್ತಮನೆಂಬುದಕ್ಕೆ ಒಂದು ದೃಷ್ಟವನ್ನು ತೋರು ಎಂದು ಅವನನ್ನು ಆಹ್ವಾನಿಸಿದ್ದಕ್ಕೆ, ಮಂಚಣ್ಣನು ನಾರಾಯಣನನ್ನು ಆಹ್ವಾನಿಸಿ ವಿಶ್ವೇಶ್ವರನ ಪಾದವನ್ನು ನಮಸ್ಕರಿಸುವಂತೆ ಮಾಡಿದನೆಂದು ಹೇಳಲ್ಪಡುತ್ತದೆ. ಅವನು ಶಿವಭಕ್ತಿಯುತನಾಗಿ ಶಿವಲೆಂಕನೆಂದು ಹೆಸರ್ಗೊಂಡು ಪ್ರತಿನಿತ್ಯ ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲಗಳಲ್ಲಿ ಕಾಶೀವಿಶ್ವನಾಥನಿಗೆ ತನ್ನ ಹತ್ತು

ಬೆರಳುಗಳನ್ನು ಕತ್ತರಿಸಿ ಸಮರ್ಪಿಸಿ ಅವುಗಳನ್ನು ಮರಳಿ ಸ್ವಾಮಿಯಿಂದಲೇ ಪಡೆಯುತ್ತ ಅರ್ಚಿಸುತ್ತಿದ್ದನೆಂಬ ದಂತಕಥೆ ಇದೆ. ಈ ರೀತಿ ಅವನು ಕಾಶಿಯಲ್ಲಿ ಇರುತ್ತಿರಲಾಗಿ ಕರ್ನಾಟಕದಲ್ಲಿ ಬಸವೇಶ್ವರನು ಕ್ರಿಯಾಚಾರ ಜ್ಞಾನಾಚಾರಗಳಿಂದೊಡಗೂಡಿದ ಶಿವಭಕ್ತಿ, ಅಷ್ಟಾವರಣ, ಷಟ್‌ಸ್ಥಲ, ಲಿಂಗಾಂಗ ಸಾಮರಸ್ಯಗಳುಳ್ಳ ವೀರಶೈವ ಧರ್ಮದ ಬಗ್ಗೆ ನಿಷ್ಠೆ ಮಿಗಿಲಾದವನಾಗಿರುವನೆಂಬ ವಾರ್ತೆಯನ್ನು ಕೇಳಿ ಕಲ್ಯಾಣ ಪಟ್ಟಣಕ್ಕೆ ಬಂದನು ಮತ್ತು ಅಲ್ಲಿ ಶಿವಾನುಭವ ಮಂಟಪದಲ್ಲಿ ಸೇರ್ಪಡೆಯಾಗಿ ಬಹು ಪ್ರಸಿದ್ಧನಾದನು.

ಈ ಪಂಡಿತತ್ರಯರು ಬಸವಣ್ಣನ ಕಾಲಕ್ಕೆ ಸಮೀಪವರ್ತಿಯಾಗಿರುತ್ತಾರೆ. ಇವರನ್ನು ವೀರಶೈವ ಕವಿಗಳೆಲ್ಲರೂ ತಮ್ಮ ಗ್ರಂಥಗಳಲ್ಲಿ ಬಹಳ ಸ್ತುತಿಸಿದ್ದಾರೆ. ಶಿವಲೆಂಕ ಮಂಚಣ್ಣನು ಅನೇಕ ವಚನಗಳನ್ನು ರಚಿಸಿದ್ದಾನೆ. ಆದರೆ ನಮಗೆ ದೊರೆದವುಗಳನ್ನಷ್ಟೇ ಈ ಗ್ರಂಥದಲ್ಲಿ ಅಚ್ಚು ಹಾಕಿದ್ದೇವೆ.

ಈ ವಚನಕಾರನ ಅಜ್ಜನು ಸೋಮಶಂಭುದೇಶಿಕನು. ಇವನಾದರೂ ಬಹಳ ವಿದ್ವಾಂಸನು. ಅವನು 'ಕಾಮಿಕಾದ್ಯಖಿಳ ಶಿವಕಥಿತ ತಂತ್ರಾವಳಿಗೆ ಪ್ರೇಮದಿಂ ವೃತ್ತಿದೀಪಿಕೆಗಳಂ ಬಿತ್ತರಿಸಿ ಸೋಮಧರ ಸಮಯಮಂ ಧರಣಿಯೊಳ್ ನಿರಸಿದ' ನೆಂದು ಆರಾಧ್ಯ ಚರಿತ್ರೆಯಲ್ಲಿ ಹೇಳಲ್ಪಟ್ಟದೆ.

ವಿಜಾಪುರ
ತಾ॥ ೧೨-೬-೪೦

ಫ. ಗು. ಹಳಕಟ್ಟಿ.
ಸಂಪಾದಕ

# ಉರಿಲಿಂಗದೇವನ ವಚನಗಳು.

## ಭಕ್ತಸ್ಥಲ

೧. ಎಮ್ಮನಲ್ಲನವ್ವಾ, ನಲ್ಲರಿಗೆ ನಲ್ಲನು. ವಂಚನೆಗೆ ನೆರೆಯನು. ನಿರ್ವಂಚನೆಗೆ ನೆರೆವನು ಎನ್ನ ಉರಿಲಿಂಗ ದೇವನು.

೨. ಕಾಯಕ್ಕೆ ಕಾಹ ಕೊಡುವರಲ್ಲದೆ, ಮನಕ್ಕೆ ಕಾಹನು ಕುಡುವರೇ ಕೆಳದಿ? ಇಂತಪ್ಪ ನಲ್ಲನನೆಲ್ಲಿಯೂ ಕಾಣೆ. ಇಂತಪ್ಪ ಪುರುಷನನೆಲ್ಲಿಯೂ ಕಾಣೆ. ಇಂತಪ್ಪ ಚೋದ್ಯನನೆಲ್ಲಿಯೂ ಕಾಣೆನು. ಸದ್ಗುಣದ ಕಾಹನು ಎನ್ನ ಮನಕ್ಕೆ ಕೊಟ್ಟನುರಿಲಿಂಗದೇವನು.

೩. ಕುಳಿತಾಗ ಭಕ್ತ, ಮುನಿದಾಗ ಮಾನವ. ಗೋಸುಂಬೆಯಂತೆ ಎನ್ನ ಮನವು. ಗಳಿಗೆಗೊಂದು ಪರಿ. ಈಶ್ವರಾ, ನಿಮ್ಮ ಜಂಗಮವನು ದಾಸೀನವ ಮಾಡಿ, ದಾಸೋಹವಿಲ್ಲದ ಅತಿ ದೂಷಕ, ದ್ರೋಹಿ ನಾನಯ್ಯಾ. ಬೇಸತ್ತೆನೀ ಮನಕ್ಕೆ. ಸುಬುದ್ಧಿಯ ಹೇಳಿ, ಈಶ್ವರಾ, ಸಂತಯಿಸಯ್ಯಾ ಉರಿಲಿಂಗದೇವಾ.

೪. ಕಾಮನ ಕೊಂದಂದು ಪಟ್ಟಕ್ಕೆ ನಿಂದ ಗರುವ ಕಾಮು ರಾಜರಾಜನವ್ವಾ. ರಾಜಾಧಿರಾಜ. ಕಂಡವರೆಲ್ಲರ ಹೆಂಡಿರ ಮಾಡಿ ನೆರೆವ ಮಹಾಕಾಮಿಯು ಕೇಳಾ! ಇಂತಪ್ಪ ಕಾಮಿಯನತಿಕಾಮದಿಂದ ಕಾಮಿಸಿದೆನವ್ವಾ ಉರಿಲಿಂಗದೇವನ.

೫. ನೆನಹಿನ ನಲ್ಲನು ಮನೆಗೆ ಬಂದರೆ, ನೆನವುದಿನ್ನಾರನು ಹೇಳವ್ವಾ? ನೆರೆವ ಕ್ರಿಯಲ್ಲಿ ನೆರೆದು ಸುಖಿಯಹುದಲ್ಲದೆ ನೆನವುದಿನ್ನಾರನು? ನೆನಹಿನ ನಲ್ಲನುರಿಲಿಂಗದೇವನ ಕರಸ್ಥಲದಲ್ಲಿ ಕಂಡ ಬಳಿಕ ನೆನವುದಿನ್ನಾರನು ಹೇಳವ್ವಾ?

೬. ಲಿಂಗ ಕರಸ್ಥಲಕ್ಕೆ ಬಂದ ಮತ್ತೆ, ಕಂಗಳು ತುಂಬಿ ಒರೆಯದಿರ್ದಡೆ, ಆ ಲಿಂಗಪೂಜೆ ಏಕೆ? ಲಿಂಗವ ಜಿಹ್ವೆಯಲ್ಲಿ ನೆನೆವಾಗ ಅಂಗವ ಮರೆಯದಿರ್ದಡೆ ಆ ಲಿಂಗದ ನೆನಹದೇಕೆ? ಲಿಂಗವಾರ್ತೆಯ

ಕಿವಿತುಂಬಿ ಕೇಳಿ ಸರ್ವಾಂಗ ಝೊಂಪಿಸಿ ಮನ ಮಗ್ನವಾಗಿರದಿರ್ದಡೆ ಉರಿಲಿಂಗತಂದೆಯ ಸಿರಿಯ ನೆನೆಯಲೇಕೆ?

೭. ಮಹಾ ಬೆಳಗಿನ ಲಿಂಗವ ಕೈಯ್ಯಲ್ಲಿ ಕೊಟ್ಟರೆ, ಕೊರಳಲ್ಲಿ ಕಟ್ಟಿಕೊಳಲೇಕೆ? ನೋಡುವ ಕಣ್ಣ ಮುಚ್ಚಿದ ಮತ್ತೆ ತನಗೆಡೆಯಾಟ ಉಂಟೇ? ಲಿಂಗವ ಹಿಂಗದೆ ಅಂಗೈಯ್ಯಲ್ಲಿ ಕೊಟ್ಟ ಮತ್ತೆ ಚಿತ್ರದಲ್ಲಿ ಹಿಂಗದಿರಬೇಕು. ಉರಿಲಿಂಗ ತಂದೆಯ ಸಿರಿಯ ಭಾಷೆ.

೮. ನಲ್ಲನನೊಲ್ಲೆನೆಂದು ಮುನಿದು ನಾನಗಲಲು ಅಗಲುವ ಠಾವೆಲ್ಲಾ ತಾನೆಲಗವ್ವಾ! ನಲ್ಲನಿಲ್ಲದೆಡೆ ಇಲ್ಲ. ಆಗಲಿಕೆಗಿಂಬಿಲ್ಲ. ಮುನಿದು ನಾನೇಗುವೆನು? ಶರಣು ಗತಿಯೊಗುವೆನು ಉರಿಲಿಂಗದೇವನ.

೯. ಒಂದಲ್ಲ, ಎರಡಲ್ಲ, ಮೂವ್ವರು ಹೆಣ್ಣುಗಳ ಮರೆಯಲ್ಲಿಪ್ಪವನ ನೆರೆಯಲೆಂತವ್ವ! ಹೆಣ್ಣಿನ ಮರೆಯ ಹೊಗುವ ಕೇಳವ್ವ ಕೇಳದಿ. ಲೋಗರ ಪತಿಯನು ಅರಸಿಕೊಂಡಿಪ್ಪ ಚಂಡಿಯರಿಗೆ ಮತ್ತೆ ನಾಚಿಕೆ ಇಲ್ಲ ಕೇಳವ್ವಾ. ಅವಂದಿರ ಝುಂಕಿಸಿ ತೊಲಗಿಸಿರೆಂದ ಉರಿಲಿಂಗದೇವ.

೧೦. ಇಬ್ಬರಿಗೊಂದಂಬ ತೊಡುವೆ ಗಡ ಕಾಮಾ. ಅರಿದರಿದು ಬಿಲ್ಲುಗಾರನಹೆಯೋ. ನೀ ಎಸೆವಿಬ್ಬರು ಬಂದಿಹರು ಗಡಾ. ಇದು ಹೊಸತು. ಚೋದ್ಯವೀ ಸರಳ ಪರಿಯ ನೋಡಾ! ಎನಗೆಯೂ ಉರಿಲಿಂಗದೇವಸಿಗೆಯೂ ತೊಟ್ಟಿಸು. ನಾವಿಬ್ಬರೊಂದಾಗೆ ನೀ ಒಲ್ಲಾಳನಹೆ ಎಲೋ ಕಾಮಾ.

೧೧. ಆತನ ಬಿರಿದೆನ್ನ ಉರವಲ್ಲಿದೆ ನೋಡಿರಯ್ಯಾ! ಏಕೆ ಬಂದಿರೋ, ಎಲೆ ಅಣ್ಣಗಳಿರಾ. ನಿಮಗಪ್ಪುವುದಕ್ಕೆಡೆಯಿಲ್ಲ. ನೀವಪ್ಪುವಡೆ ಅಡ್ಡಬಂದಿಹನೆನ್ನ ನಲ್ಲ. ಏಕೆ ಬಂದಿರೋ ಉರಿಲಿಂಗಗೇವನಪ್ಪಿದ ಹಿಪ್ಪೆಗೆ.

೧೨. ಗಾಡಿಗ ನಲ್ಲನು ಕಾಡಿನೆಲಗೆ. ಕೂಡಿಹನಗಲಿಹನೆನ್ನ. ನೀನದ ಮಾಣಿಸು. ಅವನ ಅಗಲಿ ಕೂಡುವ ಬೇಟದ ಸುಖವನು ಮುಗುದೆ ನೀನರಿಯೆ. ಆಗಲಿವ ವಿರಹಿಯು ಕೂಟದ ಸುಖವನು ಉರಿಲಿಂಗದೇವ ಬಲ್ಲನು ಕೆಳದಿ.

ತಂದೆರಡು ಮುಗಿಲ ಮುಟ್ಟುವ ಕಂಬಮಂ ನೆಟ್ಟು
ಶಿವಶಾಸನಸ್ತಂಭವಂ ತಂದು ನೆಡುವಂತೆ
ಭವನ ಭಕ್ತಿಯ ನೀಳ್ದ ನಿಷ್ಠೆಯಂ ನೆಡುವಂತೆ
ನಟ್ಟನಡುವೊಂದಸಿಯ ತೊಲೆಯನಡ್ಡಂನಿಲಿಸಿ
ಕಟ್ಟಿದಂ ಕಾರ್ಬೊನ್ನಸಂಕಲೆಗಳಂ ತರಿಸಿ
ಅದರ ತುದಿಯೊಳಗೆರಡು ಕೊಪ್ಪರಿಗೆಯಂದದಿಂ
ಹವಣಿಸುವ ಹಲ್ಲೆಯಂ ಲಂಬಿಸಲ್ಕಂದದಿಂ
ಇಂತು ಭಕ್ತಿಯನೆ ತೂಗುವ ತೊಲೆಯನಳವಡಿಸಿ
ಮುಂತೆ ನಿಚ್ಚಣಿಗೆಗಳನೊಂದೆರಡನಳವಡಿಸಿ
ಯಯ್ಯ ಬಾರೈ ಇರಿಸು ನಿನ್ನ ಕೋವಣಮುಮಂ
ಅಯ್ಯಯ್ಯ ನೋಡಲಿಕ್ಕೇನದರ ತೂಕಮಂ
ಎಂದು ನುಡಿಯಲ್ಕೆ ಮಿಗೆ ಮನದೊಳಗೆ ನಸುನಗುತೆ
ತಂದಿಕ್ಕಿದಂ ತ್ರಾಸಿನೊಳಗೆ ಕೌಪಂ ನಗುತೆ
ಇಕ್ಕೆ ನೆಲನಂ ಹತ್ತಿತೊಂದೆಸೆಯ ಹಲ್ಲೆಯದು
ಮಿಕ್ಕು ನೆಗೆಯಿತ್ತು ತಾರಾಪಥವ ಮುತ್ತೊಂದು
ನೆಗೆಯೆ ನಿಚ್ಚಣಿಕೆಗಳನಿಟ್ಟು ನಲವಿಂದೇರೆ
ಜಗವೆಲ್ಲ ಮಿಗೆ ಪೊಸತು ಪೊಸತೆನುತಿರಲ್ಕೇರೆ

ಪಳಿಯ ಪಟ್ಟಾವಳಿಯ ದಿಂಡುಗಳನೊಟ್ಟುತಿರೆ
ತೊಳತೊಳಪ ದಿವ್ಯ ವಸ್ತ್ರಾವಳಿಯನೊಟ್ಟುತಿರೆ
ಹಲ್ಲೆ ಚಲಿಸದೆ ತೊಲಗದಲುಗದಲ್ಲಾಡದಿರೆ
ಅಲ್ಲಲ್ಲಿ ಪುರಜನಂ ಕಂಡು ಬೆರಗಾಗುತಿರೆ
ನೆರೆಯ ವ್ಯವಹಾರಿಗಳ ವಸ್ತ್ರಮಂ ತಂದಿರಿಸಿ
ಪುರದೊಳಗೆವುಳ್ಳ ವಸ್ತ್ರವನೆಲ್ಲ ತಂದಿರಿಸಿ
ಅಳವಡಿಸಿ ಮೇಲೆ ಮೇಲನುವಾಗಲೊಟ್ಟುತಿರೆ
ತೊಲಗದತ್ತಿತ್ತ ಚಲಿಸದೆ ಹಲ್ಲೆ ಮಿಡುಕದಿರೆ
ಕಂಡಮರನೀತಿಗಳ ಮನೆಯೊಳುಳ್ಳರ್ಥಮಂ
ತಂಡತಂಡದ ರತ್ನಖಚಿತದಾಭರಣಮಂ
ಪೊತ್ತಡರೆ ತಂದು ಬೆಟ್ಟದ ತೆರದೊಳೊಟ್ಟುತಿರೆ
ಮತ್ತೆ ನೆಲದೊಳಗೆ ನೆಟ್ಟ ತೆರನಂತೆ ಚಲಿಸದಿರೆ

ಬೇಳಾಗಿ ಬೆಂಡಾಗಿ ಯಮರನೀತಿಗಳಂದು
ಹಾಳಾದ ಕಚ್ಚುಟವಿದೆಂತು ಸಾರಿತ್ತೆಂದು
ನೋಡಿ ಮನದೊಳಗೆ ತಲೆದೂಗಿ ಬೆರಗಾಗುತಿರೆ
ನೋಡುವ ಜನಂ ಕೌತುಕಂಬಟ್ಟು ಸುಯ್ಗರೆವುತಿರೆ

ಪುರಜನವ ಪರಿ ಜನವ ಸುಡಬಂದುದೀ ಕೌಪು
ನೆರೆದವರ ನಿಂದವರನಂಜಿಸಿತ್ತೀ ಕೌಪು
ಏನೇಳ್ವೆನಿದು ಮಾಯೆ ಯೆಂದು ನುಡಿವರ್ಕೆಲರ್
ದೇವನೊಲವಿಂ ಕಾಡಬಂದನೆಂಬರ್ಕೆಲರ್
ಅವುದರಿದಮರನೀತಿಗಳ್ಗೆ ಯೆಂಬರ್ಕೆಲರ್
ಈವನಂ ಕೆಡಿಸಿದಂ ಪಾಪಿ ಎಂಬರ್ಕೆಲರ್
ಇಂತು ಭಕ್ತರ್ಗಿತ್ತ ಫಲವಿದೆಂಬರ್ಕೆಲರ್
ಎಂತಪ್ಪುದಕಟ ಎನ್ನುತಿರ್ಪರ್ಕೆಲರ್
ಇಂತು ಜನವೆನುತಮಿರಲಮರನೀತಿಗಳಂದು
ಚಿಂತಿಸಿದನೊಂದ ಶಿವನೊಲ್ವ ತೆರನಂ ನಿಂದು
ಅರಿದೆನರಿದೆಂ ಯಿದಕೆ ಸರಿತೂಕಮಂ ಕಂಡೆ
ನರಿದೆನಿಂತಿದಕೆ ತಕ್ಕುಪಮಾನಮಂ ಕಂಡೆ
ನೀ ಭಕ್ತನೆಡೆಕೆಡೆಯ ಭಕ್ತನಲ್ಲಂ ನೋಡ
ಈ ಭಕ್ತನಂ ಮೆಚ್ಚಿಸುವೆನೀಗಳುಂ ನೋಡ

ಎಂದು ತನ್ನಯ ಸತಿಯುಮಂ ಪುತ್ರನಂ ಕರಿಸಿ
ಬಂದ ಮಗನಂ ನೋಡಿ ಬಿಗಿಯಪ್ಪಿ ಮಿಗೆ ಹರಿಸಿ
ಮಗನೆ ನೀ ಮಾಳ್ಪ ಬೆವಹಾರವದು ಸಾಲ್ಗಯ್ಯ
ಮಗನೆ ಕುಡುವುದು ಕೊಂಬುದುಂ ಪೂರ್ಣವಿಂದಯ್ಯ
ಕೇಳಯ್ಯ ಮಗನೆ ಭಕ್ತರ್ಗೆ ಬೆಸಕೆಯ್ವುದುಂ
ಶೂಲಿ ತಾನೇ ಕೊಂಡನೇನೆಂಬೆನಿಂತಿದಂ
ಕಚ್ಚುಟಕ್ಕಾಳಾದೆವಾವೆಲ್ಲರುಂ ಮಗನೆ
ಯೊಚ್ಚತಂಗೊಂಡ ಭಕ್ತಂ ನಮ್ಮನೆಲೆ ಮಗನೆ
ಅರ್ಥಿಯುಮನೊಪ್ಪಮುಂ ಕೆಡಿಸಿತ್ತು ಕೋವಣಂ
ಅರ್ಥಮುಮನೆಮ್ಮುಮಂ ಕೊಂಡುದೀ ಕೋವಣಂ
ಇನ್ನಂಜಲಾಗದೆಲೆ ಕಂದ ಕಲಿಯಾಗೆನುತೆ

ತನ್ನ ಕೆಯ್ಮುಟ್ಟಿ ಭಸಿತವುನೆಯ್ಯುದ್ಧೂಳಿಸುತೆ
ರುದ್ರಾಕ್ಷಿಗಳನಿಕ್ಕಿ ಹೊಸ ದುಕೂಲವುನುಡಿಸಿ
ರುದ್ರನೇ ಬಲ್ಲನೆಂದೆನುತೆ ಮಗನಂ ನಡಿಸಿ
ಮಗನ ಕೈವಿಡಿದು ನಿಚ್ಚಣಿಕೆಗೇರಿಸುತಮಿರೆ
ಮಗನೇಕೆ ಯಾನಿದ್ದೇನೆಂದು ಸತಿ ನುಡಿವುತಿರೆ
ಮಗನೊಳುಂ ನಿನ್ನೊಳುಂ ತೀರ್ಪುದೇ ಯಿದು ನೋಡ
ಜಗಕೆ ವೈಚಿತ್ರ್ಯವಾಗದೆ ಪೋಗದಿದು ನೋಡ
ಎನುತೆ ತನ್ನಯ ಕುಮಾರನನೇರಿಸುತ್ತಿರಲ್
ಜನವರಿದದೆಲ್ಲವಂ ಮನದಿ ಮರುಗುತ್ತಿರಲ್

ಇರ್ದಿರ್ದು ಕಚ್ಚುಟವನೇಕೆ ತಂದಂ ಭಕ್ತ
ನಿರ್ದಿರ್ದು ಈ ಪುರಕೆ ವ್ಯತ್ಯಯವಾದಂ ಭಕ್ತ
ನಿಂತಪ್ಪ ಕಂದನಂ ಕಚ್ಚುಟಕೆ ಮಾರಿದಂ
ಎಂತಪ್ಪುದೋ ಅಮರನೀತಿ ಕಲಿಯೇರಿಸಿದ
ನೆನುತಿರಲ್ಪುತ್ರನಂ ಹಲ್ಲೆಯೊಳಗಿರಿಸಲ್ಕೆ
ತೊನೆದು ಹತ್ತಿದ ಹಲ್ಲೆ ಮೇಲೆನಸು ನೆಗೆಯಲ್ಕೆ
ಕಂಡಮರನೀತಿಯು ಬು ಬು ಬೂ ಯೆಂದು ಬೊಬ್ಬಿರದು
ಕೊಂಡೆನಿನ್ನೇನು ಸತ್ಯದ ಕೋಂಟೆಯಂ ಕವರ್ದು
ಎನುತೆ ಬಾಹಪ್ಪಳಿಸಿ ಕುಣಿವುತ್ತಲಿಳಿತಂದು
ನಿನಗೆ ಸಂತೋಷವೇ ಭಕ್ತಯ್ಯ ಪೇಳೆಂದು
ನುಡಿಯೆ ಭಕ್ತ ಕೇಳಿದೇಕೆ ಇಷ್ಟಾಸುರಂ
ಬಡವರ್ಗೆ ತಕ್ಕುದಲ್ಲಯ್ಯ ನಿನ್ನಾಸುರಂ
ಕೊಂಡುದಂ ಕೊಡುವುದಕ್ಕಿನಿತು ಸಂಕಟಮುದಕೆ
ಕೊಂಡುದೇ ಇಲ್ಲೆಂದು ನುಡಿಯೆ ಸಾಕಾಯ್ತೆಮಗೆ
ಮಗನನೇರಿಸು ಯೆಂದು ಪೇಳ್ದಿವೇ ನೀನರಿಯೆ
ಮಗುವುತನದಾಟವಲ್ಲವೆ ಹೇಳ್ಪುದೆಲ್ಲರಿಯೆ
ಮಗನುವುಂ ವನಿತೆಯುಂ ನೀನುಮೇರಿದೊಡೇನು
ಜಗವುಮೀ ನೆರೆದ ಜನರೆಲ್ಲರೇರಿದೊಡೇನು
ಎಮಗೆಮ್ಮ ಕೌಪಿಂಗೆ ಸರಿಯಾಗೆ ಸಾಲ್ಗೆನಲ್
ಎಮಗೆ ನಿಮ್ಮೊಡನೆ ತರ್ಕವದೇತಕೆಂದೆನಲ್

ಇವರ ನುಡಿ ಪೊಸತೆಮಗೆನುತ್ತೆ ತಮ್ಮರಸಿಯುಂ
ಶಿವನೊಲ್ದು ಮೆಚ್ಚಿಕೊಂಡರೆನಿಚ್ಚಣಿಗೆಯುಂ
ಏರಲರಿಯದೊಡೆ ತಾನೆತ್ತಿಕೊಂಡೇರುತುಂ
ಮೀರಿ ಶಂಕರನ ಸದ್ಭಕ್ತಿಯುಂ ತೋರುತುಂ
ವನಜವಂ ಕಚ್ಚುಟಿಕೆ ತೂಗಲಿಡುವಂದದಿಂ
ಕನಕಲತೆಯುಂ ಕಚ್ಚುಟಿಕೆ ತೂಗುವಂದದಿಂ
ತ್ರಾಸಿನೊಳಗಿರಿಸಿದಂ ಚನ್ನ ಸುಕುಮಾರಿಯುಂ
ಲೇಸೆನುತೆ ಜಗವೆಲ್ಲ ಕೊಂಡಾಡೆ ಧೀರೆಯುಂ
ಇರಿಸೆ ಮುನ್ನಿಂದ ವುನ್ನತವಾದುದಾ ಹಲ್ಲೆ
ಹರಿಸದಿಂದಮರನೀತಿಗಳ್ ಮನದೊಳು ಗೆಲ್ಲೆ
ಆರುತಂ ಬೊಬ್ಬಿಡುತ್ತಿಳಿತಂದು ನೋಡುತುಂ
ತೋರವಾಗುತೆ ಚತುರ್ಭುಜನಾಗಲಾಡುತುಂ
ಹರಿಸದಿ ವಿಭೂತಿಯುಂ ಉದ್ಧೂಳನಂ ಮಾಡಿ
ಸಿರವುರಂ ಹಸ್ತದೊಳ್ ರುದ್ರಾಕ್ಷಿಯುಂ ಸೂಡಿ
ಚಂದದ ದುಕೂಲವುಂ ತೆಗೆದುಟ್ಟು ಬಿಗಿದುಟ್ಟು
ನಿಂದ ಚೋಳಾದಿಗಳ್ ಕೈಮುಗಿಯೆ ಪೊರಮುಟ್ಟು
ನಡೆತಂದು ರಂಗಮಂಟಪದ ನಡುವುಂ ನಿಂದು
ವ್ರುಡನೆ ಯುವಧಾರೆನ್ನ ತಂದೆ ಕೈಕೊಳ್ಳೆಂದು
ಪಟ್ಟಾವಳಿಯು ಪೂಜೆ ಪೂರ್ಣವೆ ಯಿಂದೆನಲ್
ಕಟ್ಟುಗಟ್ಟಿತೆ ಭಕ್ತಕುಲದ ಬರವಿಂದೆನಲ್
ಅಮರನೀತಿಯು ಭಕ್ತಿ ಕೆಯ್ಗೂಂದಿತೇ ದೇವ
ಅಮರನೀತಿಯು ಭಕ್ತಿ ಕಹಿಯಾದುದೆಲೆ ದೇವ
ಶಿವನನರ್ಚಿಸಿದಕ್ಕೆ ಫಲವಾಯ್ತು ಯೆಲೆ ತಂದೆ
ಇವರ ಕೋವಣವಿಂದು ವ್ರೊಳ್ಳುಮಾಡಿತೆ ತಂದೆ
ಎಂದೆನುತೆ ಬೀಳ್ಕೊಂಡು ತಿರುಗಿ ಬಂದಂ ಬಂದ
ಅಂದಾಹ ಭಕ್ತರ್ಗೆ ಭಾಷೆಗೊಡುತುಂ ನಿಂದ

ಎಲೆ ಗಣಂಗಳಿರ ಬಿನ್ನಪವನವಧರಿಸುವುದು
ಸಲೆ ನಿಮ್ಮಡಿಂಗರಿಗನೆಂಬುದಂ ಸಲಿಸುವುದು
ಸಲಹಿದಿರಿ ನೀವೆನ್ನನಿನಿತು ದಿನವಳ್ಕರಿಂ

ಸಲೆ ಭಕ್ತಿವಂತನಾದೇಂ ನಿಮ್ಮ ದೂಸರಿಂ
ನಿಮ್ಮ ಪದರಜವೆ ಬಾಯ್ಬೆಣ್ಣೆಯಾದುದ ಕೇಳಿ
ನಿಮ್ಮ ಪಾದವೆ ತೊಟ್ಟಿಲಾಗಿ ಬೆಳೆದೇಂ ಕೇಳಿ
ನಿಮ್ಮ ಬರವೇ ಬೆಸನವಾಗಿರ್ಪೆ ನಾನಯ್ಯ
ನಿಮ್ಮ ಬರವೇ ಹರಣವಾಗಿರ್ಪುದೆನಗಯ್ಯ
ನಿಮ್ಮ ಗೋಷ್ಠಿಯ ಸುಖವನಾರ್ಪಡೆವರೆಲೆ ದೇವ
ಬೊಮ್ಮಾದಿಗಳ್ ಬಯಸಿ ಬಾಯೊರೆವರೆಲೆ ದೇವ
ಇಂತಪ್ಪ ಭಾಗ್ಯಮಂ ತಪ್ಪಿಸಿದನೀ ಭಕ್ತ
ನಿಂತಪ್ಪ ಸಮಸುಖವನಡಗಿಸಿದನೀ ಭಕ್ತ
ಅಧಿಕವಾಯಿತ್ತು ಭಕ್ತನ ಕೌಪಿನೊಳಿಗಂ
ಪದಮುಲಂ ಸದ್ಭಕ್ತ ಸತ್ಯನಿಧಿಯೊಳಿಗಂ
ಸಲ್ವೆನಿವರೊಡನೊಕ್ಕಲಪ್ಪೆನಿನ್ನಿರಲಿಲ್ಲ
ಒಲ್ವರೆನ್ನಂ ಪರಸಿ ಕಳಿಪುವುದು ನೀವೆಲ್ಲ
ನಿನ್ನೊಂದನವಧರಿಪುದೆಲೆಲೆಯುಪ್ರತಿಮರಿರ
ಎನ್ನ ಶಿಶುವಿನ ನುಡಿ ತೊದಳ್ನುಡಿಯುನೆಲೆ ಧೀರರಿರ
ಇನಿತು ದಿನವಾಸಿತ್ತೆನೆಂಬುದೆನಗುಳ್ಳೊಡಂ
ಎನಗೆ ಸತಿಯುರ್ಗೆಂದು ಮನದೊಳಗೆ ಬಗೆದೊಡಂ
ಆನೊರ್ಬನೆನ್ನ ಸಿರಿ ಎಂದು ಬಗೆದಿರ್ದೊಡಂ
ಆನೊಂದು ರೂಹೆಂದು ಮನದೊಳಗೆ ಹೊಳೆದೊಡಂ
ಶ್ರೀಗುರುವಿನಾಜ್ಞೆಯಿಂದಲ್ಲದಾಂ ನಡೆದೊಡಂ
ನಾಗಭೂಷಣನ ಭಕ್ತರನೆಳಸದಿರ್ದೊಡಂ
ಮುಂದೆ ಬಂದೊಡ್ಡಿರ್ದುದಿಂತೆನಗಿದೇ ದಿಬ್ಯ
ಇಂದುಧರ ಮೂರ್ತಿಗಳು ನೋಳ್ಪುದಿದೇ ದಿಬ್ಯ

ಎನುತೆ ಬರ್ಪಮರಸೀತಿಗಳ ಬರವಂ ಕಂಡು
ಅನುವಾಗಿ ಕಚ್ಚುಟದ ಭಕ್ತಂ ಮನಂಗೊಂಡು
ತರತರದ ಪುಳಕಮಂ ಮೆಯ್ಗರೆದು ನಿಲಿಸುತುಂ
ಇರಲಾರದೇಳ್ವ ಜಡೆಗಳನೊತ್ತಿ ನಿಲಿಸುತುಂ
ಪೊರಮಡುವ ಬಿಸಿಗಣ್ಣನಳವಡಿಸಿ ಮುಚ್ಚುತುಂ
ನೆರೆ ನೆಗೆವ ತಿಸುಳಮುಮನಲ್ಲಿ ತಗ್ಗೊತ್ತುತುಂ

ಒತ್ತರಿಪ ಮೂರ್ತಿಯುಂ ಚಿತ್ತದೊಳ್ ನಿಲಿಸುತುಂ
ಬಿತ್ತರಿಪ ಚೋಹದೊಳಗುರೆ ಜಗಳವಾಡುತುಂ
ಬಸವನಂ ಹತ್ತೊತ್ತಿ ತೊಡೆಯೊಳಡಂಗಿಸುತೆ
ಬಸವಲ್ಲದೊತ್ತರಿಪ ಕರುಣವುಂ ತಳ್ಳಿಸುತೆ
ಇರಲಮರನೀತಿಗಳ್ನಲಿವುತಲ್ಲಿಗೆ ಬಂದು
ಹರಭಕ್ತ ಕೇಳಯ್ಯ ಎನ್ನ ಬಿನ್ನಪವೆಂದು
ಆಯ್ಯ ನಿನ್ನಯ ಕಚ್ಚುಟಕ್ಕೆ ಸರಿತೂಕವುಂ
ಕೆಯ್ಯ ಮೇಲೆ ತೋರ್ಪೆನವಧರಿಸು ಸತ್ಯವುಂ
ನೋಡು ನೋಡೆಂದು ಭಕ್ತಿಯ ನಡರುವಂದದಿಂ
ನೋಡು ನೋಡೆಂದು ನಿಷ್ಠೆಯುನೇರುವಂದದಿಂ
ಅಡರ್ದೇರಿ ನಿಚ್ಚಣಿಗೆಯುಂ ನೆಲೆಯುವತರಿಸಿ
ನೃಡನ ಶರಣರ್ಗೆ ಕೆಯ್ಮುಗಿದು ಹರನಂ ಸ್ಮರಿಸಿ
ಶಿವನ ಭಕ್ತಿಯ ತೋಲಾಪುರುಷವುಮುನಡರ್ವಂತೆ
ಶಿವಮುಹೂರ್ತದ ಘಳಿಗೆವಟ್ಟಲೊಳ್ಪೊಗುವಂತೆ
ಹತ್ತೆ ಸಾರುತ್ತವುರನೀತಿಗಳ್ಮೋಹಿಸಲ್
ಇತ್ತಲೀಶ್ವರನ ಚೋಹಂ ಸಡಿಲಿ ರೂಹಿಸಲ್

ಒಂದು ದೆಸೆಯ ತ್ರಾಸನಮರನೀತಿಗಳೇರಿ
ಯೊಂದು ದೆಸೆಯಾ ತ್ರಾಸನೆಮ್ಮ ಶಂಕರನೇರಿ
ಸಮತೂಕವಾಯಿತ್ತು ಶಂಕರನ ಭಕ್ತಿಯ ತ್ರಾಸು
ಸಮವಾಯ್ತು ದೇವಭಕ್ತರ ತೂಕದಾ ತ್ರಾಸು
ಅಲ್ಲಿ ವೃಷಭಧ್ವಜಮುಮಿಲ್ಲಿ ಭಕ್ತಿಧ್ವಜಂ
ಅಲ್ಲಿ ವರ ದಶಭುಜಮಿಲ್ಲಿ ವರಷಡ್ಭುಜಂ
ಅಲ್ಲಿ ಶಿವಶಂಕರಮುಮಿಲ್ಲಿ ವರ ಕಿಂಕರಂ
ಅಲ್ಲಿ ಕರುಣಾಕರಮುಮಿಲ್ಲಿ ಭಕ್ತ್ಯಾತುರಂ
ಅಲ್ಲಿ ಶಶಿಶೇಖರಮುಮಿಲ್ಲಿ ಸುಖಶೇಖರಂ
ಅಲ್ಲಿ ಗಿರಿಜಾವರಮುಮಿಲ್ಲಿ ಸುಕೃತಾಕರಂ
ಇಂತೊಪ್ಪುತಿರ್ದವಿರ್ದೆಸೆಗಳಾ ತ್ರಾಸುಗಳ್
ಸಂತತಂ ಧರೆ ಪೊಗಳಲೀಶ್ವರನ ಲೇಸುಗಳ್

ಸುರಿದವಿರ್ಬರ ಮೇಲೆ ಪೂವುಳೆಗಳೊಪ್ಪದಿಂ
ಪರಿದವೇಣ್ದೆಸೆಗೆ ಭೇರೀರವಂ ಕೊರ್ವಿನಿಂ
ಮಂಗಳ ಮೃದಂಗ ತೂರ್ಯತ್ರಯಂಗಳ್ಕಿಗಳೆ
ಸಂಗಡಿಸಿ ಚಂಡ ಕೀರ್ತಿಗಳಳ್ಕರಿಂ ಪೊಗಳೆ
ಭಕ್ತಜನಸುರಧೇನು ಭಕ್ತವತ್ಸಳನೆಂದು
ಭಕ್ತಜನಕಲ್ಪತರು ಭಕ್ತಬಾಂಧವನೆಂದು
ಬಿರಿದೆತ್ತಿ ಕರೆವ ಕಹಳೆಗಳ ಘನ ರವದೊಳಗೆ
ಆರರೆ ಕೋಟಾಕೋಟಿ ರವಿಕಿರಣದಿಂ ತೊಳಗೆ
ಆ ಸಮಯದೊಳ್ ದೇವಗಣವೃಂದವೈತಂದು
ಭಾಸುರದ ಪೊಸ ವಿಮಾನಂಗಳಿಂದೈತಂದು
ಅಲ್ಲಿ ನಂದೀಶನಂ ನೋಡಿ ಸರ್ವೇಶ್ವರಂ
ಸಲ್ಲೀಲೆವೆತ್ತೆಂದನಂದು ಸಕಲೇಶ್ವರಂ
ಕೇಳಯ್ಯ ನಂದೀಶ ಧಾರಿಣಿಗೆ ಕೌತುಕಂ
ಹೇಳಲಳವಲ್ಲ ಎಮಗೊಳಗಾಗಿ ಕೌತುಕಂ
ಎನಗೆ ಸಮತೂಕವುಂ ತೂಗಿ ನಿಂದವರುಂಟೆ
ಎನಗೆ ಧನಸತಿಸುತರನಿಕ್ಕಿ ತೂಗಿದರುಂಟೆ
ಎನ್ನ ಘಾಸಿಗೆ ನಿಲುವಡಮರನೀತಿಯೆ ನಿಲುವ
ಎನ್ನ ವೇಷವನೊಲಿವಡಮರ ನೀತಿಯೆ ವೊಲಿವ
ಇಳೆಗೆ ಪಟ್ಟಾವಳಿಯನುಡಿಸಿದವರಿಂತುಂಟೆ
ತಿಳಿವಡೆನ್ನಯ ಪೂಜೆಗಳವಡಿಸಿದವರುಂಟೆ
ಎನ್ನ ತೂಕಕ್ಕೆ ಕಟ್ಟಣೆ ಯಪ್ಪರಿಂತುಂಟೆ
ಎನ್ನೊರೆಗೆ ಸರಿಮಚ್ಚವಾಗಿ ತೋರಿದರುಂಟೆ
ದಾವುರೆ ಅಮರನೀತಿ ಪೂತುರೆ ಅಮರನೀತಿ
ದೇವುರೆ ಅಮರನೀತಿ ಭಾಪುರೆ ಅಮರನೀತಿ
ಎಂದು ನಂದೀಶಂಗೆ ಹೇಳುತುಂ ಹಿಗ್ಗುತುಂ
ಬಂದ ಗಣವೃಂದಕ್ಕೆ ನಲವಿಂದೆ ತೋರುತುಂ
ತನ್ನುಮಂ ಭಕ್ತನಂ ಸರಿಸರಿಯೆಂದು ತೋರುತುಂ
ಇನ್ನಿದೆನ್ನಂ ಒರೆ ಶಿವನೊಲಿದು ಸಾರಿದಂ
ಎಂಬಂತೆ ಸಮತೂಕದಿಂದಿರ್ದನೀಶ್ವರಂ

ಅಂಬರಜನಕ್ಕೆ ತೋರಲ್ಕೊಲ್ದು ಶಂಕರಂ
ಅಮರನೀತಿಗೆ ವಿಮಾನಂ ಬೇಡ ನಂದೀಶ
ಸಮತೂಕವಾಗಿರ್ದುದೇ ಸಾಲ್ಗನಂದೀಶ
ಇಲ್ಲಿ ಮರ್ತ್ಯಕ್ಕೆ ಸಮವೆಂಬುದಂ ತೋರುವೆಂ
ಅಲ್ಲಿ ಕೈಲಾಸಕ್ಕೆ ಒಲ್ಮೆಯಿಂ ಸಾರುವೆಂ
ಎನುತೆ ಸಮತೂಕದ ತ್ರಾಸುಸಹಿತಂ ನೆಗೆದು
ಜನವೆಲ್ಲವುಂ ನೋಡೆ ಲೋಕಂಗಳಂ ಕಳೆದು
ಬಂದು ಕೈಲಾಸಮಂ ಪೊಕ್ಕು ಸಂತೋಷದಿಂ
ನಿಂದು ಗುಡಿಗಟ್ಟಿಸುತ್ತೊಲವಿಂದೆ ರಾಗದಿಂ
ಅಮರನೀತಿಗೆ ಸತಿಗೆ ತನಯಂಗೆ ಕರುಣದಿಂ
ಕ್ರಮದಿಂದ ಗಣಪದವನಿತ್ತು ಸಂತೋಷದಿಂ
ಮತ್ತೆ ಮತ್ತವರನಾನಂದದಿಂ ನೋಡುತುಂ
ಮತ್ತೆ ತಣಿಯದೆ ನೋಡಿ ನೋಡಿ ಕೊಂಡಾಡುತುಂ
ಕೈಲಾಸದರಮನೆಯೊಳಿಂದುಧರನೊಪ್ಪಿದಂ
ಶೈಲಜೆಗೆ ತೋರುತುಂ ಪುರಮಥನನೊಪ್ಪಿದಂ
ದೇವಗಣವೃಂದದೊಳಗಿಂದುಧರನೊಪ್ಪಿದಂ
ದೇವಗಣನಿವಹದೊಳಗಪ್ರತಿಮನೊಪ್ಪಿದಂ
ಅಹಾ ಶಿವನೊಪ್ಪಿದಂ ಅಹಾ ಹರನೊಪ್ಪಿದಂ
ಅಹಾ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

**ಕಂದ ||** ಧರೆ ಪೊಗಳೆ ಕಾಣಿಯುಂ ಬೀ
ಸರವಾಗದ ತೆರದಿ ಭಕ್ತಿಯಂ ತೂಗುತ ನೀ ॥
ನೊರೆದಮರನೀತಿಗಳ ಕಿಂ
ಕರ ನಾಂ ಕರುಣಿಪುದು ಹಂಪೆಯ ವಿರೂಪಾಕ್ಷಾ ॥

---

# ವಚನಶಾಸ್ತ್ರಸಾರ ಗ್ರಂಥಗಳು.

( ರಾ। ಸಾ। ಪಿ. ಜಿ. ಹಳಕಟ್ಟಿ ಇವರಿಂದ ವಿರಚಿತವಾದವುಗಳು. )

(೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ — ೨—೮—[illegible]

(೨) ,, ,, ಉತ್ತರಾರ್ಧ — ೧—೧೨—[illegible]

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

(೩) ವಚನಶಾಸ್ತ್ರಸಾರ ಭಾಗ ೨ — ೪—೮—೦

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

(೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ — ೨—೪—೯

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಅಷ್ಟಾವರಣಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರು, ಲಿಂಗ, ಜಂಗಮ ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯು ೧೧ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ತೆಗೆದುಕೊಂಡಲ್ಲಿ ಅವುಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ರೂಪಾಯಿಗಳಿಗೆ ದೊರೆಯುವವು. ಟಪಾಲಖರ್ಚು ಪ್ರತ್ಯೇಕ.

ದೊರೆಯುವ ಸ್ಥಳ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

---

**ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜ ಓಣಿಯಲ್ಲಿರುವ ತಮ್ಮ ೧೬೩೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.**

R. N. B 2554

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೪ ]　　　ಜುಲೈ ೧೯೪೦.　　　[ ಸಂಚಿಕೆ ೧೦

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೪ | ಜುಲೈ ೧೯೪೦. | ಸಂಚಿಕೆ ೧೦ |
| --- | --- | --- |

## ಸರ್ವಜ್ಞನ ವಚನಗಳ ಸ್ವಾರಸ್ಯ.

(ಪಾರಮಾರ್ಥಿಕ ವಚನಗಳು.)

ಲೇಖಾಂಕ:— ೨.

(ಲೇಖಕ— ಶಿವಮೂರ್ತಿ.)



ಸರ್ವಜ್ಞನ ವಚನಗಳನ್ನು ಶ್ರೀ ಉತ್ತಂಗಿ ಚನ್ನಪ್ಪನವರ ಅಭಿಪ್ರಾಯದಂತೆ ಪಾರಮಾರ್ಥಿಕ, ನೈತಿಕ ಮತ್ತು ವ್ಯವಹಾರಿಕ ವಚನಗಳೆಂದು ಸ್ಥೂಲರೀತಿಯಿಂದ ಮೂರು ಬಗೆಯಾಗಿ ವಿಂಗಡಿಸಬಹುದು. ಸದ್ಯದ ಲೇಖದಲ್ಲಿ ನಾವು ಪಾರಮಾರ್ಥಿಕ ವಚನಗಳನ್ನು ಕುರಿತು ವಿವೇಚಿಸೋಣ. ಪಾರಮಾರ್ಥಿಕ ವಿಷಯವನ್ನು ವರ್ಣಿಸುವಾಗ ಸರ್ವಜ್ಞನು ಪರಮಾತ್ಮನ ನಿಜಸ್ವರೂಪವನ್ನೂ ಆತನನ್ನು ಅರಿಯಬೇಕಾದರೆ ಸದ್ಗುರುವಿನ ಸಹಾಯವು ಬೇಕೆಂಬದನ್ನೂ ಹೇಳಿದ್ದಾನೆ. ಆ ಸದ್ಗುರುವು ಕರುಣಿಸಿಕೊಟ್ಟ ಇಷ್ಟಲಿಂಗದಲ್ಲಿ ನಿಷ್ಠಾಭಕ್ತಿಯನ್ನೂ ಪ್ರಾಣಲಿಂಗಾನುಸಂಧಾನದಿಂದ ಶಿವಯೋಗವನ್ನೂ ಭಾವಲಿಂಗದಲ್ಲಿ ಬೆರೆದು ದಿವ್ಯಜ್ಞಾನವನ್ನೂ ಸಾಧಿಸಬೇಕೆಂಬುದಾಗಿ ಶಿವಶರಣರ ತತ್ವಗಳನ್ನೇ ಭಕ್ತಿಮಾರ್ಗ, ಯೋಗಮಾರ್ಗ, ಜ್ಞಾನಮಾರ್ಗಗಳಲ್ಲಿ ಸರ್ವಜ್ಞನು ತೋರಿಸಿಕೊಟ್ಟಿರುವನು.

ಆ ಪರವಸ್ತುವಾದ ಲಿಂಗವು ಸರ್ವವ್ಯಾಪಿಯೂ ಸರ್ವಾಂತರ್ಯಾಮಿಯೂ ಆಗಿರುವದೆಂದು ಹೇಳುವಾಗ ಸರ್ವಜ್ಞನು "ಕಲ್ಲಿನೊಳು ಕಂಭ

ದೊಳು। ಒಳ್ಳದೊಳು ಹಿಕ್ಕಿಯೊಳು। ಎಲ್ಲಿ ಭಾವಿಸಿದೊಡಲ್ಲಿರ್ಪ ಭರಿತನ। ಬಲ್ಲವೇ ನಿಗಮ ಸರ್ವಜ್ಞ॥ ಮತ್ತು "ಲಿಂಗಕ್ಕೆ ಕಡೆಯೆಲ್ಲಿ?। ಲಿಂಗಿಲ್ಲದೆಡೆಯೆಲ್ಲಿ?। ಲಿಂಗದಿ ಜಗವು ಅಡಗಿಹುದು ಲಿಂಗವನು। ಹಿಂಗಿದವರುಂಟೆ ಸರ್ವಜ್ಞ॥" "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಎಂಬ ಭಗವದುಕ್ತಿಯಂತೆ ಆ ಪರವಸ್ತುವು ಸಕಲ ಪ್ರಾಣಿಗಳ ಹೃದಯದಲ್ಲಿ ಮುಸಮುಸಕಾಗಿ ಅಡಗಿದ್ದರೂ ಜ್ಞಾನಿಗಳ ಹೃದಯದಲ್ಲಿ ಸ್ಫುಟವಾಗಿ ಅಡಗಿಹನೆಂಬದನ್ನು ಸರ್ವಜ್ಞನು ಹೀಗೆ ಹೇಳಿದ್ದಾನೆ. "ಆನೆ ಕನ್ನಡಿಯಲ್ಲಿ। ತಾನಡಗಿ ತೋರ್ಪಂತೆ। ಜ್ಞಾನಿಗಳ ಹೃದಯದೊಳು ಪರಶಿವನು। ತಾನಡಗಿ ಇಹನು ಸರ್ವಜ್ಞ"॥

ಸರ್ವಜ್ಞನು ಪರಮಾತ್ಮನ ಸಾಕಾರತ್ವವನ್ನು ಒಪ್ಪುವದಿಲ್ಲ. ಇಷ್ಟೇ ಅಲ್ಲ; ಆ ಪರಮಾತ್ಮನನ್ನು ಕಾಣುವದು ಎಂಥವರಿಗೂ ಸಾಧ್ಯವಿಲ್ಲೆಂದು ಅಭಿಪ್ರಾಯಪಟ್ಟಿದ್ದಾನೆ. ಅದು ಹೇಗೆಂದರೆ "ಆಕಾರ ತಾನಲ್ಲ। ಓಂಕಾರ ಮುಖವಲ್ಲ। ಆಕಾಶತಳವ ಮೀರಿಹುದು ಹರಿಯಜರ್। ತಾ ಕಾಣರಯ್ಯ ಸರ್ವಜ್ಞ॥ ಸರ್ವಜ್ಞನು ಸಾಕಾರವನ್ನು ನಿರಾಕರಿಸುವನೆಂದ ಬಳಿಕ ಆತನು ಸಾಕಾರವಾದ ಇಷ್ಟಲಿಂಗವನ್ನು ನಿರಾಕರಿಸುವನೇ ಹೇಗೆ? ಎಂಬ ಪ್ರಶ್ನೆಯು ಹೊರಡುವದು. ಆದರೆ ಸರ್ವಜ್ಞನು ಇಷ್ಟಲಿಂಗವನ್ನೊಪ್ಪುತ್ತಾನೆ. ಆದರೆ ಅದು ಸಾಕಾರವಾದ ಕಲ್ಲೆಂದು ತಿಳಿಯದೆ ಶ್ರೀಗುರುವು ಶಿಷ್ಯನಿಗೆ ಸಾಧಕಾವಸ್ಥೆಯಲ್ಲಿ ಕರುಣಿಸಿಕೊಟ್ಟ ಕಲಾಜ್ಯೋತಿಯೆಂದೇ ಭಾವಿಸಿದ್ದಾನೆ. "ಕಲ್ಲು ಕಲ್ಲೆಂಬುವಿರಿ। ಕಲ್ಲೊಳಿರ್ಪುದೆ ದೈವ?। ಕಲ್ಲಲ್ಲಿ ಕಳೆಯನಿಲಿಸಿದಾ ಗುರುವಿನಾ। ಸೊಲ್ಲಲ್ಲೆ ದೈವ ಸರ್ವಜ್ಞ॥ ಆದುದರಿಂದ ಗುರುವಿನ ಸೊಲ್ಲಿಗೆ ಮಹತ್ವವಲ್ಲದೆ ಕಟ್ಟಿದ ಕಲ್ಲಿಗೆ ಮಹತ್ವವಿಲ್ಲ. ಶಿಲೆಯ ಲಿಂಗಕ್ಕೆ ಮಹತ್ವ ಕೊಟ್ಟಿದ್ದರೆ ಯಾರು ಬೇಕಾದವರು ಗುರುವಿನ ಸಹಾಯವಿಲ್ಲದೆ ಕೊರಳಲ್ಲಿ ಲಿಂಗವನ್ನು ಧರಿಸಬಹುದೆಂದು ಸರ್ವಜ್ಞನು ಹೇಳಬಹುದಾಗಿತ್ತು. ಆದರೆ ಆತನು ಹಾಗೆ ಎಂದಿಗೂ ಹೇಳುವದಿಲ್ಲ. "ಕಂಡವರ ಕಂಡು ತಾ। ಕೊಂಡು ಲಿಂಗವ ಕಟ್ಟಿ। ಕೊಂಡಾಡಲರಿಯದಧಮಂಗೆ ಆ ಲಿಂಗ। ಕೇಡದಂತಕ್ಕು ಸರ್ವಜ್ಞ"॥

ಇದಲ್ಲದೆ ಗುಡಿಗುಂಡಾರಗಳಲ್ಲಿರುವ ಸ್ಥಾವರಲಿಂಗವು ಗುರುವಿನಿಂದ ಶಿಷ್ಯನಿಗೆ ಕರಸ್ಥಲಕ್ಕೆ ದೊರೆಯದಿದ್ದ ಮೂಲಕ ಅದು ನಿಷಿದ್ಧವೆಂದೇ ಸರ್ವಜ್ಞನು ಹೇಳಿದ್ದಾನೆ. "ಬಟ್ಟೆಯಾ ಕಲ್ಲಿಂಗೆ। ಒಟ್ಟಿ ಪತ್ರಿಯ

ಸಿಟ್ಟು। ಕಟ್ಟಿದಾಲಿಂಗವಡಿಯಾಗಿ ಶರಣೆಂಬ। ಭ್ರಷ್ಟರನು ನೋಡ ಸರ್ವಜ್ಞ॥ ಈ ಸಂದರ್ಭದಲ್ಲಿ ಅಂಬಿಗರ ಚೌಡಯ್ಯನವರು ಅಪ್ಪಣೆ ಕೊಡಿಸಿರುವದೇನಂದರೆ "ಕಟ್ಟಿದಾ ಲಿಂಗವ ಬಿಟ್ಟು ಬೆಟ್ಟದಾ ಲಿಂಗಕ್ಕೆ ಹೋಗಿ ಹೊಟ್ಟೆಯಡಿಯಾಗಿ ಬೀಳುವ ಭ್ರಷ್ಟಮೂಳನ ಕಂಡರೆ ಮೆಟ್ಟಿರ್ದ ಎಡಪಾದ ರಕ್ಷೆಯ ತೆಗೆದುಕೊಂಡು ಲಟಲಟನೆ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು. ಇದಲ್ಲದೆ ಸರ್ವಜ್ಞನು ಗುಡಿ ಕಟ್ಟಿಸಿ ಸ್ಥಾವರಲಿಂಗ ಪ್ರತಿಷ್ಠೆಮಾಡುವರು ಕಲ್ಲಿನಂಥವರೆಂದು ಕರೆದಿದ್ದಾನೆ. "ಕಲ್ಲುಕಲ್ಲನೆ ಒಟ್ಟಿ। ಕಲ್ಲಿನಲಿ ಮನೆಕಟ್ಟಿ। ಕಲ್ಲಮೇಲ್ಕಲ್ಲ ಕೊಳುವ ಮಾನವರೆಲ್ಲ। ಕಲ್ಲಿನಂತಹರು ಸರ್ವಜ್ಞ"॥ ಈ ಪ್ರಸಂಗದಲ್ಲಿ ಶ್ರೀಪ್ರಭುದೇವರು ಅಪ್ಪಣೆ ಕೊಡಿಸಿರುವದೇನಂದರೆ, "ಕಲ್ಲ ದೇವರ ಮಾಡಿ ಕಲ್ಲ ಮನೆಯ ಮಾಡಿ ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ? ಲಿಂಗಪ್ರತಿಷ್ಠೆಯ ಮಾಡುವವರಿಗೆ ನಾಯಕನರಕ ತಪ್ಪದು ಗುಹೇಶ್ವರಾ."

ಗುರುವು ಕರುಣಿಸಿಕೊಟ್ಟ ಇಷ್ಟಲಿಂಗವು ಶಿಷ್ಯನ ಭಕ್ತಿ ಏಕಾಗ್ರತೆಗಳಿಗೆ ಒಳ್ಳೆ ಸಾಧನವಾಗಿರುವದರಿಂದ ಸರ್ವಜ್ಞನು ಅದನ್ನು ಅಲ್ಲಗಳೆಯುವದಿಲ್ಲ. ಆದರೆ ಬರೇ ಲಿಂಗ ಧರಿಸಿಕೊಂಡ ಮಾತ್ರಕ್ಕೆ ತೀರಲಿಲ್ಲ. ಅದರಲ್ಲಿ ಒಳ್ಳೆ ನಿಷ್ಠಾಭಕ್ತಿಯನ್ನಿಡಬೇಕೆಂದು ಆತನು ಉಪದೇಶಿಸಿದ್ದಾನೆ. "ನಿಷ್ಠೆಯಿದ್ದರೆ ಶಿವನು। ಗಟ್ಟಿಗೊಂಡೊಳಗಿರ್ಪ। ನಿಷ್ಠೆಯಿಲ್ಲದವರು ಪೂಜಿಸಲು ಶಿವನವನ। ಬಿಟ್ಟು ಹೋಗುವನು ಸರ್ವಜ್ಞ"॥ ಇದಲ್ಲದೆ "ಲಿಂಗದಲಿ ಮನಹಾಗಿ। ಲಿಂಗದಲಿ ನೆನವಾಗಿ। ಲಿಂಗದಿ ನೋಟ ನುಡಿಕೂಟವಾದನು। ಲಿಂಗವೇ ಅಕ್ಕು ಸರ್ವಜ್ಞ"॥ ಕೇವಲ ನಿರಾಕಾರದಲ್ಲಿ ಭಕ್ತಿಯು ಕೂಡುವದಿಲ್ಲ. ಅದು ಕಲ್ಪನೆಯಲ್ಲಿ ಪಾಯಸವನ್ನು ಸುರಿದಂತೆ ನಿರರ್ಥಕವು. ಭಕ್ತಿಯನ್ನು ಸಾಧಿಸಬೇಕಾದರೆ ಸಾಕಾರವು ಬೇಕೇಬೇಕು. ಅದು ಗುರುಕರುಣದಿಂದ ಶಿಷ್ಯನ ಕರಸ್ಥಲಕ್ಕೆ ಬರಬೇಕು. ಅಂದಾಗಳೇ ಅದಕ್ಕೆ ಒಂದು ತರಹದ ಕಳೆಬರುವದೆಂದು ಸರ್ವಜ್ಞನ ಮತವು.

ನೀತಿ-ಸದಾಚಾರಗಳಿಲ್ಲದೆ ಲಿಂಗಭಕ್ತಿಯನ್ನು ಬೇಕಾದಷ್ಟು ಬೆಳೆಯಿಸಿಕೊಂಡರೂ ಅದು ನಿರರ್ಥಕವೆಂದು ಸರ್ವಜ್ಞನು ಅಭಿಪ್ರಾಯಪಡುತ್ತಾನೆ. "ನುಡಿಯಲ್ಲಿ ಎಚ್ಚತ್ತು। ನಡೆಯಲ್ಲಿ ತಪ್ಪಿದರೆ। ಹಿಡಿದಿರ್ದ

ಲಿಂಗ ಹೊಡಮರಳಿ ಕಚ್ಚುವ। ಹೆಡೆನಾಗನೋಡ ಸರ್ವಜ್ಞ"॥ ಶಿವಶರಣರಾದರೂ ಈ ಸಂದರ್ಭದಲ್ಲಿ ಇದೇ ತರಹದ ಅಭಿಪ್ರಾಯವುಳ್ಳವರಾಗಿದ್ದಾರೆ. "ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು, ರೋಷ ಬಿಡದು, ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವಾ."

ಇಷ್ಟಲಿಂಗಕ್ಕೆ ಭಕ್ತಿಯು ಮುಖ್ಯವಾದಂತೆ ಪ್ರಾಣಲಿಂಗಾನುಸಂಧಾನಕ್ಕೆ ಧ್ಯಾನವೇ ಪ್ರಾಮುಖ್ಯವಾದುದು. ಮನದಲ್ಲಿ ಲಿಂಗಧ್ಯಾನವ ಬಿಟ್ಟು ಅನ್ಯಧ್ಯಾನ ಮಾಡಿದರೆ ಶಿವಯೋಗವು ಪ್ರಾಪ್ತಿಸಲಾರದು. ಇಷ್ಟಲಿಂಗದ ಸಹಾಯದಿಂದ ಮನಸ್ಸನ್ನು ಏಕಾಗ್ರಗೊಳಿಸಿಕೊಂಡು ಸದಾ ಆ ಲಿಂಗವನ್ನು ಮನದಲ್ಲಿ ಬಿಟ್ಟುಬಿಡದೆ ಧ್ಯಾನ ಮಾಡುವದೇ ಪ್ರಾಣಲಿಂಗಾನುಸಂಧಾನವು. ಧ್ಯಾನಕ್ಕೆ ಮನವೇ ಮುಖ್ಯವಲ್ಲದೆ ಮನೆಮಠಗಳೇನೂ ಮುಖ್ಯವಲ್ಲ. ಈ ಬಗ್ಗೆ ಸರ್ವಜ್ಞನು ಹೇಳುವದೇನಂದರೆ, "ಮನದಲ್ಲಿ ನೆನೆವಂಗೆ। ಮನೆಯೇನು ಮಠವೇನು? ಮನದಲ್ಲಿ ನೆನೆಯದಿರುವವನು ದೇಗುಲದ। ಕೊನೆಯಲಿದ್ದೇನು ಸರ್ವಜ್ಞ॥ ಇದಲ್ಲದೆ "ದೇಹ ದೇವಾಲಯವು। ಜೀವವೇ ಶಿವಲಿಂಗ। ಬಾಹ್ಯಂಗಳಳಿದು ಭಜಿಪಂಗೆ ಮುಕ್ತಿ ಸಂ। ದೇಹವಿಲ್ಲೆಂದ ಸರ್ವಜ್ಞ॥ ಅಂದರೆ ದೇವರ ಸಾನ್ನಿಧ್ಯವು ತನ್ನಂತರಂಗದಲ್ಲಿಯೇ ಪ್ರಾಣರೂಪವಾಗಿರುವದರಿಂದ ಆ ಪ್ರಾಣಲಿಂಗವನ್ನು ನಿರಂತರ ಧ್ಯಾನಿಸಬೇಕೆಂಬುದೇ ಆತನ ಮತ ಇದೇ ಮಾತನ್ನೇ ಶ್ರೀ ಪ್ರಭುದೇವರು ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. "ದೇಹವೇ ದೇಗುಲವಾಗಿರಲು ಬೇರೆ ದೇಗುಲವೇತಕಯ್ಯಾ? ಪ್ರಾಣವೇ ಲಿಂಗವಾಗಿರಲು ಮತ್ತೆ ಲಿಂಗವೇತಕಯ್ಯಾ? ಹೇಳಲಿಲ್ಲ ಕೇಳಲಿಲ್ಲ ಗುಹೇಶ್ವರಾ, ನೀನು ಕಲ್ಲಾದರೆ ನಾನೇನಪ್ಪೆನಯ್ಯಾ?"

ಪ್ರಾಣಲಿಂಗಾನುಸಂಧಾನಿಯಾದ ಶಿವಯೋಗಿಯು ಕಾಮ ಕ್ರೋಧ ಲೋಭಾದಿ ಅರಿಷಡ್ವರ್ಗಗಳನ್ನು ಜಯಿಸಬೇಕು. ಸ್ತುತಿ ನಿಂದೆಗಳಲ್ಲಿ ಸಮತೆಯನ್ನು ಬಿಡದಿರಬೇಕು. ಆಸನಗಳು ದೃಢವಾಗಿರಬೇಕು. ಭ್ರೂಮಧ್ಯದಲ್ಲಿ ಏಕಾಗ್ರದೃಷ್ಟಿಯು ಗಟ್ಟಿಗೊಂಡಿರಬೇಕು. ನವದ್ವಾರಗಳನ್ನು ಬಂಧಿಸಿ ಶಿವಧ್ಯಾನತತ್ಪರನಾಗಿರಬೇಕು. ತಪಶ್ಚರ್ಯಾದಿಗಳಿಂದ ದೇಹವನ್ನು ದಂಡಿಸುವದು ಹುಚ್ಚುತನವು. ಇತ್ಯಾದಿ ವಿಷಯಗಳನ್ನು ಸರ್ವ

ಜ್ಞನು ಒಳ್ಳೆ ಹೃದಯಂಗಮವಾಗಿ ನಿರೂಪಿಸುತ್ತಾನೆ. ಕಾಮವನ್ನು ಶಿವಯೋಗಿಯು ನಿಗ್ರಹಿಸಬೇಕೆಂಬ ವಿಷಯದಲ್ಲಿ "ಓದಿ ಬೂದಿಯ ಪೂಸಿ। ತೇರು ಕಾವಿಯ ಹೊದೆದು। ಹೋದಾತ ಯೋಗಿಯೆನಬೇಡ ಇಂದ್ರಿಯವ। ಕಾದಾತ ಯೋಗಿ ಸರ್ವಜ್ಞ"॥ ಆತನು ಕ್ರೋಧವನ್ನು ತೊರೆಯಬೇಕೆಂಬುವ ವಿಷಯದಲ್ಲಿ "ಯತಿಗೇಕೆ ಕೋಪದು। ವ್ರತಿಗೇಕೆ ಪರತತ್ವ?। ಪತಿವ್ರತೆಗೇಕೆ ಪರನೋಟ ಯೋಗಿಗೆ। ಸ್ತುತಿನಿಂದೆಯೇಕೆ ಸರ್ವಜ್ಞ"॥ ಶಿವಯೋಗಿಯು ಆಶೆಯನ್ನು ಹರಿಯಬೇಕೆಂಬುವಲ್ಲಿ "ಎಲ್ಲ ಆಶೆಯ ಬಿಟ್ಟರಿಲ್ಲಿಯೇ ಕೈಲಾಸ। ಎಲ್ಲವ ಬಯಸಿ ಭ್ರಮಿಸಿದೊಡೆ ನರಕ ತಾ। ನಿಲ್ಲಿಯೇ ನೋಡ ಸರ್ವಜ್ಞ"॥

ಶಿವಯೋಗಿಯು ಆಸನಗಳಲ್ಲಿ ಸಿದ್ಧಿಯನ್ನು ಪಡೆದವನಾಗಿರಬೇಕೆಂಬ ವಿಷಯದಲ್ಲಿ "ಆಸನದಿ ದೃಢವಾಗಿ। ವಾಸನೆಯ ತಾಕಳೆದು। ಸೂಸುವ ಮನವ ಬಿಗಿದಿಟ್ಟ ಶಿವಯೋಗಿ। ಶಾಶ್ವತಿಕ ನಕ್ಕು ಸರ್ವಜ್ಞ"॥ ಏಕಾಗ್ರದೃಷ್ಟಿಯನ್ನು ಬಲಿಸಿಕೊಂಡಿರಬೇಕೆಂಬುವಲ್ಲಿ "ನಿಟಲಭ್ರೂಮಧ್ಯದಲಿ। ನಿಟಲಾಕ್ಷ ಮನೆಮಾಡಿ। ಕುಟಿಲ ಕುಂದಕವ ಕೆದರಿದ ಶಿವಯೋಗಿ। ನಿಟಲಾಕ್ಷ ನಕ್ಕು ಸರ್ವಜ್ಞ"॥ ನವದ್ವಾರಗಳನ್ನು ಬಂಧಿಸಬೇಕೆಂಬ ವಿಷಯದಲ್ಲಿ "ನವದ್ವಾರಗಳ ಕಟ್ಟಿ। ಶಿವಧ್ಯಾನದೊಳಗಿರಲು। ನವಖಂಡ ಪೃಥ್ವಿಯೊಳಗಣ ಮಾತೆಲ್ಲ। ಕಿವಿಯೊಳಗೆ ಬೀಳ್ಗು ಸರ್ವಜ್ಞ"॥ ಶಿವಯೋಗಿಯು ದೇಹದಂಡನೆಯನ್ನು ಮಾಡಬಾರದೆಂಬ ಬಗ್ಗೆ "ಒಡಲದಂಡಿಸಿ ಮುಕ್ತಿ। ಪಡೆವೆನೆಂಬುವ ಹೆಡ್ಡ। ಬಡಿಗೆಯಲಿ ಹುತ್ತಹೊಡೆಯಲಡಗಿದ ಸರ್ಪ ಮಡಿಯುವದೆ ಹೇಳು ಸರ್ವಜ್ಞ"॥

ಇಷ್ಟಲಿಂಗದಲ್ಲಿ ಭಕ್ತಿಯನ್ನಿರಿಸಿ ಪ್ರಾಣಲಿಂಗದಲ್ಲಿ ಯೋಗತತ್ಪರನಾಗಿ ಸಾಧಕನು ಭಾವಲಿಂಗದಲ್ಲಿ ಜ್ಞಾನಪೂರ್ಣನಾಗಿ ಬೆರೆತರೆ ಆತನೇ ಸಿದ್ಧನು ಅಥವಾ ನಿರ್ವಿಕಲ್ಪಸಮಾಧಿಸ್ಥನು. ಅಂತಹ ಮೋಕ್ಷಜ್ಞಾನವೇ ಎಲ್ಲಕ್ಕಿಂತಲೂ ಅಧಿಕವಾದುದು ಮತ್ತು ಪವಿತ್ರವಾದುದು. ಭಗವದ್ಗೀತೆಯಲ್ಲಿ "ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ" ಎಂಬುದಾಗಿ ಹೇಳಿದಂತೆ ಸರ್ವಜ್ಞನು "ಜ್ಞಾನದಿಂ ಮೇಲಿಲ್ಲ। ಶ್ವಾನನಿಂ ಕೀಳಿಲ್ಲ। ಭಾನುಮಂಡಲದಿಂದ ಬೆಳಗಿಲ್ಲ ಜಗದೊಳು। ಜ್ಞಾನವೇ ಅಧಿಕ ಸರ್ವಜ್ಞ"॥ ಎಂದು ಹೇಳಿದ್ದಾನೆ. ಆ ಅವಿರಳ ಜ್ಞಾನಿಯಾದ ವಿರಕ್ತನು ಸಂಸಾರದಿಂದ ನಿರ್ಲಿಪ್ತನಾಗುವನು. ಆ ಜ್ಞಾನಿಯು ಹೀನ ಮಾನವರ ಬಿರು

ನುಡಿಗೆ ಕುಗ್ಗನು. ಆತನು ಪರಬ್ರಹ್ಮವನ್ನು ನಾನು ಅರಿತೆನೆಂದು ಯಾರೆದುರಿಗೂ ಜಂಭ ಕೊಚ್ಚಲಾರನು.

ಜ್ಞಾನಿಯು ಸಂಸಾರದಿಂದ ನಿರ್ಲಿಪ್ತನೆಂದು ಹೇಳುವಾಗ "ಮುತ್ತು ನೀರೊಳು ಪುಟ್ಟಿ। ಮತ್ತೆ ನೀರಪ್ಪುದೇ?। ಸತ್ಯವನರಿದ ಜ್ಞಾನಿ ಸಂಸಾರವನು। ಮತ್ತೆ ಹೊದ್ದುವನೆ ಸರ್ವಜ್ಞ"॥ ಮತ್ತು "ತಿಳಿಯು ಕಾಸಿದ ತುಪ್ಪ। ವಳಿದು ಹಾಲಪ್ಪುದೇ? ಕಳೆ ಬೆಳಗನರಿದ ಶಿವಯೋಗಿ ಸಂಸಾರ। ದೊಳಗೆ ಸಿಲುಕುವನೆ ಸರ್ವಜ್ಞ"॥ ಜ್ಞಾನಿಗೆ ಹೀನ ಮಾನವರ ನಿಂದೆಯು ಭಯವಿರುವದಿಲ್ಲೆಂಬ ವಿಷಯದಲ್ಲಿ "ಆನೆಮೇಲಿದ್ದವನು ಶ್ವಾನಕಂಡೋಡುವನೆ? ಜ್ಞಾನ ಹೃದಯದಿ ನೆಲಸಿದ ಶಿವಯೋಗಿ। ಹೀನ ಗಂಜುವನೆ ಸರ್ವಜ್ಞ"॥ ಮತ್ತು "ಆನೆ ನೀರಾಟದಲಿ। ಮೀನಕಂಡಂಜುವದೆ? ಹೀನ ಮಾನವರ ಬಿರುನುಡಿಗೆ ತತ್ವದಾ। ಜ್ಞಾನಿಯಂಜುವನೆ ಸರ್ವಜ್ಞ"॥ ಜ್ಞಾನಿಯು ಪರಬೊಮ್ಮವನರಿದಿಹೆನೆಂದು ಸುರಬಾರದೆಂಬ ವಿಷಯವಾಗಿ "ಬಲ್ಲೆನೆಂಬುವ ಮಾತು ಎಲ್ಲವೂ ಹುಸಿಕಾಣೊ। ಬಲ್ಲರೆ ಬಲ್ಲೆನನಬೇಡ ಸುಮ್ಮನಿರ। ಬಲ್ಲವನೆ ಬಲ್ಲ ಸರ್ವಜ್ಞ"॥ ಮತ್ತು "ಬೊಮ್ಮವನು ಅರಿದಿಹರೆ। ಸುಮ್ಮನೇ ಇರಬೇಕು। ಬೊಮ್ಮವನರಿದು ಉಸುರಿದರೆ ಕಳಹೋಗಿ। ಕೆಮ್ಮಿದಂತಕ್ಕು ಸರ್ವಜ್ಞ"॥

ಈ ಮೇರೆಗೆ ಸರ್ವಜ್ಞನು ತನ್ನ ಪಾರಮಾರ್ಥಿಕ ವಚನಸಂಗ್ರಹದಲ್ಲಿ ವೀರಶೈವ ಮತದ ಇಷ್ಟಲಿಂಗಭಕ್ತಿ, ಪ್ರಾಣಲಿಂಗಾನುಸಂಧಾನ, ಭಾವಲಿಂಗಜ್ಞಾನಗಳನ್ನು ಭಕ್ತಿಮಾರ್ಗ, ಯೋಗಮಾರ್ಗ, ಜ್ಞಾನಮಾರ್ಗಗಳಿಂದ ಸುಲಭಸುಲಲಿತವಾಗಿ ವಿಶದಪಡಿಸಿದ್ದಾನೆ. ಇಷ್ಟಲಿಂಗಭಕ್ತಿಗೆ ಭಕ್ತ-ಮಹೇಶಸ್ಥಲಗಳನ್ನೂ ಪ್ರಾಣಲಿಂಗಾನುಸಂಧಾನಕ್ಕೆ ಪ್ರಸಾದಿ ಪ್ರಾಣಲಿಂಗಿಸ್ಥಲಗಳನ್ನೂ ಭಾವಲಿಂಗ ಜ್ಞಾನಕ್ಕೆ ಶರಣ ಐಕ್ಯಸ್ಥಲಗಳನ್ನೂ ತತ್ವಾನುಸಾರವಾಗಿ ಯೋಜಿಸಿದ್ದಾನೆ. ಒಟ್ಟಿನ ಮೇಲೆ ಈ ಪಾರಮಾರ್ಥಿಕ ವಿಷಯ ವಿವರಣೆಯಲ್ಲಿ ಸರ್ವಜ್ಞನು ಸಂಪೂರ್ಣವಾಗಿ ಶಿವಶರಣರ ವಚನಗಳನ್ನೇ ಅನುಸರಿಸಿ ತನ್ನ ಪದಗಳನ್ನು ರಚಿಸಿದ್ದಾನೆಂದು ಸ್ಪಷ್ಟವಾಗಿ ಕಂಡುಬರುತ್ತದೆ.

---

# ಬಸವೇಶ್ವರನು ಮಾಡಿದ ಕನ್ನಡ ಸಾಹಿತ್ಯ ಸೇವೆ.

(ಲೇಖಕರು— ಶ್ರೀಯುತ ಎಸ್. ಪಿ. ಹಂಜಿ. ಎಂ. ಎ.)

ವಿಶಾಲವಾದ ಕನ್ನಡ ಸಾಹಿತ್ಯವನ್ನು ಅನೇಕ ಕವಿಗಳು ಅನೇಕ ವಿಧದಿಂದ ಸೇವೆ ಮಾಡಿ ಪೋಷಿಸಿ ಬೆಳಿಸಿದ್ದಾರೆ. ಜೈನ, ವೀರಶೈವ, ವೈಷ್ಣವವೆಂಬ ಮೂರು ಮುಖ್ಯ ಮತದವರು ಮತಭೇದವಿಲ್ಲದೆ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಬಹು ಮುಖದಿಂದ ಮಾಡಿ ಇಂದಿನ ವರನ್ನು ಬಹು ಉಪಕೃತರನ್ನಾಗಿ ಮಾಡಿದ್ದಾರೆ. ಕನ್ನಡ ಸಾಹಿತ್ಯದ ಉಜ್ವಲವಾದ ಬೆಳವಣಿಗೆಯನ್ನು ನೋಡುವಾಗ ಇಲ್ಲಿಯ ವರೆಗೆ ಸುಮಾರು ೧೨೦೦ ಕವಿಗಳು ಆಗಿಹೋಗಿದ್ದಾರೆಂದು ಕವಿಚರಿತೆಯ ಆಧಾರದಿಂದ ತಿಳಿದುಬರುತ್ತದೆ. ಇವರೆಲ್ಲರೂ ವಿಧವಿಧದ ಗ್ರಂಥಗಳನ್ನು ಬರೆದಿದ್ದಾರೆ. ಇವರು ಶುದ್ಧ ಸಾಹಿತ್ಯವೆನಿಸುವ ಮಹಾಕಾವ್ಯಗಳನ್ನೇ ಬರೆಯದೆ ಅನೇಕ ಶಾಸ್ತ್ರಗ್ರಂಥಗಳನ್ನೂ ಕೂಡ ಬರೆದಿದ್ದಾರೆ. ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರಗಳು, ಜೋತಿಷಶಾಸ್ತ್ರ, ವೈದ್ಯಶಾಸ್ತ್ರ, ಸೂಪಶಾಸ್ತ್ರ, ಗಣಿತ ಶಾಸ್ತ್ರ ಮತ್ತು ಬೇರೆ ಬೇರೆ ಮತದ ಧರ್ಮಶಾಸ್ತ್ರಗಳು ಮೊದಲಾದ ಅನೇಕ ತರದ ಗ್ರಂಥಗಳನ್ನು ಬರೆದಿದ್ದಾರೆ. ಆದರೆ ಅವುಗಳನ್ನು ಈಗಿನಂತೆ ಸಾದಾ ಗದ್ಯದಲ್ಲಿ ಬರೆಯದೆ ಆಗಿನ ಕಾಲಕ್ಕೆ ಮನ್ನಣೆ ಪಡೆದ ಹಳಗನ್ನಡ ಪದ್ಯ ಇಲ್ಲವೆ ಗದ್ಯಪದ್ಯ ರೂಪ ಅಂದರೆ ಚಂಪೂವಿನಲ್ಲಿ ಬರೆದಿದ್ದಾರೆ. ಆದರೆ ಬರೆದದ್ದೆಲ್ಲ ಸಾಹಿತ್ಯವಲ್ಲ. ಮತ್ತು ಪದ್ಯವೇ ಕಾವ್ಯದ ಮುಖ್ಯ ಲಕ್ಷಣವಲ್ಲ. ಆದುದರಿಂದ ಶುದ್ಧ ಸಾಹಿತ್ಯಕ್ಕಷ್ಟೇ ಸೇರತಕ್ಕ ಗ್ರಂಥಗಳನ್ನು ವಿಚಾರ ಮಾಡಲಾಗಿ ಕೆಲವು ಮಹಾಕವಿಗಳ ಕೃತಿಗಳು ಮಾತ್ರ ಉತ್ತಮ ಗ್ರಂಥಗಳೆಂದು ಹೇಳಬಹುದು. ಇಂತಹ ಕನ್ನಡ ಕವಿಗಳಲ್ಲಿ ನೃಪತುಂಗ, ಪಂಪ, ರನ್ನ ನಾಗವರ್ಮ ನಯಸೇನ, ಚನ್ನ, ಆಂಡಯ್ಯ, ನೇಮಿಚಂದ್ರ, ನಾಗಚಂದ್ರ ಅಥವಾ ಅಭಿನವಪಂಪ, ಮಹಾದೇವಿಯಕ್ಕ, ಹರಿಹರ, ರಾಘವಾಂಕ, ಚಾಮರಸ, ಸರ್ವಜ್ಞ, ನಿಜಗುಣಶಿವಯೋಗಿ, ಷಡಕ್ಷರದೇವ, ವಿರುಪಾಕ್ಷಪಂಡಿತ, ಭೀಮಕವಿ, ಲಕ್ಷ್ಮೀಶ, ಕುಮಾರವ್ಯಾಸ, ದಾಸರು, ರತ್ನಾಕರವರ್ಣಿ, ಚಿಕ್ಕದೇವರಾಜ, ಹೊನ್ನಮ್ಮ, ಮುದ್ದಣ ಮತ್ತು ಬಸವಪ್ಪ ಶಾಸ್ತ್ರಿಗಳು

ಮೊದಲಾದ ಸುಪ್ರಸಿದ್ಧ ಕವಿಗಳು ಕನ್ನಡ ಸಾಹಿತ್ಯಸೇವೆಯನ್ನು ಬಹು ಉತ್ತಮ ರೀತಿಯಿಂದ ಮಾಡಿದ್ದಾರೆಂದು ಹೇಳಬಹುದು. ಇಂತಹ ಸುಪ್ರಸಿದ್ಧ ಕನ್ನಡದ ಉಜ್ವಲ ಭಕ್ತರಲ್ಲಿ ವೀರಶೈವ ಮತವನ್ನು ಉದ್ಧಾರ ಮಾಡಿದ ಬಸವೇಶ್ವರನೂ ಕೂಡ ಒಬ್ಬನೆಂದು ನಿಃಸಂಶಯವಾಗಿ ಹೇಳಬಹುದು.

ಬಸವೇಶ್ವರನು ಮಾಡಿದ ಕನ್ನಡ ಸಾಹಿತ್ಯಸೇವೆಯನ್ನು ತಿಳಕೊಳ್ಳಬೇಕಾದರೆ ಅವನ ಪೂರ್ವದಲ್ಲಿದ್ದ ಕನ್ನಡ ಸಾಹಿತ್ಯದ ಸ್ವರೂಪವನ್ನು ತಿಳಕೊಳ್ಳುವದು ಅತ್ಯಾವಶ್ಯವು. ಬಸವೇಶ್ವರನ ಪೂರ್ವದಲ್ಲಿ ಕನ್ನಡಕ್ಕೆ ಆದಿಕವಿಗಳಾದ ಜೈನರು ಉತ್ತಮೋತ್ತಮ ಕಾವ್ಯಗಳನ್ನು ಒದಗಿಸಿಕೊಟ್ಟಿದ್ದರು. ಸಂಸ್ಕೃತದ ಮಹಾಕವಿಗಳಾದ ಕಾಲಿದಾಸ, ಭವಭೂತಿ ಇವರಿಗೆ ಸರಿಸಮಾನರಾದ ಪಂಪರನ್ನರು ಕನ್ನಡದಲ್ಲಿ ಚಿರಸ್ಮರಣೀಯವಾದ ಉದ್ದಾಮ ಗ್ರಂಥಗಳನ್ನು ಬರೆದು ಕನ್ನಡವನ್ನು ಸಂಸ್ಕೃತದಷ್ಟೇ ಪ್ರೌಢವನ್ನಾಗಿ ಮಾಡಿದರು. ಇವರು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅನುಪಮ ಪಂಡಿತರಾದುದರಿಂದ ಸಂಸ್ಕೃತದ ಪ್ರೌಢಿಮೆಯನ್ನು ಕನ್ನಡಕ್ಕೂ ತಂದುಕೊಟ್ಟರು. ಸಂಸ್ಕೃತದ ಉದ್ದುದ್ದ ಸಮಾಸಗಳನ್ನು ಉಪಯೋಗಿಸಿ ಕೊನೆಗೆ ಮಾತ್ರ ಕನ್ನಡದ ಪ್ರತ್ಯಯಗಳನ್ನು ಹಚ್ಚಿ ಸಾಮಾನ್ಯ ಜನರಿಗೆ ಸಹಜವಾಗಿ ತಿಳಿಯದಂತೆ ಮಾಡಿದರು. ಮತ್ತು ಕನ್ನಡದ ಕಾವ್ಯಗಳಲ್ಲಿ ಅನೇಕ ಸಂಸ್ಕೃತ ಶಬ್ದಗಳನ್ನು ಹೆಚ್ಚಾಗಿ ಉಪಯೋಗಿಸಿ ಕನ್ನಡದ ಶಬ್ದ ಭಾಂಡಾರವನ್ನು ಬೆಳಸಿದರು. ಜೈನರು ಮುಖ್ಯವಾಗಿ ಜೈನ ತೀರ್ಥಂಕರರ ಚರಿತ್ರಗಳನ್ನು ಕಾವ್ಯಗಳನ್ನಾಗಿ ಮಾಡಿದರು. ಇದಲ್ಲದೆ ಪಂಪ ರನ್ನರಂತೂ ಮಹಾಭಾರತದ ಕಥೆಯನ್ನು ನೂತನ ರೀತಿಯಲ್ಲಿ ಚಿತ್ರಿಸಿ ಕನ್ನಡ ಸಾಹಿತ್ಯದಲ್ಲಿ ಅಜರಾಮರರಾಗಿದ್ದಾರೆ. ಜೈನ ಕವಿಗಳ ಮುಖ್ಯ ಉದ್ದೇಶವು ಜೈನ ಧರ್ಮದ ತತ್ವಗಳನ್ನು ತಿಳಿಸುವದಾಗಿದ್ದರೂ ನಿಜವಾಗಿಯೂ ಇವರು ಅಹಿಂಸಾಮಯವಾದ ಉದಾತ್ತವಾದ ಧರ್ಮಭಾವನೆಯನ್ನು ತುಂಬುವವರಾಗಿದ್ದರು. ಈ ಸಂಗತಿಯು "ಆದಿ ಪುರಾಣಮೊಳರಿವುದು ಕಾವ್ಯಧರ್ಮಮುಂ ಧರ್ಮಮುಮಂ" ಎಂಬ ಪಂಪ ಮಹಾಕವಿಯ ಉಕ್ತಿಯಿಂದ ಸಹಜವಾಗಿ ಕಂಡುಬರುತ್ತದೆ. ಒಟ್ಟಿನ ಮೇಲೆ ಜೈನರು ತಮ್ಮ ಶಕ್ತಿಸಾಮರ್ಥ್ಯಗಳಿದ್ದಷ್ಟು ಪ್ರಯತ್ನ ಮಾಡಿ ಕನ್ನಡವನ್ನು ಗ್ರಂಥಸ್ಥ ಭಾಷೆಯನ್ನಾಗಿ ಮಾಡಿದರು. ಇವರ ಕನ್ನಡವನ್ನು ಅರಿತುಕೊಳ್ಳಬೇಕಾದರೆ ಸಂಸ್ಕೃತ

ವನ್ನು ಚನ್ನಾಗಿ ಅಭ್ಯಾಸ ಮಾಡಿದವರೂ ಪಂಡಿತರೂ ಇರಬೇಕಲ್ಲದೆ ವಿಶೇಷ ಪರಿಶ್ರಮವನ್ನು ಸಹ ಪಡೆಯಬೇಕಾಗುವದು. ಆದುದರಿಂದ ಬಸವೇಶ್ವರನ ಪೂರ್ವದಲ್ಲಿ ಸಾಮಾನ್ಯ ಜನರಿಗೆ ತಿಳಿಯುವಂಥ ಗ್ರಂಥ ಗಳು ತೀರ ವಿರಳವಿದ್ದವೆಂದು ಹೇಳಬಹುದು.

ಬಸವೇಶ್ವರನು ಬರುವ ಪೂರ್ವದಲ್ಲಿಯೇ ವೀರಶೈವ ಲೇಖಕರು ಕನ್ನಡದಲ್ಲಿ ಗ್ರಂಥಗಳನ್ನು ಬರೆಯತೊಡಗಿದ್ದರು. ಅಂದರೆ ಜೈನರು ಸಂಪೂರ್ಣವಾಗಿ ಕಾವ್ಯರಚನೆಯನ್ನು ಬಿಟ್ಟರೆಂದಲ್ಲ. ಆದರೆ ಮುಂದೆ ಅವರು ಹದಿನಾಲ್ಕನೆಯ ಶತಮಾನದ ವರೆಗೂ ಇದ್ದಾರೆ. ಆದರೆ ಬಸ ವೇಶ್ವರನ ಪೂರ್ವದಲ್ಲಿ ಸುಮಾರು ೧೦೦ ವರ್ಷಗಳ ಹಿಂದೆ ದೇವರ ದಾಸಿಮಯ್ಯನೆಂಬ ವಚನಕಾರನು ಆಗಿಹೋದನು. ಹೀಗೆ ವಚನಗ ಳನ್ನು ಬರೆಯುವ ರೂಢಿಯು ಬಸವೇಶ್ವರನು ಬರುವ ಪೂರ್ವದಲ್ಲಿಯೇ ಇದ್ದು ಮುಂದೆ ಬಸವೇಶ್ವರನ ಕಾಲದಲ್ಲಿ ಅದು ಒಳ್ಳೇ ಪರಿಪಕ್ವ ಸ್ಥಿತಿಗೆ ಬಂದಿತೆಂದು ಹೇಳಬಹುದು. ಮುಂದಿನ ಶತಮಾನಗಳಲ್ಲಿ ಜೈನ ಕವಿ ಗಳ ಪ್ರಾಬಲ್ಯವು ಹೆಚ್ಚಾದರೂ ಈ ಹನ್ನೆರಡನೆಯ ಶತಮಾನದ ಮಧ್ಯ ದಲ್ಲಿ ಅಳಿಗಾಲವುಂಟಾಗಿ ಅವರು ಸಾಹಿತ್ಯ ಕ್ಷೇತ್ರದಲ್ಲಿ ಹಿಂದೆಗೆದರು. ಜೈನರ ಚಂಪೂ ಕಾವ್ಯಗಳಲ್ಲಿ ಕಂಡುಬರುವ 'ವಚನ' ವೆಂಬ ಹೆಸರಿನ ಗದ್ಯಭಾಗವೇ ಈಗ ಬೇರೊಂದು ಸುಲಭವಾದ ಗದ್ಯದಲ್ಲಿ ರೂಪಗೊಂಡು ಕಂಗೊಳಿಸಿತು. ಆದರೆ ಆ ವಚನಕ್ಕೂ ಇದಕ್ಕೂ ಬಹಳ ವ್ಯತ್ಯಾಸವಿದೆ. ಅದು ಸಂಪೂರ್ಣ ಸಂಸ್ಕೃತಮಯವಾಗಿದ್ದು ತಿಳಿಯಲಿಕ್ಕೆ ತೀರ ಕಠಿಣ ವಾದದ್ದು. ಆದರೆ ಈ 'ವಚನ'ವು ಅತ್ಯಂತ ಸುಲಭವಾದ ಮತ್ತು ಇಡೀ ಕನ್ನಡ ಸಾಹಿತ್ಯದಲ್ಲಿ ನೂತನವಾದ ಮತ್ತು ಅಲೌಕಿಕವಾದ ರೂಪ ವೆಂದೇ ಹೇಳಬಹುದು. ಬಸವೇಶ್ವರನ ಕಾಲದಲ್ಲಿ ವೀರಶೈವ ಮತದ ಪ್ರಸಾರವು ಹೆಚ್ಚಾಗಿ ನೂರಾರು ಶಿವಶರಣರು ಆತ್ಮಸ್ಫೂರ್ತಿಯಿಂದ ಅನೇಕ ನುಡಿಗಳನ್ನು ಉಸುರಿದರು. ಇವೇ ವಚನಗಳು. ಬಸವೇಶ್ವರ, ಚನ್ನಬಸವೇಶ್ವರ, ಅಲ್ಲಮಪ್ರಭು, ಮಹಾದೇವಿಯಕ್ಕ, ಸಿದ್ಧರಾಮೇಶ್ವರ, ಆದಯ್ಯ, ಗಣದಾಸೀವೀರಣ್ಣ, ಹಡಪದಅಪ್ಪಣ್ಣ, ಸಕಲೇಶಮಾದರಸ, ಸಂಗನಬಸವೇಶ್ವರ, ಘನಲಿಂಗ, ಲಿಂಗಮ್ಮ, ಅಂಬಿಗರಚೌಡಯ್ಯ ಮೊದಲಾದ ನೂರಿನ್ನೂರು ವಚನಕಾರರಿದ್ದು ಇವರಲ್ಲಿ ಬಸವೇಶ್ವರನೇ ಅಗ್ರಗಣ್ಯನೆಂದು ಹೇಳಬಹುದು. ಬಸವೇಶ್ವರನು ಮಂತ್ರಗೋಪ್ಯ, ಕಾಲ

ಜ್ಞಾನ ವಚನಗಳು, ಷಟ್‌ಸ್ಥಲ ವಚನಗಳು ಮೊದಲಾದ ಗ್ರಂಥಗಳನ್ನು ಒರೆದಿದ್ದು ಇವುಗಳಲ್ಲಿ ವಚನಗಳೇ ಶ್ರೇಷ್ಠವೆಂದು ಅನ್ನಬಹುದು.

ಬಸವೇಶ್ವರನು ವೀರಶೈವ ಮತವನ್ನು ಪುನರುದ್ಧಾರ ಮಾಡಿ ಅದನ್ನು ಪ್ರಸಾರ ಮಾಡುವಾಗ ಜನರ ಜೀವನವನ್ನು ಕಂಡು ಅವನ ಹೃದಯವು ಕರಗಿ ಅವರಿಗೆ ಯೋಗ್ಯದಾರಿಯನ್ನು ತೋರಿಸಲಿಕ್ಕೆ ಸಹಜವಾಗಿಯೇ ವಚನಗಳು ಆತನ ಹೃದಯದಿಂದ ಹೊರಟವು. ಮತ್ತು ಈ ವಚನಗಳಲ್ಲಿ ವೀರಶೈವ ಧರ್ಮದ ತತ್ವಗಳೂ ಅಡಕವಾಗಿರುವದರಿಂದ ಶಾಸ್ತ್ರೀಯ ದೃಷ್ಟಿಯಿಂದ ವಿಚಾರಮಾಡಿ ಇವು ಶುದ್ಧ ಸಾಹಿತ್ಯಕ್ಕೆ ಸೇರಬಹುದೋ ಹೇಗೆ ಎಂಬದನ್ನು ವಿಚಾರಮಾಡುವದು ಅವಶ್ಯವು. ವಿಶಾಲ ದೃಷ್ಟಿಯಿಂದ ವಿಚಾರಿಸಿದರೆ ಬರೆದದ್ದೆಲ್ಲ ಸಾಹಿತ್ಯವಾಗುವದು. ಆದರೆ ವಿಮರ್ಶಾತ್ಮಕ ತತ್ವಗಳ ವರೆಗಲ್ಲಿಗೆ ಹಚ್ಚಿ ನೋಡಿದರೆ ಬರೆದದ್ದೆಲ್ಲ ಸಾಹಿತ್ಯವಾಗಲಾರದು. ಆದುದರಿಂದ ಡಿಕ್ವೆನ್ಸಿ (*De Quincey*) ಎಂಬ ಸುಪ್ರಸಿದ್ಧ ಇಂಗ್ಲಿಷ ಸಾಹಿತಿಯು ಸಾಹಿತ್ಯದಲ್ಲಿ ಸ್ಥೂಲವಾಗಿ ಎರಡು ವಿಭಾಗಗಳನ್ನು ಮಾಡಿರುವನು. (೧) ಕಾವ್ಯ ಅಂದರೆ *Literature of Power* ಇದು ರಸಾತ್ಮಕವಾಗಿದ್ದು ಓದಓದುತ್ತ ಹೃದಯಕ್ಕೆ ಆನಂದವನ್ನುಂಟುಮಾಡುವದು. ಇದರ ಮುಖ್ಯ ಉದ್ದೇಶವು ಆನಂದಕೊಡುವುದು. (೨) ಶಾಸ್ತ್ರ ಅಂದರೆ *Literature of Knowledge* ಇದು ರಸಾತ್ಮಕವಲ್ಲ. ಹೃದಯಂಗಮವಾದುದಲ್ಲ. ಇದರಿಂದ ಉಂಟಾಗುವ ಆನಂದವು ಹೃದಯಕ್ಕಲ್ಲ, ಬುದ್ಧಿಗೆ. ಇದರ ಮುಖ್ಯ ಉದ್ದೇಶವು ತತ್ತ್ವವಿಚಾರ ತತ್ತ್ವ ವಿವರಣೆ. ಹಾಗೆಯೇ ಬಸವೇಶ್ವರನ ವಚನಗಳನ್ನಾದರೂ ಇದೇ ರೀತಿಯಿಂದ ಎರಡು ವಿಭಾಗ ಮಾಡಬಹುದು. (೧) ನಮ್ಮ ಹೃದಯಕ್ಕೆ ಆನಂದ ಮತ್ತು ಸ್ಫೂರ್ತಿಯನ್ನು ಕೊಡುವ ಆತನ ಹೃದಯದಿಂದ ಸಹಜವಾಗಿಯೇ ಹೊರಹೊಮ್ಮಿದ ನೀತಿಯ ಮತ್ತು ಭಕ್ತಿಯ ಮೊದಲಾದ ವಚನಗಳು ಕಾವ್ಯವರ್ಗಕ್ಕೆ ಸೇರುವವು. (೨) ವೀರಶೈವ ಮತದ ತತ್ವ ಆಚಾರ ಮೊದಲಾದವುಗಳನ್ನು ವಿವರಿಸಿ ನಮ್ಮ ಬುದ್ಧಿಗೆ ಆನಂದ ಕೊಡುವ ವೀರಶೈವ ಸಾಂಪ್ರದಾಯದ ವಚನಗಳು ಶಾಸ್ತ್ರ ವರ್ಗಕ್ಕೆ ಸೇರುವವು. ಮೊದಲನೆಯ ವಿಭಾಗದಲ್ಲಿ ಬಂದ ವಚನಗಳು ಶುದ್ಧ ಸಾಹಿತ್ಯಕ್ಕೆ ಅಥವಾ ಕಾವ್ಯಕ್ಕೆ ಸೇರುವವು. ಮತ್ತು ಎರಡನೆಯ ವಿಭಾಗದಲ್ಲಿಯ

ವಚನಗಳು ಕಾವ್ಯಕ್ಕೆ ಸೇರದೆ ಶಾಸ್ತ್ರ ವರ್ಗಕ್ಕೆ ಸೇರುವವು. ಆದರೂ ಈ ವಿಭಾಗದಲ್ಲಿಯ ಕೆಲವು ವಚನಗಳ ಶೈಲಿಯು ಮನೋಹರವಾಗಿದ್ದು ಓದುಗರಿಗೆ ತೊಂದರೆಯಾಗದಂತೆ ರಮ್ಯವಾಗುವಂತೆ ತತ್ವವಿವರಣೆಯನ್ನು ಒಳಗೊಂಡಿವೆ. ತತ್ತ್ವ ವಿವರಣೆಯನ್ನು ಮಾಡಿದರೂ ಸಹ ನಮಗೆ ಅದು ಅನಿಸುವದಿಲ್ಲ. ಆದುದರಿಂದ ಇದರಲ್ಲಿಯ ಕೆಲವು ವಚನಗಳೂ ಕಾವ್ಯಕ್ಕೆ ಸೇರಬಹುದಾಗಿವೆ.

ಬಸವೇಶ್ವರನ ಹೃದಯದಿಂದ ವಚನಗಳು ಹೊರಹೊಮ್ಮುವ ಕಾಲದಲ್ಲಿ ಜನರ ಜೀವನವನ್ನು ಅರಿತುಕೊಳ್ಳುವದು ಮಹತ್ವದ ಸಂಗತಿಯಾಗಿರುವದು. ಯಾಕಂದರೆ ಜೀವನವಿದ್ದಂತೆ ಸಾಹಿತ್ಯ ಮತ್ತು ಸಾಹಿತ್ಯವಿದ್ದಂತೆ ಜನಜೀವನವಿರುವದು. ಒಂದು ಕಾಲದಲ್ಲಿ ಉತ್ತಮ ಸಾಹಿತ್ಯವು ಹೊರಬೇಕಾದರೆ ಜನರಲ್ಲಿ ಹೊಸ ಚೈತನ್ಯವುಂಟಾಗಿ ಜೀವನ ಕುಂದುಕೊರತೆಗಳನ್ನೂ, ಕಷ್ಟನಷ್ಟಗಳನ್ನೂ, ಸುಖದುಃಖಗಳನ್ನೂ ಅರಿತುಕೊಂಡು ಉದರ ನಿರ್ವಾಹದ ಸಮಸ್ಯವನ್ನು ಬಿಡಿಸಿಕೊಂಡು ಉಂಡುಂಟ್ಟು ಸುಖದಿಂದ ಒಂದು ತರದ ಆನಂದಮಯವಾದ ಮಾದರಿಯ ಜೀವನವನ್ನು ಕೈಕೊಳ್ಳಬೇಕಾಗುವದು. ಹೀಗೆ ಉತ್ತಮ ಸಾಹಿತ್ಯವು ಹೊರಟು ಅದನ್ನು ಓದಿ ತಿಳಕೊಂಡ ಜನರ ಮನಸ್ಸಿನೊಳಗಿನ ಅಜ್ಞಾನವೆಲ್ಲ ದೂರಾಗಿ ಅವರೂ ಕೂಡ ಸುಖಮಯವಾದ ಜೀವನವನ್ನು ಸಾಗಿಸುವರು. ಅಂದರೆ ಮೊದಲು ಜನಜೀವನದ ಪ್ರಭಾವವು ಸಾಹಿತ್ಯದ ಮೇಲಾಗುವದು. ಮತ್ತು ಆ ಸಾಹಿತ್ಯದ ಪ್ರಭಾವವು ಜನಜೀವನದ ಮೇಲೆ ಆಗುವದು. ಬಸವೇಶ್ವರನ ಕಾಲದಲ್ಲಿಯಾದರೂ ಇದೇ ಪರಿಸ್ಥಿತಿಯುಂಟಾಯಿತು. ಬಸವೇಶ್ವರನೂ ಮತ್ತು ಆತನಿಂದ ಪ್ರೋತ್ಸಾಹ ಪಡೆದ ಅನೇಕ ಶಿವಶರಣರೂ ಕೂಡಿ ಶಿವಾನುಭವ ಮಂಟಪವನ್ನು ಸ್ಥಾಪಿಸಿ ಜನರ ನಿಜವಾದ ಸುಖದ ಬಗ್ಗೆ ಅವರು ಹಗಲಿರಳೂ ವಿಚಾರಮಾಡುತ್ತಿದ್ದರು. ಆದೇ ವೇಳೆಯಲ್ಲಿಯೇ ಅವರಿಂದ ವಚನಗಳು ಹೊರಟವು. ಮತ್ತು ಇವುಗಳನ್ನು ಸಾಮಾನ್ಯ ಜನರಲ್ಲಿ ಪ್ರಚಾರ ಮಾಡಲಿಕ್ಕೆ ಜಂಗಮರು ಹಳ್ಳಿಹಳ್ಳಿಗಳಿಗೆ ತಂಬೂರಿಯ ಮೇಲೆ ಇವುಗಳನ್ನು ಹಾಡುತ್ತ ಹೋದರು. ಹೀಗಾಗಿ ಆಗ ವೀರಶೈವ ಮತವು ಭರದಿಂದ ಹಬ್ಬಿತಲ್ಲದೆ ಇವುಗಳನ್ನು ಕೇಳಿದ ಜನರ ನಡೆ ನುಡಿಗಳು ಚನ್ನಾಗಿ ಸುಧಾರಿಸಿದವು. ಮತ್ತು ಬಸವೇಶ್ವರನೂ ಅವನ ಅನುಯಾ

ಯಿಗಳೂ ಪ್ರತ್ಯಕ್ಷವಾಗಿ ಜನಜೀವನವನ್ನು ಸುಧಾರಿಸಿ ದೇಶದಲ್ಲಿ ಹೊಸ ಚೈತನ್ಯವನ್ನು ತುಂಬಿದರು. ಮೊದಲು ಅವರು ಜೀವನದ ಬಗ್ಗೆ ಆದರ ಗೌರವಗಳನ್ನು ಹುಟ್ಟಿಸಿದರು. ಮತ್ತು ಸ್ತ್ರೀಯರಿಗೆ ಪುರುಷರ ಸರಿಸ ಮಾನವಾದ ಹಕ್ಕುಗಳನ್ನು ಕೊಟ್ಟು ಅವರಿಗೆ ಸಮಾಜದಲ್ಲಿ ಒಂದು ಪೂಜ್ಯ ಸ್ಥಾನವನ್ನು ಒದಗಿಸಿಕೊಟ್ಟರು. ಪ್ರತಿಯೊಬ್ಬ ಮನುಷ್ಯನು ಸ್ವತಃ ಒಂದು ಉದ್ಯೋಗವನ್ನು ಮಾಡಿಯೇ ಜೀವಿಸಬೇಕೆಂಬ ನಿಯಮ ಮಾಡಿದ್ದರಿಂದ ಭಿಕ್ಷೆ ಬೇಡುವದು ಕಡಿಮೆಯಾಯಿತು. ''ಕಾಯಕವೇ ಕೈಲಾಸ''ವೆಂಬ ನೂತನ ತತ್ವದಂತೆ ಪೂರ್ವದಲ್ಲಿ ಕೀಳು ಎಂದು ತಿಳಿದುಕೊಂಡ ಉದ್ಯೋಗಗಳು ಪವಿತ್ರ ಮತ್ತು ಸಮಾಜಕ್ಕೆ ಹಿತಕರ ವೆಂದು ತಿಳಿದು ಮಾಡಹತ್ತಿದರು. ಜನರಲ್ಲಿ ಒಬ್ಬರೇ ದೇವರೆಂಬ ಭಾವನೆಯನ್ನುಂಟು ಮಾಡಿ ಮೂಢಭಕ್ತಿಯನ್ನೂ ಮೂಢ ರೂಢಿಗ ಳನ್ನೂ ಹೋಗಲಾಡಿಸಿದರು. ಇದಲ್ಲದೆ ಮಾನವರಲ್ಲಿ ಉಚ್ಚ ನೀಚ ಕುಲಗಳಿಲ್ಲವೆಂಬ ಸಂಗತಿಯನ್ನು ಪ್ರತ್ಯಕ್ಷವಾಗಿ ಬ್ರಾಹ್ಮಣ-ಹೊಲೆಯರ ಒಂದು ಮಿಶ್ರವಿವಾಹವನ್ನು ಮಾಡಿ ತೋರಿಸಿಕೊಟ್ಟರು. ಹೀಗೆ ವಿವಿಧ ರೀತಿಯಿಂದ ಅವರು ಸಮಾಜದಲ್ಲಿಯ ದೋಷಗಳನ್ನೆಲ್ಲ ಸಂಪೂರ್ಣ ವಾಗಿ ತೆಗೆದುಹಾಕಿ ಸರ್ವಾಂಗಸುಂದರವಾದ ಒಂದು ಸಮಾಜ ಮಂದಿ ರವನ್ನೇ ನಿರ್ಮಾಣಮಾಡಿದರು. ಆದುದರಿಂದಲೇ ನೂರಾರು ವಚನ ಕಾರರು ಸ್ಫೂರ್ತಿಗೊಂಡು ಸಾವಿರಾರು ವಚನಗಳನ್ನು ರಚಿಸಿದರು.

ಬಸವೇಶ್ವರನು ರಚಿಸಿದ ವಚನಗಳಲ್ಲಿ ಬಂದ ವಿಷಯಗಳನ್ನು ನೋಡುವಾ. ಇವುಗಳಲ್ಲಿ ಮುಖ್ಯವಾಗಿ ಆತನು ತನ್ನ ಜೀವನದಲ್ಲಿ ಅನುಭವಿಸಿದ ಅನುಭವದ ಮಾತುಗಳೇ ಇರುವವು. ತನಗೆ ಈ ಸಂಸಾ ರವು ಹೇಗೆ ಕಾಣಿಸಿತು. ಅದರ ಎಡರುತೊಡರುಗಳು ಯಾವವು? ಅವುಗಳನ್ನು ಸುಲಭವಾಗಿ ಹೇಗೆ ದಾಟಬೇಕು? ಮತ್ತು ಸಂಕಟಸಮ ಯದಲ್ಲಿ ಹೇಗೆ ನಡೆಯಬೇಕು? ಪರರ ಕೂಡ ಹೇಗೆ ನಡೆಯಬೇಕು? ಪರಸ್ತ್ರೀಯರನ್ನು ಗೌರವದಿಂದ ಕಾಣುವದು ಮೊದಲಾದವುಗಳ ಬಗ್ಗೆ ವಚನಗಳು ಇರುವವು. ಇದಲ್ಲದೆ ಅನೇಕ ನೀತಿಯ ನುಡಿಗಳು ಮತ್ತು ಪರಮಾತ್ಮನ ಮೇಲಿನ ನಿಜವಾದ ಉತ್ಕಟವಾದ ಭಕ್ತಿಯ ಸ್ವರೂಪದ ವಚನಗಳು ಅನೇಕ ತುಂಬಿರುತ್ತವೆ. ಮತ್ತು ವೀರಶೈವ ಸಾಂಪ್ರದಾ ಯದ ಪ್ರಕಾರ ಷಟ್‌ಸ್ಥಲಗಳು ಅಂದರೆ ಪರಮಾತ್ಮನ ಕೂಡ ಸಮ

ರಸ ಹೊಂದಲಿಕ್ಕೆ ಆರು ಸೋಪಾನಗಳು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಇವುಗಳ ಸಂಬಂಧ ಎಷ್ಟೋ ವಚನಗಳು ಕಂಡುಬರುತ್ತವೆ. ಇದಲ್ಲದೆ ಸ್ವಮತಾಭಿಮಾನಿಗಳು ಪಾಲಿಸತಕ್ಕ ಹಿತೋಪದೇಶದ ಅನೇಕ ಮಾತುಗಳಿರುತ್ತವೆ. ಒಟ್ಟಿನ ಮೇಲೆ ಇವುಗಳಲ್ಲಿ ವೀರಶೈವ ಸಾಂಪ್ರದಾಯದ ಕೆಲವು ವಚನಗಳನ್ನು ಬಿಟ್ಟು ಉಳಿದ ವಚನಗಳು ಈ ಜಗತ್ತಿನೊಳಗಿನ ಪ್ರತಿಯೊಬ್ಬ ಮಾನವನಿಗೂ ಅನ್ವಯಿಸುತ್ತವೆ. ವೀರಶೈವ ತತ್ವಜ್ಞಾನದಲ್ಲಿ ಭಕ್ತಿ ಜ್ಞಾನ - ಕರ್ಮ ಈ ಮೂರೂ ಯೋಗಗಳ ಸಂಯೋಗವಿರುವದರಿಂದ ಇವುಗಳ ಬಗ್ಗೆಯೂ ವಚನಗಳು ಇರುತ್ತವೆ. ಆದರೆ ಬಸವೇಶ್ವರನಲ್ಲಿ ಜ್ಞಾನ ಮತ್ತು ಕರ್ಮ ಯೋಗಗಳಿಗಿಂತ ಭಕ್ತಿಯೋಗಕ್ಕೆ ಹೆಚ್ಚು ಪ್ರಾಧಾನ್ಯವಿರುತ್ತದೆ.

ಇನ್ನು ಬಸವೇಶ್ವರನು ರಚಿಸಿದ ವಚನಗಳ ಶೈಲಿಯ ಬಗ್ಗೆ ವಿವೇಚಿಸುವದು ಅವಶ್ಯವು. ಈತನ ವಚನಗಳು ಬಿಡಿಬಿಡಿಯಾದ ಶಬ್ದಗಳಿಂದ ಕೂಡಿ ಸಹಜವಾಗಿ ಸಾಮಾನ್ಯ ಓದುಗರಿಗೂ ತಿಳಿಯುವ ಹಾಗೆ ಇರುತ್ತವೆ. ಈತನ ವಚನಗಳು ತೀರ ದೊಡ್ಡವು ಇರುವದೇ ಇಲ್ಲ. ಸಣ್ಣ ವಾಕ್ಯಗಳಿಂದ ಕೂಡಿ ಓದಿದರೆ ಅರ್ಥವು ಕೂಡಲೆ ಹೊಳೆದು ಬಿಡುತ್ತದೆ. ಒಂದೊಂದು ವಚನದಲ್ಲಿ ಒಂದೊಂದು ಹೊಸ ವಿಚಾರವು ಇರುತ್ತದೆ. ಇವು ಅನುಭವದ ನುಡಿಗಳಿದ್ದು ಒಂದು ವಾಕ್ಯವನ್ನು ತಕ್ಕೊಂಡು ಅದನ್ನೇ ವಿಸ್ತಾರ ಮಾಡಿ ಒರೆಯುವ ಹಾಗೆ ಸುಂದರವಾದ ವಿಚಾರಗಳಿಂದ ತುಂಬಿರುತ್ತವೆ. ಹಿಂದಿನವರು ಏನಾದರೂ ಹೇಳಬೇಕಾದರೆ ಸೂತ್ರರೂಪಗಳಿಂದ ಹೇಳುತ್ತಿದ್ದರು. ಆಗ ಒಮ್ಮೊಮ್ಮೆ ಪೂರ್ಣ ಅರ್ಥವೇ ಹೊಳೆಯುತ್ತಿದ್ದಿಲ್ಲ ಮತ್ತು ಅವುಗಳ ಮೇಲಿನ ಭಾಷ್ಯಗಳನ್ನು ಓದುವಾಗ ಮಹತ್ವದ ಸಂಗತಿಯು ಯಾವದು? ಓದದೆ ಬಿಡತಕ್ಕ ಸಂಗತಿಯು ಯಾವದು? ಎಂದು ತಿಳಿಯುವದು ಕಠಿಣವಾಗುತ್ತಿತ್ತು. ಮತ್ತು ಓದುವವರಿಗೆ ಕಾರಣವಿಲ್ಲದೆ ತೊಂದರೆಯಾಗುತ್ತಿತ್ತು. ಹೀಗಾಗಿ ಸಾಮಾನ್ಯ ಜನರು ಅವುಗಳನ್ನು ಪೂರ್ಣವಾಗಿ ಓದುತ್ತಿದ್ದಿಲ್ಲ. ಆದರೆ ವಚನಗಳು ಹಾಗಲ್ಲ. ಹೇಳತಕ್ಕ ಮಾತುಗಳು ಸರಳವಾದ, ಸರಸವಾದ, ಮೃದುಮಧುರವಾದ ಶಬ್ದಗಳಿಂದ ಕೂಡಿ ಒಂದೆರಡು ವಾಕ್ಯಗಳಲ್ಲಿ ಪೂರ್ಣವಾಗುತ್ತವೆ. ಇದರಿಂದ ಅದರ ತಿರುಳೂ ಹುರುಳೂ ತಟ್ಟನೆ ಹೊಳೆದು ಓದುಗರ ಮನಸ್ಸಿನ ಮೇಲೆ ಮುದ್ರೆಯೊತ್ತಿದಂತೆ

ಆಗುತ್ತದೆ. ಇವುಗಳನ್ನು ತಿಳಕೊಳ್ಳಲಿಕ್ಕೆ ಕನ್ನಡ ಭಾಷೆಯ ಆಳವಾದ ಅಭ್ಯಾಸವು ಬೇಕಾಗಿಲ್ಲ. ಸಂಸ್ಕೃತದ ಜ್ಞಾನವು ಇರದಿದ್ದರೂ ಚಿಂತೆ ಯಿಲ್ಲ. ವ್ಯಾಕರಣ, ಅಲಂಕಾರ, ಛಂದಸ್ಸು ಮೊದಲಾದವುಗಳ ಪಾಂಡಿತ್ಯವೂ ಬೇಡ. ಆದರೆ ಓದಬೇಕೆನ್ನುವ ಸ್ವಲ್ಪ ಆಶೆಯಿದ್ದರೆ ಸಾಕು. ಮತ್ತು ಒಮ್ಮೆ ಓದಿದರೆ ಸಾಕು ಮನಸ್ಸಿನಲ್ಲಿ ಉಳಿಯುತ್ತವೆ. ಸಂಸ್ಕೃತ ಅಥವಾ ಕನ್ನಡದ ಉದ್ದವಾದ ಕಠಿಣ ಪದ್ಯಗಳಂತೆ ಪ್ರಯಾಸಪಟ್ಟು ಕಂಠಪಾಠ ಮಾಡುವ ಅವಶ್ಯಕತೆಯಿಲ್ಲ. ಇವುಗಳನ್ನು ಓದಹಿಡಿದಂತಾತ್ತ ಹೋದಂತೆ ಮನಸ್ಸಿಗೆ ಒಂದುತರದ ಉಚ್ಚತರಗತಿಯು ಆತ್ಮಾನಂದವು ಉಂಟಾಗಿ ಧೈರ್ಯ, ಸಾಹಸ, ಉತ್ಸಾಹಾದಿ ಗುಣಗಳು ನಮ್ಮಲ್ಲಿ ಸಹಜವಾಗಿ ನೆಲೆಗೊಳ್ಳುತ್ತವೆ. ಅಜ್ಞಾನವು ದೂರಾಗುತ್ತದೆ ಮತ್ತು ಅವುಗಳನ್ನು ಇನ್ನೂ ಹೆಚ್ಚಿಗೆ ಓದಬೇಕೆನ್ನುವ ಆಶೆಯು ಉತ್ಪನ್ನವಾಗುತ್ತದೆ. ಅಲ್ಲಲ್ಲಿ ಸಹಜವಾಗಿ ತಿಳಿಯುವ ಸುಂದರವಾದ ಉಪಮೆಗಳನ್ನು ಉಪಯೋಗಿಸುವದರಿಂದ ಕನ್ನಡ ಭಾಷೆಯು ಸೊಗಸು ಇಲ್ಲಿ ಚನ್ನಾಗಿ ಕಂಡುಬರುತ್ತದೆ. ಇದಲ್ಲದೆ ಒಳ್ಳೊಳ್ಳೇ ಗಹನವಾದ ತತ್ವಜ್ಞಾನದ ವಿಷಯಗಳನ್ನು ಸುಲಭವಾದ ಶಬ್ದಗಳನ್ನು ಉಪಯೋಗಿಸಿ ಸಾಮಾನ್ಯರಿಗೂ ಕೂಡ ತಿಳಿಯುವಂತೆ ಇರುವದು ವಚನಗಳ ಒಂದು ಮುಖ್ಯ ವೈಶಿಷ್ಟ್ಯವು. ವೇದ, ಆಗಮ, ಉಪನಿಷತ್ತು ಮೊದಲಾದ ಗ್ರಂಥಗಳು ಸಂಸ್ಕೃತದಲ್ಲಿರುವದರಿಂದ ಅವುಗಳ ಜ್ಞಾನವು ಕೇವಲ ಪಂಡಿತರಿಗಲ್ಲದೆ ಉಳಿದವರಿಗೆ ಅವುಗಳ ಗಂಧವೇ ಇದ್ದಿಲ್ಲ. ಅಂದಮೇಲೆ ಬಸವೇಶ್ವರನು ಸುಲಭವಾದ ತಿಳಿಗನ್ನಡದಲ್ಲಿ ತನ್ನ ಪರಿಪೂರ್ಣ ಅನುಭವದೊಂದಿಗೆ ವೇದವೇದಾಂತದ ಸಾರವನ್ನು ಹೇರಿಕೊಟ್ಟನೆಂದು ಹೇಳುವದರಲ್ಲಿ ಅತಿಶಯೋಕ್ತಿಯಾಗಲಾರದು. ಇದಲ್ಲದೆ ಮೊದಲಿನ ಕವಿಗಳು ಕನ್ನಡದಲ್ಲಿ ಏನೂ ಇಲ್ಲವೆಂದು ತಿಳಿದು ಸಂಪೂರ್ಣವಾಗಿ ಸಂಸ್ಕೃತಕ್ಕೆ ಮೊರೆ ಹೋಗುವದನ್ನು ಬಿಟ್ಟು ಕನ್ನಡದಲ್ಲಿಯೇ ಇಂತಹ ಗಹನವಾದ ವಿಷಯಗಳನ್ನು ಕೂಡ ಕುರಿತು ಬರೆಯಬಹುದು. ಮತ್ತು ಸಂಸ್ಕೃತದಷ್ಟೇ ಶಕ್ತಿಸಾಮರ್ಥ್ಯಗಳು ಕನ್ನಡದಲ್ಲಿಯೂ ಇರುವವೆಂಬದನ್ನು ನಿದರ್ಶನಕ್ಕೆ ತಂದುಕೊಟ್ಟನು. ಈ ವಚನಗಳು ಸಾದಾ ಗದ್ಯದಲ್ಲಿದ್ದರೂ ಕಾವ್ಯಮಯವಾದ ಪದ್ಯಗಳಂತೆ ಇರುತ್ತವೆ. ಮತ್ತು ಇವುಗಳನ್ನು ಓದುವಾಗ ಸ್ವರಮಾಧುರ್ಯವು ಸಹಜವಾಗಿ ಹೊರಡುತ್ತದೆ. ಮತ್ತು ಇವು ಆಧುನಿಕ ಗದ್ಯದ

ಬೆಳವಣಿಗೆಗೆ ತಳಹದಿಯಾಗಿರುವವು ಒಟ್ಟಿನ ಮೇಲೆ ವಚನ ಸಾಹಿತ್ಯವು ಇಡೀ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿರುವದು.

ಕನ್ನಡ ಸಾಹಿತ್ಯದಲ್ಲಿ ಈ ವಚನ ಸಾಹಿತ್ಯವು ಅಪೂರ್ವವಾದುದು. ನಿಜವಾದ ಸಾಹಿತ್ಯವು ಕೇವಲ ಮನೋಹರವಾದ ಶೈಲಿ, ಭಾಷೆಗಳಿಂದ ಬರೆದ ಕಟ್ಟು ಕತೆಗಳಿಂದ ಕೂಡಿರುವದಿಲ್ಲ. ಆದರೆ ಸಾಮಾನ್ಯ ಜನರ ಕುಂದುಕೊರತೆಗಳನ್ನು ದೂರಮಾಡಿ ಅವರಿಗೆ ಧೈರ್ಯ ಉತ್ಸಾಹಗಳನ್ನು ಒದಗಿಸಿ ಕೊಟ್ಟು ಸುಖವನ್ನೂ ಶಾಂತಿಯನ್ನೂ ದಯಪಾಲಿಸುವದು. ಬಸವೇಶ್ವರನ ವಚನಗಳಲ್ಲಿ ಸತ್ಯವೂ, ಧರ್ಮವೂ, ಪ್ರೇಮವೂ, ಸ್ವಾತಂತ್ರ್ಯವೂ, ಸೌಂದರ್ಯವೂ ಅಡಗಿರುವದರಿಂದ ಇವುಗಳು ನಿಜವಾದ ಸಾಹಿತ್ಯ ವರ್ಗಕ್ಕೆ ಸೇರುವವು. ಬಸವೇಶ್ವರನ ವಿಶಾಲ ಹೃದಯದಲ್ಲಿ ಮೂಡಿದ ಭಾವನೆಗಳನ್ನು ಇಲ್ಲಿ ನಾವು ಸ್ಪಷ್ಟವಾಗಿ ಕಾಣುವೆವು. ಅವನ ಸರಳ ಜೀವನ, ಸತ್ಯವರ್ತನ, ಸದಾಚಾರ, ವಿಚಾರ-ಸ್ವಾತಂತ್ರ್ಯ. ಎಲ್ಲ ಜನರಲ್ಲಿ ಸರಿಸಮಾನ ಪ್ರೇಮ ಮತ್ತು ಸತ್ಯವೇ ಸೌಂದರ್ಯ. ಸೌಂದರ್ಯವೇ ಸತ್ಯವೆನ್ನುವದನ್ನೂ ಇವನ ವಚನಗಳಲ್ಲಿ ಚನ್ನಾಗಿ ಕಾಣಬಹದು. ನಿಜವಾದ ಸಾಹಿತ್ಯವು ಮಾಡುವ ಪ್ರತಿಯೊಂದು ಕಾರ್ಯವನ್ನು ಬಸವೇಶ್ವರನ ವಚನಗಳು ಮಾಡಬಲ್ಲವು. ಇವುಗಳನ್ನು ಓದುವದರಿಂದ ಇವುಗಳ ಪ್ರಭಾವವು ಮನುಷ್ಯನ ಮೇಲೆ ಸಹಜವಾಗಿ ಆಗುವದು. ನಿಜವಾದ ಸಾಹಿತ್ಯದ ಪ್ರಭಾವವು ಬಲವತ್ತರವಾಗಿದ್ದು ಜನರ ಜೀವನಕ್ರಮವನ್ನು ಮಾರ್ಪಾಡು ಮಾಡುವದರಲ್ಲಿ ಬಹಳ ಸಹಾಯಕಾರಿಯಾಗುವದು. ಬಸವೇಶ್ವರನ ವಚನಗಳನ್ನು ನಾವು ಓದುತ್ತಾ ಹೋದಂತೆ ಮನಸ್ಸಿಗೆ ಆನಂದವುಂಟಾಗುವದು. ಮತ್ತು ಒಂದು ತರದ ನೈತಿಕ ಬಲವೂ, ಆತ್ಮವಿಶ್ವಾಸವೂ ಉಂಟಾಗಿ ಜೀವನದ ಎಡರುತೊಡರುಗಳನ್ನು ಆನಂದದಿಂದಲೂ, ಧೈರ್ಯದಿಂದಲೂ, ಸಮಾಧಾನದಿಂದಲೂ ದಾಟುವೆವು. ಮತ್ತು ಯಾವಾಗಲೂ ಸುಖ, ಶಾಂತಿ, ಸಮಾಧಾನಗಳಿಂದ ಮನಸ್ಸು ಪ್ರಸನ್ನವಾಗಿದ್ದು ಜನರಿಗೆ ಕಲ್ಯಾಣವನ್ನೇ ಬಯಸಬೇಕೆಂಬ ಪ್ರವೃತ್ತಿಯುಂಟಾಗುವದು. ಜೀವನದಲ್ಲಿ ಬಳಲಿ ಬೆಂಡಾದಾಗ ಈ ವಚನಗಳಿಂದ ನಮಗೆ ನಿಜವಾದ ಸಮಾಧಾನವು ದೊರೆತು ಜೀವನದ ಪ್ರತಿಯೊಂದು ಕಾರ್ಯವನ್ನು ಉತ್ಸಾಹದಿಂದ ನೆರವೇರಿಸುವೆವು. ಮತ್ತು

ಪ್ರತಿದಿನ ನಮ್ಮ ಜೀವನವನ್ನು ಹೊಸ ಹೊಸ ಕೃತಿಗಳಿಂದ ಆನಂದ ಮಯ ಮತ್ತು ಸುಖಮಯ ಮಾಡಿಕೊಂಡು ಬಾಳುವೆವು. ನಿಜವಾದ ಸಾಹಿತ್ಯದ ಪ್ರಭಾವವು ಇದೇ.

ಬಸವೇಶ್ವರನ ಉದ್ದೇಶವು ಕನ್ನಡ ಸಾಹಿತ್ಯದ ಸೇವೆಯನ್ನು ಮಾಡ ಬೇಕು, ಮುಂದೆ ಒಳ್ಳೇ ಸಾಹಿತ್ಯಸೇವಕನೆಂದು ಹೆಸರು ಪಡೆಯಬೇಕು, ಎಂದು ಇದ್ದಿದ್ದಿಲ್ಲ. ಆದರೆ ಜನಜೀವನದ ಕುಂದುಕೊರತೆಗಳನ್ನು ನಿವಾ ರಣೆ ಮಾಡುವಾಗ ಕನ್ನಡದ ಸಾಹಿತ್ಯ ಸೇವೆಯು ಆತನಿಂದ ಸಹಜ ವಾಗಿಯೇ ಆಯಿತು. ಮತ್ತು ಆತನ ವಚನಗಳು ಯಾವ ಸಾಹಿತಿಯ ಸಾಹಿತ್ಯಕ್ಕೂ ಕಡಿಮೆಯಾಗಿಲ್ಲ. ಕನ್ನಡ ಸಾಹಿತ್ಯಸೇವೆಯನ್ನು ವಿಶೇ ಷವಾಗಿ ಮಾಡಿದವರು ಜೈನ ಕವಿಗಳಲ್ಲಿ ಪಂಪನು, ವೀರಶೈವರಲ್ಲಿ ಬಸವೇಶ್ವರನು ಮತ್ತು ಬ್ರಾಹ್ಮಣ ಕವಿಗಳಲ್ಲಿ ಕುಮಾರವ್ಯಾಸನು. ಮತ್ತು ಕನ್ನಡ ಸಾಹಿತ್ಯದ ಚರಿತ್ರವನ್ನು ಅಭ್ಯಾಸ ಮಾಡುವಾಗ ಪಂಪನ ಯುಗವೆಂದೂ, ಬಸವ ಯುಗವೆಂದೂ ಮತ್ತು ಕುಮಾರವ್ಯಾ ಸನ ಯುಗವೆಂದೂ ವಿಭಾಗಿಸುವ ರೂಢಿಯುಂಟು. ಹೀಗೆ ಬಸವೇಶ್ವ ಶ್ವರನು ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಯುಗ ಪುರುಷನಾಗಬೇ ಕಾದರೆ ಅವನು ಮಾಡಿದ ಕನ್ನಡ ಸಾಹಿತ್ಯಸೇವೆಯು ಅಮೋಘವಾ ದದ್ದೆಂದು ಹೊಳೆಯದೆ ಇರಲಾರದು. ಬಸವೇಶ್ವರನು ಉಳಿದ ಕವಿಗ ಳಂತೆ ಹದಿನೆಂಟು ವರ್ಣನೆಗಳನ್ನು ಮಾಡಿ ಯಾವ ಮಹಾಕಾವ್ಯವನ್ನು ಬರೆದವನಲ್ಲ. ಸಾವಿರಾರು ಪುಟಗಳು ತುಂಬುವ ಹಾಗೆ ಅದ್ಭುತ ರಮ್ಯ ಕಾದಂಬರಿಗಳನ್ನು ಬರೆದವನಲ್ಲ. ಅಥವಾ ಜೀವನದ ವಿವಿಧ ಸ್ವರೂಪ ಗಳನ್ನು ತೋರಿಸುವ ಯಾವ ನಾಟಕಗಳನ್ನು ಕೂಡ ಬರೆದವನಲ್ಲ. ಆದರೆ ಅವನು ತನ್ನ ಹೃದಯದಲ್ಲಿದ್ದ ವಿಚಾರ ತರಂಗಗಳನ್ನು ಸ್ಫೂರ್ತಿ ಯಿಂದ ವಚನ ರೂಪದಿಂದ ಹೊರಹೊಮ್ಮಿಸಿದ್ದಾನೆ. ಆದುದರಿಂದ ಭಾವಗೀತೆಗಳಾದ ಇವು ಇಡೀ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾದ ತೇಜಸ್ಸಿನಿಂದಲೂ ಓಜಸ್ಸಿನಿಂದಲೂ ಕಂಗೊಳಿಸುತ್ತವೆ. ಜಗತ್ತಿನ ಜ್ಞಾನ ಭಾಂಡಾರಕ್ಕೆ ಕನ್ನಡ ಸಾಹಿತ್ಯವು ಏನಾದರೂ ಕೊಟ್ಟಿದ್ದರೆ ಬೇರೆ ಕಾವ್ಯ ಗ್ರಂಥಗಳು ಒತ್ತಟ್ಟಿಗಿರಲಿ, ಈ ವಚನಗಳಿಂದಲೇ ಎಷ್ಟೋ ಸಲ್ಲಿರುವ ದೆಂದು ಹೇಳಬಹುದು. ಒಟ್ಟಿನ ಮೇಲೆ ಕೇವಲ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅಷ್ಟೇ ಅಲ್ಲ. ಆದರೆ ವಿಶ್ವಸಾಹಿತ್ಯದ ಕ್ಷೇತ್ರದಲ್ಲಿಯೂ ಬಸ

ವೇಶ್ವರನಿಗೆ ಒಂದು ಸ್ಥಾನವುಂಟು. ಮತ್ತು ಜಗತ್ತಿನ ಮಹಾಪುರುಷರಲ್ಲಿ ಬಸವೇಶ್ವರನು ಒಬ್ಬನಿದ್ದಂತೆ ಜಗತ್ತಿನ ಸಾಹಿತಿಗಳಲ್ಲಿಯೂ ಇವನೊಬ್ಬನಾಗಿದ್ದಾನೆ. ಮಾದರಿಗಾಗಿ ಆತನ ಕೆಲವು ವಚನಗಳನ್ನು ಮಾತ್ರ ಇಲ್ಲಿ ಕಾಣಬಹುದು.

ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದೊಡೆ ಕಿವಿ ಮೂಗ ಕೊಯ್ಯುವನು. ಹಲವು ದೈವದ ಎಂಜಲ ತಿಂಬವರನೇನೆಂಬೆನಯ್ಯ ಕೂಡಲಸಂಗಮದೇವ!

ಹುತ್ತವ ಬಡಿದಡೆ, ಹಾವು ಸಾಯಬಲ್ಲುದೇ ಅಯ್ಯ? ಘೋರ ತಾಪವ ಮಾಡಿದಡೇನು? ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯ ಕೂಡಲಸಂಗಮದೇವ?

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ. ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲ-ಸಂಗಮ-ದೇವನನೊಲಿಸುವ ಪರಿ.

ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. ಕೂಡಲಸಂಗಮದೇವಾ ಎನಗಿದೇ ದಿಬ್ಯ.

ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ. ವಿಚಾರಿಸಿದರೆ ಏನೂ ಹುರುಳಿಲ್ಲವಯ್ಯ. ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಪು ಮಾಡಿ, ನೀವಿರಿಸಿದಿರಯ್ಯಾ ಕೂಡಲ-ಸಂಗಮದೇವ.

ಶೂಲದ ಮೇಲಣ ಭೋಗವೇನಾದರೇನೋ? ನಾನಾ ವರ್ಣದ ಸಂಸಾರ ಹಾವ ಹಾವಾಡಿಗನ ಸ್ನೇಹದಂತೆ. ತನ್ನಾತ್ಮವೇ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೇ, ಮಹಾದಾನಿ ಕೂಡಲಸಂಗಮದೇವ?

ಕೊಲ್ಲುವನೇ ಮಾದಿಗನು, ಹೊಲಸು ತಿಂಬುವನೇ ಹೊಲೆಯ. ಕುಲವೇನೋ, ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು.

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ! ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ

ಲಿಂಗಕ್ಕೆ ಜೋನವ ಹಿಡಿ ಎಂಬರಯ್ಯಾ! ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದರೆ ಕಲ್ಲುತಾಗಿದ ಮಿಟ್ಟೆಯಂತಪ್ಪರಯ್ಯಾ.

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಕೂಡಲಸಂಗಮದೇವಾ, ನಿಮ್ಮ ಚರಣಕಮಲದೊಳಗಾನು ತುಂಬಿ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ; ಅನಾಚಾರವೇ ನರಕ; ಕೂಡಲಸಂಗಮದೇವ ನೀವೇ ಪ್ರಮಾಣ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ, ಕೂಡಲಸಂಗಮದೇವಾ.

ಪುಣ್ಯಪಾಪಗಳೆಂಬುವು ತಮ್ಮ ಇಷ್ಟ ಕಂಡಿರೆ. ಅಯ್ಯಾ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ. ದೇವಭಕ್ತ ಜಯ ಜಯ ಎಂಬ ನುಡಿಯೊಳಗೆ ಕೈಲಾಸವಿಹುದು ಕೂಡಲಸಂಗಮದೇವ.

ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇವೆಲ್ಲಕ್ಕಂಜದಿದ್ದರೆ, ಭಕ್ತಿ ಕಂಪಿತ ಕೂಡಲಸಂಗಮದೇವ.

ದಯವಿಲ್ಲದ ಧರ್ಮವಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯಾ. ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.



# ಭಕ್ತವಿಜಯಂ.

(ಲೇಖಕ:— ಬುದ್ಧಯ್ಯಸ್ವಾಮಿ ಪುರಾಣಿಕ ಧಾರವಾಡ)

ಈ ಗ್ರಂಥವನ್ನು ಮಹಿಪತಿ ಎಂಬವನು ಬರೆದಿರುವನು. ಇವನು ಮಹಾರಾಷ್ಟ್ರದಲ್ಲಿ ಪ್ರಸಿದ್ಧ ಕವಿ ಮತ್ತು ಸತ್ಪುರುಷನಾಗಿರುವನು. ನಗರ ಜಿಲ್ಹೆಯೊಳಗಿನ ರಾಹುರಿ ತಾಲೂಕಿನಲ್ಲಿಯ ತಾರಾಬಾದ ಎಂಬುದು ಇವನ ವಾಸಸ್ಥಳವು. ಇವನು ಕಾಂಬಳೆ ಈ ಉಪನಾಮದ ದೇಶಸ್ಥ ಋಗ್ವೇದಿ ವಸಿಷ್ಠ ಗೋತ್ರದ ಬ್ರಾಹ್ಮಣನು. ಶಾಲಿವಾಹನ ಶಕೆ ೧೬೩೭ರಲ್ಲಿ ಇವನು ಹುಟ್ಟಿದನು. ಇವನ ವಯಸ್ಸಿನ ೧೬ನೇ ವರ್ಷದಲ್ಲಿ ಇವನ ತಂದೆಯು ತೀರಿದ್ದರಿಂದ ಸಂಸಾರದ ಎಲ್ಲ ಭಾರವು ಇವನ ಮೇಲೆಯೇ ಬಿದ್ದಿತು. ತಂದೆಯು ಜೀವಿಸಿರುವಾಗಲೆ ವಾರಕರಿಯಾಗಿ ಪಂಢರಪುರದ ವಾರಿಯನ್ನು ಈತನು ಪ್ರಾರಂಭಿಸಿದನು. ತಾರಾಬಾದದಿಂದ ಆರು ಮೈಲಿನ ಮೇಲಿರುವ ತಾಂಭೇರವೆಂಬ ಊರಿನ ಶೋರೋಪಂತನು ಈತನ ಶಿಕ್ಷಾ ಗುರುವಾಗಿದ್ದನು.

ತಂದೆಯು ತೀರಿದ ಮೇಲೆ ಈತನು ಕುಲಕರಣಿಕೆಯ ವೃತ್ತಿಯನ್ನವಲಂಬಿಸಿ ಸಂಸಾರ ಸಾಗಿಸುತ್ತಿದ್ದನು. ಸರಕಾರೀ ಅಧಿಕಾರಸ್ಥರೊಡನೆ ಮನಸ್ತಾಪ ಉಂಟಾದದ್ದರಿಂದ ಕೈಯೊಳಗಿನ ಲೆಕ್ಕಣಿಕೆಯನ್ನು ವಿಠ್ಠಲನ ಚರಣದ ಮೇಲಿರಿಸಿ ಇಂದಿನಿಂದ ಎಂದಿಗೂ ಈ ಗ್ರಾಮವೃತ್ತಿಯ ಬರಹವನ್ನು ಬರೆಯಲಿಕ್ಕಿಲ್ಲೆಂದು ಈತನು ಘೋರ ಪ್ರತಿಜ್ಞೆಯನ್ನು ಮಾಡಿದನು. ಈ ಪ್ರತಿಜ್ಞೆಗನುಸರಿಸಿ ಇವನ ವಂಶಜರಲ್ಲಿ ಹಲವರು ಇಂದಿಗೂ ಇದೇ ರೀತಿ ವರ್ತಿಸುತ್ತಿರುವರು. ಭಜನಾದಿ ಕಾರ್ಯಕ್ರಮವು ನಡೆದಾಗಲೆ ಈ ಗ್ರಂಥ ರಚನೆಯ ವಿಚಾರವು ಈತನಲ್ಲಿ ತಲೆದೋರಿತು. "ನಾಮದೇವನ ಶತಕೋಟಿ ಅಭಂಗ ರಚನೆಯ ಪ್ರತಿಜ್ಞೆಯು ಉಳಿದದ್ದರಿಂದ ಅದನ್ನು ನಾನು ಪೂರ್ತಿಗೊಳಿಸಿದೆ, ಈಗ ನೀನು ಸಂತ ಚರಿತ್ರೆಯ ವರ್ಣನೆಯನ್ನು ಮಾಡಬೇಕು" ಎಂದು ತುಕಾರಾಮನು ಸ್ವಪ್ನದಲ್ಲಿ ಹೇಳಿದ್ದರಿಂದ ಅದನ್ನೇ ಗುರೂಪದೇಶವೆಂದು ತಿಳಿದು ಮಹಿಪತಿಯು ಸಂತರ ಚರಿತ್ರೆಗಳನ್ನು ಬರೆಯಲುದ್ಯುಕ್ತನಾದನು. ಆಗ ಅವನು ೫೦ ವರ್ಷದ ವಯಸ್ಸಿನವನಾಗಿದ್ದನು.

ಸಂತ ಜನರ ಚರಿತ್ರೆಗಳನ್ನು ಬಣ್ಣಿಸಬೇಕಾದರೆ ತನಗಿಂತಲೂ ಪೂರ್ವದಲ್ಲಿ ಆಗಿಹೋದ ನಾಭಾಜಿ ಹಾಗು ಉದ್ಧವ ಚಿದ್ಘನ ಇವರ ಗ್ರಂಥಗಳ ಆಧಾರದಿಂದ ನಿರೂಪಿಸಬೇಕೆಂದು ಈತನು ಸಂಕಲ್ಪಮಾಡಿ ಗ್ರಂಥರಚನಾ ಕಾರ್ಯಕ್ಕೆ ತೊಡಗಿರಬೇಕೆಂದು ಈ ಗ್ರಂಥದ ಪೀಠಿಕೆಯ ಮೇಲಿಂದ ಕಂಡುಬರುತ್ತಿದೆ. ಮಹಿಪತಿಯ ಮೊದಲಿನ ಹಲವು ಸಂತಚರಿತ್ರೆಗಳು ಮೇಲಿನ ಉಭಯತರ ಗ್ರಂಥಗಳೊಳಗಿನ ಚರಿತ್ರೆಗಳನ್ನೇ ಬಹುಮಟ್ಟಿಗೆ ಹೋಲುತ್ತವೆ. ಆದರೆ ನಾಮದೇವ, ಜ್ಞಾನೇಶ್ವರಾದಿ ಸಂತರ ಚಾರಿತ್ರ್ಯದ ವರೆಗೆ ಬಂದನಂತರ ನಾಭಾಜಿ ಗ್ರಂಥದಲ್ಲಿ ದೊರೆಯದ ಸಂಗತಿಗಳು ದೊರೆಯಹತ್ತಿದ್ದರಿಂದ ಆ ಗ್ರಂಥವನ್ನು ಬಿಟ್ಟು ಇತ್ತಕಡೆಯ ಗ್ರಂಥಗಳ ಆಧಾರದಿಂದ ಬರೆದಂತೆ ತೋರುತ್ತದೆ. ಹನ್ನೆರಡರಿಂದ ಹದಿನೈದು ಅಧ್ಯಾಯಗಳನ್ನು ನಾಮದೇವನ ತೀರ್ಥಾವಳಿಯ ಗ್ರಂಥಾಧಾರದಿಂದ ಬರೆದಿರುವನು. ತೀರ್ಥಾವಳಿಯಲ್ಲಿಯ ಸಂತಜನರು ಮುಗಿದನಂತರ ಈತನು ನಾಭಾಜಿ ಗ್ರಂಥದ ಕಡೆಗೆ ಪುನಃ ಹೊರಳಿದನು. ಮುಂದೆ ೧೬-೧೭ ಅಧ್ಯಾಯಗಳನ್ನು ಭಕ್ತಮಾಲೆಯ ಆಧಾರದಿಂದ ಬರೆದನು. ೧೯ನೆಯ ಅಧ್ಯಾಯ ಮುಗಿದನಂತರ ದಾಮಾಜಿ ಪಂತ, ಭಾನುದಾಸ, ಮುಂತಾದವರ ಚರಿತ್ರೆಗಳನ್ನು ಬರೆದನು. ಭಾನುದಾಸನ ಚರಿತ್ರೆಯನ್ನು ಹೇಳತೊಡಗಿದಾಗ್ಗೆ ಅವನ ವಂಶಜರಿಂದ ಅವನ ವಿಷಯವಾಗಿ ಹೆಚ್ಚಿನ ಸಂಗತಿಗಳು ದೊರೆತವು. ಮುಂದೆ ಬಹಿರಂಭಟ್ಟನ ಚರಿತ್ರೆಯನ್ನು ಹೇಳಿದ ಮೇಲೆ ಈತನು ತುಕಾರಾಮನ ಚರಿತ್ರವನ್ನು ಬರೆಯಲು ಮೊದಲು ಮಾಡಿದನು. ತುಕಾರಾಮನ ವಿಷಯಕವಾದ ಸಮಗ್ರಸಂಗತಿಗಳನ್ನು ಸ್ವತಃ ಶೇಖರಿಸಿ ಅದನ್ನು ಬಹು ಹೃದಯಂಗಮವಾಗಿ ಬಣ್ಣಿಸಿರುವನು. ಆಮೇಲೆ ಜೋಧಲೆಬೋವಾ, ಗಣೇಶನಾಥ, ಸಂತೋಬಾ ಪವಾರ, ಉದ್ಧವ, ಚಿದ್ಘನ ಮತ್ತು ವಿಸೋಬಾ ಸರಾಫ ಇವರ ಚರಿತ್ರೆಗಳನ್ನು ಬರೆದು ಭಕ್ತವಿಜಯ ಗ್ರಂಥವನ್ನು ಶಾಲಿವಾಹನ ಶಕೆ ೧೬೮೪ ಚಿತ್ರಭಾನು ನಾಮಸಂವತ್ಸರ ವೈಶಾಖ ವದ್ಯ ದ್ವಾದಶಿಗೆ ಸಮಾಪ್ತಗೊಳಿಸಿದನು. ಈ ಗ್ರಂಥದಲ್ಲಿ ಒಟ್ಟಿಗೆ ೫೭ ಅಧ್ಯಾಯಗಳಿದ್ದು ಓವಿ ಸಂಖ್ಯೆಯು ೯೯೧೬ ಇರುತ್ತದೆ. ೫೬ ಅಧ್ಯಾಯಗಳಲ್ಲಿ ೫೬ ದೇಶದ ವಿಷ್ಣುಭಕ್ತರ ಚರಿತ್ರೆಗಳಿದ್ದು ೫೭ನೇ ಅಧ್ಯಾಯದಲ್ಲಿ ಗ್ರಂಥದ ಅನುಕ್ರಮಣಿಕೆಯು ಮತ್ತು ಫಲಶ್ರುತಿಯು ಹೇಳಲ್ಪ

ಟ್ಟಿರುವುದು. ಮಹಿಪತಿಯ ವಿಷಯವಾಗಿ ಇದಕ್ಕಿಂತ ಹೆಚ್ಚಿನ ಸಂಗತಿಗಳು ಬೇಕಾದಲ್ಲಿ ಓದುಗರು ರಾ। ರಾ। ಸಿದ್ಧೇಶ್ವರ ಶಾಸ್ತ್ರಿ ಚಿತ್ರಾವ ಕೃತ "ಭಾರತವರ್ಷೀಯ ಮಧ್ಯಯುಗಿನ ಚರಿತ್ರಕೋಶ" ವೆಂಬ ಗ್ರಂಥವನ್ನು ಅವಲೋಕಿಸಬಹುದು.

ಈ ಗ್ರಂಥದಲ್ಲಿ ಮರಾಠಿಯಲ್ಲದ ಅನ್ಯಭಾಷೆಯೊಳಗಿನ ಸುಮಾರು ೧೫೦ ಶಬ್ದಗಳನ್ನು ೭೫೦ ರಗಿಂತಲು ಹೆಚ್ಚು ಸಾರೆ ಬಳಸಿದಂತೆ ಕಂಡು ಬರುತ್ತದೆ. ಅವುಗಳಲ್ಲಿ ಅಚ್ಚಗನ್ನಡ ಶಬ್ದಗಳು ಕೆಳಗಿನಂತೆ ಇರುವವು. ಸಲಗಿ ಕಾಕಡ, ನೀರ, ಮಾತ್ರ, ಹೊನ್ನು, ಮೊಟ್ಟೆ, ಆಹೇರ, ಪುಂಡ, ಗೋಣಿ, ತಗಡ, ಕುಪಿ, ತಲಿ, ತೂಕ, ಬರಡ, ಮೀನ, ಬಡಿವಾರ, ಚುಟಕಿ, ಚೋಜ, ರಾಯ, ಸೋಂಗ, ಕಾಸಾವಿಸ, ಪವಾಡ, ಆವಿಗೆ ಕಣಕ, ಕೋಡಬಳಿ, ಛಪ್ಪರ, ಹರಳ, ತಿರುಕ, ಅರಳ, ಪರಾತ, ದಿಂಡ, ಗೊಂಡೆ, ಚಿಂದಿ, ಪಾಟಲಿ, ಕೋರಾನ್, ಹೌದ, ದವನ, ಅಂಬಾರ, ಉಂಡಿ, ಚಟ, ಹರಿಕೆ, ಕಡಬ, ಕಾವಡ, ಹಡಪಿ, ಹಿಲಾಲ, ಮುಶಿ, ಕೈವಾರ ಚಿಟ್ಟ ಇವೇ ಮುಂತಾದವುಗಳು.

ಕನ್ನಡ ತದ್ಭವ ಶಬ್ದಗಳುಃ— ಬಿರುದ, ಅಂಗಿ, ಅಣ, ಕುಂಚಿ, ಪಹುಡಲ, ಬೀದಿ, ಕಳಸ, ಆಡಂಬರ, ಮೇಳ, ಪಸಾರ, ಸಂದುಕ, ಸವತಿ, ಜೋಗವ್ವ, ಸುದ್ದಿ, ದಿವಟಿ, ಕಸಬ, ಮಕರ, ಕಾಗೆ, ಜವ್ವಾದಿ, ಇದರ ಹೊರತಾಗಿ ಪರಭಾಷೆಯ ಶಬ್ದಗಳುಃ— ಶಿಂದಿ, ಕಾಚ, ಪೆಹರಣ, ಗೌಣ, ಡಫ, ಗುಡಗುಡಿ, ತಲಫ, ಪಖಾಲ, ಹವಾಲದಾರ, ವರಾತ, ಬರಚಿ, ಖಿಚಡಿ, ಮುದ್ದಲ ಮುಂತಾದವುಗಳು ಧಾರಳವಾಗಿ ಉಪಯೋಗಿಸಲ್ಪಟ್ಟಿರುವುವು. ಅಲ್ಲದೆ ಶರಣ, ಪ್ರಸಾದ, ಪುಣ್ಯತಿಥಿ, ಪಾದಪೂಜಾ, ಚರಣತೀರ್ಥ, ಸನ್ನಿಧ, ಅನುಗ್ರಹ, ಇವೇ ಮೊದಲಾದ ವೀರಶೈವ ಧರ್ಮದಲ್ಲಿಯ ಪಾರಿಭಾಷಿಕ ಸಂಸ್ಕೃತದ ಎಷ್ಟೋ ಶಬ್ದಗಳು ಎಷ್ಟೋಸಲ ಪ್ರಯೋಗಿಸಲ್ಪಟ್ಟವೆ. ಈ ಶಬ್ದಗಳು ಸಂಸ್ಕೃತವಿದ್ವಾಗ್ಯೂ ಇವುಗಳನ್ನು ಲಿಂಗಾಯತರು ತಮ್ಮ ಧಾರ್ಮಿಕ ಗ್ರಂಥಗಳಲ್ಲಿ ಯಾವ ಉದ್ದೇಶದಿಂದ ಉಪಯೋಗಿಸಿರುವರೋ ಅದೇ ಹೇತುವಿನಿಂದಲೇ ಈ ಗ್ರಂಥಕರ್ತನು ತನ್ನ ಗ್ರಂಥದಲ್ಲಿ ಆ ಶಬ್ದಗಳನ್ನು ಬಳಸಿರುವನು. ಈ ಗ್ರಂಥದಲ್ಲಿ ಕವಿಯು ಮುಕ್ತಿಗೆ ಮೂಲಾಧಾರವಾದ ಮತ್ತು ಸಾಧನೀಭೂತವಾದ ಭಕ್ತಿ, ಜ್ಞಾನ, ವೈರಾಗ್ಯ ಇವುಗಳು ಹಾಗೂ ಯಾವ

ಹೋರೆಯಿಂದಲೂ ಮೋಕ್ಷಕ್ಕೆ ಪ್ರತಿಬಂಧವಿಲ್ಲ ಅಂದರೆ ಕಾಯಕ (ಉದ್ಯೋಗ) ದ ಮಹತ್ವ ಮುಂತಾದ ವೀರಶೈವ ಧರ್ಮದೊಳಗಿನ ಆದ್ಯ ತತ್ವಗಳ ಅನುಕರಣವನ್ನೇ ಮಾಡಿರುವನು. ಈ ಗ್ರಂಥದಲ್ಲಿ ಕರ್ನಾಟಕದ ಲಿಂಗಾಯತರು ಪ್ರೇತವನ್ನು ಸಿಂಗರಿಸುವ ಲಿಂಗಾಯತರು ಎಂದು ಮುಂತಾಗಿ ಕರ್ನಾಟಕದ ವೀರಶೈವರ ವಿಷಯವಾಗಿ ಆಗಾಗ್ಗೆ ಉದ್ಗಾರಗಳನ್ನು ತೆಗೆದಿರುವುದರಿಂದ ಗ್ರಂಥಕಾರನ ಕರ್ನಾಟಕಸ್ಥರ ವಿಷಯವಾದ ತಿರಸ್ಕಾರ ಬುದ್ಧಿಯು ವ್ಯಕ್ತವಾಗುತ್ತದೆ. ಅಧ್ಯಾಯ ೨೨ ಓವಿ ೧೩೨ ರಿಂದ ೧೩೬ ವರೆಗೆ ಜ್ಞಾನದೇವನ ಗುರು ಪರಂಪರೆಯನ್ನು ಹೇಳಿದೆ. ಈ ಗುರುಪರಂಪರೆಯನ್ನು ಭಕ್ತಿತತ್ವಾಮೃತ ವೆಂಬ ಗ್ರಂಥದಲ್ಲಿಯೂ ಮತ್ತು ಮಚ್ಛೇಂದ್ರ ಸಂಹಿತೆಯಲ್ಲಿಯೂ ಹೇಳಿದೆ. ಇದರ ಮೇಲಿಂದ ಕೆಳಗಿನಂತೆ ಅನುಮಾನ ಹೊರಡುವುದು.

ಹಿಂದಕ್ಕೆ ೧೨ನೆಯ ಶತಮಾನದಲ್ಲಿ ನಾಥಪಂಥದ ಶೈವ ಜನರು ಬಂಗಾಲದೊಳಗಿಂದ ದಕ್ಷಿಣದ ಕಡೆಗೆ ಸಾಗಿದಾಗ್ಗೆ ಸೊಲ್ಲಾಪುರ, ಪಂಡರಪುರ, ಕೊಲ್ಹಾಪುರ, ಮಂಗಳವೇಡೆ ಮುಂತಾದ ಸ್ಥಳಗಳ ಉತ್ತರಕ್ಕೆ ರೇವಣಸಿದ್ಧೇಶ್ವರನು ನಾಥಪಂಥೀ ಗೋರಖನಾಥನನ್ನು ಪೂರ್ಣ ಪರಾಭವ ಮಾಡಿದ್ದರಿಂದ ನಾಥಪಂಥದ ಪ್ರಗತಿಯು ಅಷ್ಟಕ್ಕೆ ಕುಂಠಿತವಾದಂತೆ ಕಂಡಬರುತ್ತದೆ. ಇದಕ್ಕೆ ಸೊಲ್ಲಾಪೂರ, ಕೊಲ್ಹಾಪೂರ, ಸಾತಾರಾ, ರೇಣಾಯಿ, ಮಂಗಳವೇಢೆ, ಮಾಸೂರ ಮುಂತಾದ ಸ್ಥಾನಗಳಲ್ಲಿಯ ಪ್ರಾಚೀನ ಹಾಗೂ ಪರಮಪವಿತ್ರವಾದ ರೇವಣಸಿದ್ಧೇಶ್ವರನ ಕ್ಷೇತ್ರಗಳೇ ಬಲವಾದ ನಿದರ್ಶನಗಳಾಗಿವೆ. ಆಮೇಲೆ ಗೋರಖನಾಥನು ಶ್ರೀಶೈಲದ ಕಡೆಯಿಂದ ಪುನಃ ಕರ್ನಾಟಕದೊಳಗೆ ನುಗ್ಗುವ ಪ್ರಯತ್ನಮಾಡಿದಾಗ್ಗೆ ಅಲ್ಲಿ ಅಲ್ಲಮಪ್ರಭುವು ಈ ಗೋರಖನನ್ನು ಪೂರ್ಣ ಪರಾಭವಗೊಳಿಸಿ ಆತನಿಗೆ ಹಠಯೋಗಕ್ಕಿಂತಲು ಶಿವಯೋಗವೇ ಮಿಗಿಲಾದದ್ದೆಂದು ಮನಗಾಣಿಸಿ ಶಿವಯೋಗಸಾಧನದ ಉಪದೇಶವನ್ನು ಹೇಳಿ ಶಿವಯೋಗಸಾಧಕನನ್ನಾಗಿ ಮಾಡಿದನು. ಇದರ ಸತ್ಯತೆಗಾಗಿ ಚಾಮರಸಕೃತ ಪ್ರಭುಲಿಂಗಲೀಲೆ ಮತ್ತು ಎಳಂದೂರ ಹರೀಶ್ವರಕೃತ ಪ್ರಭುದೇವರ ಪುರಾಣಗಳನ್ನು ವಾಚಕರು ನೋಡಬಹುದು. ಒಟ್ಟಿನಮೇಲೆ, ಈ ನಾಥಪಂಥದ ಜನರ ವರ್ಚಸ್ಸು ವೀರಶೈವರ ಮೇಲೆ ಬೀಳದೆ ಅದರ ಬದಲಾಗಿ ಈ ನಾಥಪಂಥದ ಜನರೇ ವೀರಶೈವರ ಶಿವಯೋಗ ಸಾಧನ

ಗಳಲ್ಲಿ ತೊಡಗಿದರು. ಅದು ಹೇಗೆಂದರೆ ಮೇಲೆ ವಿವರಿಸಿದಂತೆ ಈ ಗೋರಖನಾಥನು ಜ್ಞಾನದೇವನ ಮುತ್ಯಾ ಗುರುವಾಗುವನು. ಆದುದ ರಿಂದಲೆ ಜ್ಞಾನದೇವನು ಕೂಡ ತನ್ನ ಗ್ರಂಥದಲ್ಲಿ ವೀರಶೈವರ, ಆಚಾರ ಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾ ಲಿಂಗ ಎಂಬ ಷಡ್ವಿಧಲಿಂಗಗಳ ವರ್ಣನೆಯನ್ನು ಮಾಡಿರುವನು. ("ಜ್ಞಾನೇಶ್ವರಕೃತ ಪಂಚೀಕರಣ" ಪುಟ ೪೩, ೪೪, ಓವಿ ೨-೧೦ ವರೆಗೆ) ಒಟ್ಟಿನಲ್ಲಿ ನಾಥಪಂಥದಿಂದಲೇ ಉದ್ಭವಿಸಿದ ವಾರಕರೀಪಂಥವಾದರೂ ಕೆಲವು ವಿಶಿಷ್ಟ ಭಾಗಗಳನ್ನು ಹೊರತುಪಡಿಸಿ ಲಿಂಗವಂತ ಧರ್ಮದ ಪ್ರತಿಬಿಂಬವೇ ಆಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಇದು ಅಲ್ಲದೆ ಜ್ಞಾನೇಶ್ವರಿಯಲ್ಲಿ ಕೆಳಗಿನಂತೆ ವೀರಶೈವ ಧರ್ಮತತ್ವಗಳು ಸ್ಪಷ್ಟ ವಾಗಿ ಅಡಕವಾಗಿರುವವು.

| ವಿಷಯ | ಭಾಗ | ಭಗವದ್ಗೀತೆಯ ಶ್ಲೋಕ. | ಜ್ಞಾನೇಶ್ವರಿ ಓವಿ. |
|---|---|---|---|
| ೧ ವೀರಶೈವಾಚರಣೆ | ೩ | ೧೦ | ೮೭-೯೨ |
| ೨ ಕಾಪಡಿಮಹೇಶ | ೬ | ೧೦ | ೧೫೩ |
| ೩ ಲಿಂಗಾಂಗ | ೬. | ೧೫ | ೩೦೫ |
| ೪ ಸತಿಪತಿಭಾವ | ೧೨ | ೧೪ | ೧೫೬ |

ಇಂಥ ಪರಿಸ್ಥಿತಿಯಲ್ಲಿ ಕ್ರಿ. ಶ. ೧೪೭೯ ರ ಸುಮಾರಿನಲ್ಲಿ ಕರ್ನಾ ಟಕದಲ್ಲಿ ವಲ್ಲಭಾಚಾರ್ಯನೆಂಬ ಒಬ್ಬ ಪಂಡರಪುರದ ವಾರಕರಿಯು ಬ್ರಹ್ಮಸೂತ್ರದ ಮೇಲೆ ಶುದ್ಧಾದ್ವೈತಪರವಾಗಿ ಭಾಷ್ಯವನ್ನು ಬರೆದನು. ಇಲ್ಲವಾದರೆ ಕರ್ನಾಟಕದ ಅಕ್ಕಪಕ್ಕಗಳಲ್ಲಿ ಈ ವಾರಕರೀಪಂಥವು ನಾಮ ಶೇಷವಾಗುವ ಸಂಭವವಿತ್ತು. ಅದು ಹೇಗಂದರೆ ೧೫ನೇ ಶತಮಾನ ದಲ್ಲಿ ಯುರೋಪಖಂಡದೊಳಗೆ ಪ್ರೊಟೆಸ್ಟಂಟ ಧರ್ಮದ ಉದಯವಾ ದನಂತರ ಅವರು ರೋಮನ್ ಕೆಥೋಲಿಕ್ ಧರ್ಮದೊಳಗಿನ ಕೆಲವು ನ್ಯೂನತೆಗಳನ್ನು ತಮ್ಮ ದೃಷ್ಟಿಯಿಂದ ತೋರಿಸಲುದ್ಯುಕ್ತರಾದ್ದರಿಂದ ರೋಮನ್ ಕ್ಯಾಥೊಲಿಕ್ ಧರ್ಮದವರು ತಮ್ಮ ಧರ್ಮದ ಪ್ರಭಾವವು ಕಡಿಮೆಯಾಗಬಾರದೆಂದು ಬಗೆದು ಸ್ಪೇನದಲ್ಲಿ ಕೌಂಟರರಿಫರಮೇಶನ್ ಪ್ರಾರಂಭಿಸಿ ಪ್ರೊಟೆಸ್ಟಂಟದ ಕೆಲವು ಮಹತ್ವದ ತತ್ವಗಳನ್ನು ರೋಮನ್ ಕೆಥೋಲಿಕ್ ಧರ್ಮದಲ್ಲಿ ಸೇರಿಸಿಕೊಂಡು ತಮ್ಮ ಸುಧಾರಣೆಯನ್ನು ಮಾಡಿಕೊಂಡಂತೆ ನಾಥಪಂಥದಿಂದ ಉತ್ಪನ್ನವಾದ ವಾರಕರಿಪಂಥದ

ಹಲವು ಜನರು ವೀರಶೈವರ ಕೆಲವು ಮಹತ್ವದ ತತ್ವಗಳನ್ನು ತಮ್ಮ ಪಂಥದಲ್ಲಿ ಅಡಕಮಾಡಿಕೊಂಡು ತಮ್ಮ ಧರ್ಮಸುಧಾರಣೆಯನ್ನು ಮಾಡಿಕೊಂಡಂತೆ ಕಾಣುತ್ತದೆ. ಇರಲಿ. ೧೬ನೇ ಶತಮಾನದಿಂದ ಇಂದಿನ ವರೆಗೂ ಅನೇಕಾನೇಕ ಧಾರ್ಮಿಕ ಹೋರಾಟಗಳು ಕರ್ನಾಟಕದಲ್ಲಿ ನಡೆದಾಗ್ಯೂ ಈ ವೀರಶೈವ ಧರ್ಮಪುರುಷನ ಒಂದು ಕೂದಲೆಳೆಯಾ ದರೂ ಕೊಂಕಲಿಲ್ಲ.

ಭಕ್ತಿಮಾರ್ಗದಲ್ಲಿ "ಅಪೀ ವಾ ಯಶ್ಚಾಂಡಾಲೊ ಶಿವ ಇತಿ ವಾಚ್ಯಂ। ತೇನಸಹವಸೇತ್ ತೇನಸಹವಿಶೇತ್ ತೇನಸಹಭುಂಜಯಾತ್"॥ ಅಂದರೆ ಚಾಂಡಾಲನಾದ ಶಿವಭಕ್ತನ ಸಂಗತ ಭೋಜನಾದಿ ಸಕಲ ಒಳಕೆಗ ಳನ್ನು ನಿರ್ಭಯದಿಂದ ಮಾಡಬೇಕೆಂತಲೂ ಮತ್ತು ಆತನೇ ಕುಲಜ ನೆಂತಲೂ ಉಪನಿಷತ್ ವಾಕ್ಯವಿದೆ. ಇಷ್ಟೇ ಅಲ್ಲದೆ "ಭಕ್ತಃ ಶಿವಃ ಶಿವೋಭಕ್ತಃ ಸದ್ಭಕ್ತಃ ಕೇವಲಂ ಶಿವಃ।ಆಧಾರ ಸಹಿತೋ ಭಕ್ತಃ ನಿರಾ ಧಾರಾಃ ಸದಾಶಿವಃ॥ ಈ ಶ್ರುತಿ ವಾಕ್ಯದಂತೆ ಮತ್ತು ಮಮಭಕ್ತೋ ಮಮಾಧಿಕಃ ಈ ಆಗಮವಾಕ್ಯದಂತೆ ಮತ್ತು "ಭಕ್ತಾಂಚಯಾಥೂಳಿ ಭಗವಂತ ಲೋಳಿ" ಈ ಮಹಾರಾಷ್ಟ್ರದ • ಸಂತರ ವಚನದಂತೆ ಭಗವಂತನಕಿಂತಲೂ ಭಗವದ್ಭಕ್ತರೇ ಶ್ರೇಷ್ಠರೆಂದು ಸರ್ವಸಮ್ಮತವಿದೆ. ಹೀಗಿರುತ್ತಿರಲು ಮಹಿಪತಿಯು ಮಾತ್ರ ತನ್ನ ಗ್ರಂಥದಲ್ಲಿ ಪರಮಾ ತ್ಮನು ತನ್ನ ಭಕ್ತರ ಸಂಕಟ ಸಮಯದಲ್ಲಿ ಅವರ ಉದ್ಧಾರಾರ್ಥವಾಗಿ ತಾನು ಏಕಾಂಗಿಯಾಗಿಯೂ ಇಲ್ಲವೆ ಸಹಕುಟುಂಬವಾಗಿಯೂ ಪ್ರಕಟ ನಾಗಿ ಜಾತ್ಯಾದಿಗಳನ್ನು ನೋಡದೆ ಭಕ್ತರಗೂಡ ಊಟಮಾಡಿ ಹೋದಂತೆ ಅನೇಕ ಉದಾಹರಣೆಗಳನ್ನು ಕೊಟ್ಟಿರುವನು; ಆದರೆ ಬ್ರಾಹ್ಮಣ ವಾರ ಕರಿಗಳು ಶೂದ್ರ ವಾರಕರಿಗಳಲ್ಲಿ ಉಂಡಂತೆ ಒಂದಾದರೂ ಉದಾಹರಣೆ ಯನ್ನು ಕೊಟ್ಟಿಲ್ಲ. ಮೇಲಾಗಿ ಪರಮಾತ್ಮನು ಭಕ್ತೋದ್ಧಾರಕ್ಕಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅತಿಶೂದ್ರ, ಪಶು, ಪಕ್ಷಿ, ಪ್ರಾಣಿ, ಕೀಟಕ, ದಶಾವತಾರದೊಳಗಿನ ಯಾವದೊಂದು ರೂಪು, ಸಾಕ್ಷಾತ್ ಪಕ್ಷಿವಾಹನ, ಇಲ್ಲವೆ ಸಂತಸಖುಬಾಯಿ ವೆಶೆಯಿಂದ ಮೋಹಿನೀ ರೂಪ ಧರಿಸಿದಂತೆ ಸ್ತ್ರೀ ರೂಪ ಧಾರಣ ಮಾಡಿದ ಅಸಂಖ್ಯ ಉದಾ ಹರಣೆಗಳನ್ನು ಕೊಟ್ಟಿರುವನು; ಆದರೆ ಶೂದ್ರನು ಬ್ರಾಹ್ಮಣನಾದ ಒಂದೂ ಉದಾಹರಣೆಯನ್ನು ಕೊಟ್ಟಿಲ್ಲ. ವಾರಕರಿಗಳಾಗಿ ಪಂಡರಿನಾಥನ ಭಜ

ನೆಯನ್ನು ಎಷ್ಟೊಂದು ಮಾಡಿದಾಗ್ಯೂ ಶೂದ್ರನು ಶೂದ್ರನೇ, ಬ್ರಾಹ್ಮಣನು ಬ್ರಾಹ್ಮಣನೇ ಆಗಿ ಉಳಿವನು ಎಂಬ ಮತಿತಾರ್ಥವು ಈ ಪಂಥದಲ್ಲಿ ಸ್ಪಷ್ಟವಿದ್ದಂತೆ ತೋರುತ್ತದೆ.

ಶ್ರೀರಂಗಂ ಮತ್ತು ವೆಂಕಟಗಿರಿ (ಮದ್ರಾಸ ಇಲಾಖೆ) ಗಳಲ್ಲಿ ದೇವರ ನೈವೇದ್ಯವನ್ನು ಪ್ರಸಾದವೆಂದು ಕೊಂಡುಕೊಂಡು ಗುಡಿಯ ಆವಾರಿನಲ್ಲಿ ಜಾತ್ಯಾದಿಗಳನ್ನು ನೋಡದೆ ಎಲ್ಲ ಜಾತಿಯ ವೈಷ್ಣವ ಜನರು ಮಡಿ ಮೈಲಿಗೆ ಎನ್ನದೆ ತಿಂದು ಆವಾರದ ಹೊರಗೆ ಬಂದಾಕ್ಷಣವೆ ಪುನಃ ತಮ್ಮ ತಮ್ಮ ಜಾತ್ಯಾದಿಗಳಿಗನುಸರಿಸಿ ಆಚರಿಸುವಂತೆ ಮತ್ತು ಕ್ರಿಶ್ಚನ್ ಧರ್ಮವನ್ನು ಸ್ವೀಕರಿಸಿದ ಬ್ರಾಹ್ಮಣನು ಬ್ರಾಹ್ಮಣ ಕ್ರಿಶ್ಚನ್‌ನಾಗಿಯೂ ಶೂದ್ರನು ಶೂದ್ರ ಕ್ರಿಶ್ಚನ್‌ನಾಗಿಯೂ ಉಳಿವಂತೆ ಈ ವಾರಕರಿ ಪಂಥದ ಜನರಾದರೂ ತಾಳಮೃದಂಗಗಳನ್ನು ತಕ್ಕೊಂಡು ಮುಖದಿಂದ ವಿಠ್ಠಲ, ವಿಠ್ಠಲ, ಇಲ್ಲವೆ ರಾಮಕೃಷ್ಣ ಹರಿ ಎಂದು ಅನ್ನುತ್ತ ಭಜನೆ ಮಾಡುವಾಗ್ಗೆ ನಮಸ್ಕಾರ ಚಮತ್ಕಾರಾದಿಗಳಲ್ಲಿ ತಮ್ಮೆಲ್ಲರೊಳಗೆ ಸಮಾತಾಭಾವವನ್ನು ತೋರಿಸುವರಲ್ಲದೆ ಭಜನಾಕಾರ್ಯವು ಮುಗಿದನಂತರ ಶೂದ್ರನು ಶೂದ್ರನಾಗಿಯೇ ಬ್ರಾಹ್ಮಣನು ಬ್ರಾಹ್ಮಣನಾಗಿಯೇ ಉಳಿವನು. ಇವರಲ್ಲಿ ಅನ್ನೋದಕಾದಿ ವ್ಯವಹಾರಗಳೇ ನಡೆಯುವದಿಲ್ಲವಾದ್ದರಿಂದ ಶರೀರ ಸಂಬಂಧದ ಮಾತಂತೂ ದೂರೇ ಉಳಿಯಿತು.

ಭಕ್ತಿ ಪಂಥದಲ್ಲಿ ಇಂಥ ಉಪಾಸ್ಯ ದೇವರೇ ಬೇಕೆಂಬ ನಿರ್ಬಂಧವೇನೂ ಇಲ್ಲ! ಆದರೆ ಅವ್ಯಭಿಚಾರಿಣಿಯ ಭಕ್ತಿಯ ದೆಶೆಯಿಂದ ಸದ್ಭಕ್ತನಿಗೆ ಒಬ್ಬನೇ ದೇವರು ಬೇಕಾಗುತ್ತಾನೆ. ಈ ದೃಷ್ಟಿಯಿಂದ ಮಹಿಪತಿಯು ವಿಷ್ಣುವನ್ನು ಮುಖ್ಯ ದೈವತವನ್ನಾಗಿ ತಿಳಿದು ತಾನು ತನ್ನ ಗ್ರಂಥದಲ್ಲಿ ಪ್ರತಿಪಾದಿಸಿದ್ದು ಯಥಾರ್ಥವಾಗಿದೆ. ಆದರೆ ತನ್ನ ಪಕ್ಷದ ಮಂಡನಾರ್ಥವಾಗಿ ಬೇರೆ ದೇವತೆಗಳ ಅವಹೇಳನ ಮಾಡುವುದು ಉಚಿತವಲ್ಲವು. ಈ ಗ್ರಂಥದಲ್ಲಿ ಇಂಥ ಅನೇಕ ದೃಷ್ಟಾಂತಗಳನ್ನು ಕಾಣಬಹುದಾಗಿದೆ. ಇದರ ಮೇಲಿಂದ ನೋಡಲಾಗಿ ಗ್ರಂಥಕಾರನಲ್ಲಿ ಪರಧರ್ಮಸಹಿಷ್ಣುತೆಯು ಶೀರ ಕಡಿಮೆ ಇದ್ದಂತೆ ತೋರಿಬರುತ್ತದೆ. ಉದಾಹರಣಾರ್ಥವಾಗಿ ಅಧ್ಯಾಯ ೪೧ ಓವಿ ೫೬.೧೦೧ ವರೆಗೆ ಶುದ್ಧ ಸಾಂಪ್ರದಾಯದ ಒಬ್ಬ ಜಂಗಮನನ್ನು ಮನದಣಿ ನಿಂದಿಸಿ ಅವ್ಯವಹಾರ್ಯ, ಅಮಾನುಷ ಮತ್ತು ಇತಿಹಾಸಜ್ಞರು ಒಪ್ಪದಂಥ ಒಂದು ಉದಾಹರ

ಣೆಯನ್ನೇ ಕೊಟ್ಟಿರುವನು. ಆದರೆ ಮಹಿಪತಿಯು ತಾನು ವಾರಕರಿ ಯಾಗಬೇಕಾದರೆ ತನಗೆ ತುಳಸೀ ಮಾಲೆಯನ್ನು ಯಾರು ಕೊಟ್ಟರು? ವಾರಕರಿ ಜನರ ಮೂಲ ಗುರು ಯಾರು? ಮತ್ತು ಇವತ್ತಿನ ಮಿತಿಗೆ ವಾರಕರಿಯಾಗುವ ಯಾವತ್ತರು ಕಪ್ಪಕಾಣಿಕೆಗಳನ್ನು ಅರ್ಪಿಸಿ ತುಳಸೀ ಮಾಲೆಯನ್ನು ಯಾರಿಂದ ಪಡೆವರು? ಆ ಅವಾಸೇಕರ ಮಹಾರಾಜರು ಶುದ್ಧ ಸಾಂಪ್ರದಾಯದ ಲಿಂಗಾಯತರೇ ಇದ್ದ ಸಂಗತಿಯನ್ನು ಕವಿಯು ತನ್ನ ಗ್ರಂಥದಲ್ಲಿ ಎಲ್ಲಿಯೂ ವರ್ಣಿಸದೆ ಇರುವುದರಿಂದ ಅದನ್ನು ಮರೆ ತಂತೆ ಕಾಣುತ್ತದೆ.

ದಾಸ್ಯ ಭಕ್ತಿಯಲ್ಲಿ ದೇವ ದೊಡ್ಡವನು ಭಕ್ತ ಸಣ್ಣವನು ಎಂಬ ಭಾವ ನೆಯು ಸದಾ ಸರ್ವದಾ ಜಾಗ್ರತವಾಗಿರುವುದರಿಂದ ಈ ಸೇವ್ಯ ಸೇವಕ ಭಾವಕ್ಕನುಗುಣವಾಗಿ ಪರಮಾತ್ಮನು ಭಕ್ತೋದ್ಧಾರಕ್ಕೋಸ್ಕರ ಅನೇಕ ವಿಚಿತ್ರ ರೂಪುಗಳನ್ನು ಧಾರಣ ಮಾಡಿ ಭಕ್ತರ ಸಂಕಟ ನಿವಾರಣೆ ಯನ್ನು ಮಾಡುವುದು ಸೂಕ್ತವಿದೆ. ಇಂಥ ಭಕ್ತಿಯನ್ನು ರಾಮಾವತಾ ರದಲ್ಲಿ ಮಾರುತಿಯು ಪ್ರಕಟಗೊಳಿಸಿದ್ದು ಸರ್ವಶ್ರುತವಿದೆ. ಇದರ ಮುಂದಿನ ಮೆಟ್ಟಲು ಸಖ್ಯ ಭಕ್ತಿಯದು. ಈ ಸಖ್ಯ ಭಕ್ತಿಯಲ್ಲಿ ದೇವ ಮತ್ತು ಭಕ್ತರಲ್ಲಿ ಸಮಾನತೆ ಇರುವುದು. ಅಂದರೆ ಕೇವಲ ಅದ್ವೈತ ಭಾವನೆಯು ಭಕ್ತನಲ್ಲಿ ಹೆಚ್ಚಿಗೆ ಪ್ರಬಲವಾಗುತ್ತಿದೆ. ಇಂಥ ಸ್ಥಿತಿಯಲ್ಲಿ ಪರಮಾತ್ಮನು ಎಂಥ ಕೀಳ ರೂಪವನ್ನು ಧರಿಸಿದರೂ ಅದರಿಂದ ಭಕ್ತನ ಭಕ್ತಿಗೆ ಯಾವ ಪ್ರಕಾರದ ಚ್ಯುತಿಯೂ ಇಲ್ಲ. ಯಾಕಂದರೆ ಸಖ್ಯ ಭಕ್ತಿಯಲ್ಲಿ ದೇವ ಮತ್ತು ಭಕ್ತರೊಳಗೆ ಭೇದ ಭಾವವಿರುವದಿಲ್ಲ. ಆದರೆ ಇದು ದಾಸ್ಯ ಭಕ್ತಿಯಲ್ಲಿ ಸಾಧ್ಯವಿಲ್ಲವು.

ಇಂಥ ಭಕ್ತಿಯನ್ನು ಕೃಷ್ಣಾವತಾರದಲ್ಲಿ ಅರ್ಜುನನು ಆಚರಿಸಿದು ಲೋಕವಿಖ್ಯಾತವಿದೆ. ಸಖ್ಯ ಭಕ್ತಿಯೊಳಗೆ ದೇವ ಮತ್ತು ಭಕ್ತರಲ್ಲಿ ಸರಿ ಸಮಾನತೆ ಇರುವುದರಿಂದ ದೇವರ ಪವಾಡಗಳ ಮಹತ್ವವು ಸದ್ಭಕ್ತ ನಿಗೆ ಏನೂ ಅನ್ನಿಸುವದಿಲ್ಲ. ಪವಾಡಗಳ ಮಹತ್ವವು ಕೇವಲ ದಾಸ್ಯ ಭಕ್ತಿಯಲ್ಲಿಯೇ ಹೆಚ್ಚಿಗೆ ತೋರುವುದು. ಆದುದರಿಂದಲೆ ಮಹಿಪತಿಯು ತನ್ನ ದ್ವೈತಭಾವನೆಗನುಸರಿಸಿ ವೈಷ್ಣವ ದೇವರ ಅನೇಕ ವಿಚಿತ್ರ ಪವಾ ಡಗಳನ್ನು ಹಾಡಿರುವನು. ಮಾನವೀಸ್ವಭಾವಕ್ಕನುಗುಣವಾಗಿ ಈ ಪವಾ ಡಗಳ ಮಹತ್ವಕ್ಕೆ ಮರುಳಾಗಿ ಮನುಷ್ಯನು ಭಕ್ತಿ ತೋರಿಸಿದ್ದರೆ ಅವನ

ಭಕ್ತಿಯು ನಿಷ್ಕಾಮಭಕ್ತಿಯೆನಿಸಲಾರದು. ನಿಷ್ಕಾಮ ಭಕ್ತಿಯಾಗಬೇಕಾದರೆ ಭಕ್ತನ ಕಣ್ಮುಂದೆ ದೇವನ ಭಕ್ತೋದ್ಧಾರದ ಪವಾಡಗಳೇ ಬೇಕಾಗಿಲ್ಲ. ಅವುಗಳ ಅಪೇಕ್ಷೆಯೇ ಅವನಿಗಿರುವುದಿಲ್ಲ. ಕೇವಲ ತನ್ನ ಕರ್ತವ್ಯವೆಂದು ಆತನು ಭಕ್ತಿಮಾಡುತ್ತಿರುವನು. ಶರಣ (ಅಂಗ = ಜೀವ) ಸತಿ, ಲಿಂಗ (ಶಿವ = ಬ್ರಹ್ಮ) ಪತಿ, ಎಂದು ಸತಿಪತಿಭಾವದಿಂದ ಭಕ್ತಿ ಮಾಡುವಂಥ ಲಿಂಗಾಯತರ ಭಕ್ತಿಗೂ ಮಹಿಪತಿಯ ಭಕ್ತಿವಿಜಯದೊಳಗಿನ ದಾಸ್ಯಭಕ್ತಿಗೂ ಭೂವ್ಯಾಕಾಶದಷ್ಟು ಅಂತರವಿದೆ. ಅದು ಹೇಗಂದರೆ ಸತಿಪತಿ ಭಾವನೆಯಲ್ಲಿ ಪ್ರಾರಂಭಕ್ಕೆ ಸತಿಗಿಂತಲು ಪತಿ ಶ್ರೇಷ್ಠವೆಂಬ ಭಾವನೆಯು ಸತಿಯೊಳಗೆ ದ್ವೈತಭಾವನೆಯಿಂದ ಇರುವಾಗಲೂ ಅಂತ್ಯದಲ್ಲಿ ಅದರ ಪರ್ಯವಸಾನವು ಉಭಯತರ (ಸತಿಪತಿಗಳ) ಸಾಮರಸ್ಯದಲ್ಲಿ ಅಂದರೆ ಅದ್ವೈತದಲ್ಲಿ ಪರಿಣಮಿಸುತ್ತದೆ. ಈ ಸ್ಥಿತಿಯು ಶಬ್ದಗಳ ವರ್ಣನೆಗೆ ನಿಲುಕಲಾರದ್ದಾಗಿದೆ. ಇಂಥ ಸ್ಥಿತಿಯು ರಾಧಾಕೃಷ್ಣಗಳ ಸಂಬಂಧದಲ್ಲಿ ಇದ್ದಾಗ್ಯೂ ಅವರ ಸಾಂಪ್ರದಾಯಿಕರೊಳಗೆ ಭಕ್ತಿಪ್ರದರ್ಶನದ ಕಾರ್ಯವು ದೇವ ಮತ್ತು ಭಕ್ತರಲ್ಲಿ ಸೇವ್ಯಸೇವಕ ಭಾವವು ಅಚ್ಚಳಿಯದೆ ಉಳಿದಂತೆ ಕಾಣುತ್ತದೆ. ಲಿಂಗವಂತರೊಳಗಿನ ಈ ಸತಿಪತಿಭಾವದ ಆಚರಣೆಯ ವರ್ಣನೆಯನ್ನು ಪರಮಶಿವಯೋಗಿಗಳಾದ ಶ್ರೀಮನ್ನಿಜಗುಣ ಶಿವಯೋಗಿಗಳ ತಮ್ಮ ಜಗನ್ಮಾನ್ಯವಾದ ಕೈವಲ್ಯ ಪದ್ಧತಿ ಮೊದಲಾದ ಆರುಶಾಸ್ತ್ರಗಳಲ್ಲಿ ಪ್ರತಿಪಾದಿಸಿರುವರು. ಈ ವರ್ಣನೆಯು ವಚನಶಾಸ್ತ್ರದಲ್ಲಿ ಹೆಚ್ಚು ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವದು.



# ಹರಿಹರ ಕವಿಯ ಲಿಂಗವಂತಿಕೆಯ ಐತಿಹ್ಯ.

## (ಜೀವನಕಾಲ ವಿಚಾರವನ್ನೂ ಒಳಗೊಂಡಿದೆ.)

[ಲೇ:— ಪಂಡಿತ, ಸ. ಹಾ. ಶಿವಮೂರ್ತಿ]

---

ಕೀರ್ತಿಶಾಯರಾದ ರಾ|| ಬ|| ನರಸಿಂಹಾಚಾರವರು ಹರಿಹರ ಕವಿಯು ಕ್ರಿ. ಶ. ೧೧೬೫ ರಲ್ಲಿದ್ದನೆಂದು ಮೊತ್ತಮೊದಲು ಬರೆದರು. ಅಲ್ಲಿಂದೀಚೆಗೆ ಹಲವರು, ಅದನ್ನು ೧೩ನೇ ಶತಕದ ಅಂತ್ಯದವರೆಗೂ ಎಳೆದಿಟ್ಟ ಪ್ರಯುಕ್ತ ತುಂಬಾ ವಾದಗ್ರಸ್ತವಾಗಿತ್ತು. ಆದರೆ ಮೊನ್ನೆ ಪೆಮೊನ್ನೆ ಶ್ರೀಮಾನ್‌ಗಳಾದ ಗೋವಿಂದ ಪೈ ಮಂಜೇಶ್ವರ ಇವರು— "ಹರಿಹರ ಕವಿಗೆ ತನ್ನ ಆಸ್ಥಾನದಲ್ಲಿ ಕರಣಿಕ ಸ್ಥಾ[೧]ನವನ್ನು ಕೊಟ್ಟಿದ್ದ ರಾಜನೆಂದರೆ ಕ್ರಿ. ಶ. ೧೧೪೧-೧೧೭೩ ರಲ್ಲಿದ್ದ ೧ನೇ ನರಸಿಂಹಬಲ್ಲಾಳನು"—ಎಂಬುದನ್ನು ಸಪ್ರಮಾಣವಾಗಿ ಸ್ಪಷ್ಟೀಕರಿಸಿಕೊಟ್ಟು ಬಹಳ ಉಪಕಾರ ಮಾಡಿದ್ದಾರೆಂದು ನಮ್ಮ ಅಭಿಪ್ರಾಯವು. ಆದರೆ ಅದೇ ಲೇಖಕರು—"ಹರಿಹರನು ಕ್ರಿ. ಶ. ಸು. ೧೧೪೫ ರಲ್ಲಿ[೨] ಹುಟ್ಟಿ, ಕ್ರಿ. ಶ. ಸು. ೧೨೧೦-೨೦ ರೊಳಗೆ ಶಿವೈಕ್ಯವಾದನು" ಎಂದು ಊಹಿಸಿರುವುದು ಮಾತ್ರ ಯುಕ್ತಿಯುಕ್ತವಾಗಿಲ್ಲ. ಇದನ್ನು ಕೊನೆಯಲ್ಲಿ ಚರ್ಚಿಸುವೆವು.

ಹರಿಹರಕವಿಯು ಶಿವಗಣದ ರಗಳೆಗಳನ್ನು ರಚಿಸಿದಂದು ಲಿಂಗವಂತನಾಗಿದ್ದನೆಂಬುವಲ್ಲಿ ಎಲ್ಲರದೂ ಒಮ್ಮತವಿದೆ. ಆದರೆ ಗಿರಿಜಾಕಲ್ಯಾಣ ಕಾವ್ಯವನ್ನು ಬರೆವಾಗ ಮಾತ್ರ ಇನ್ನೂ ಬ್ರಾಹ್ಮಣನಾಗಿಯೇ ಇದ್ದನೆಂಬುದು ಇಂದಿನ ಹಲವರ ಅಭಿಪ್ರಾಯ. ಇದರೊಳಗೆ ವೀರಶೈವ ಮತೀಯರಾರೂ ಇದುವರೆಗೆ ಸೇರಿಲ್ಲ ಹಾಗೂ ಸಮ್ಮತಿಸಿದಂತೆಯೂ ಇಲ್ಲವೆಂಬುದು, ಈ ವಿವಾದದೊಳಗಣ ಒಂದು ವಿಶೇಷ ಸಂಗತಿ; ಅಥವಾ ಗುಟ್ಟು.

---

ಟಿ:— ೧ 'ಶರಣಸಾಹಿತ್ಯ, ಸಂಪುಟ ೨ ಪುಟ ೩೦೬ ರಲ್ಲಿರುವ 'ಹರಿಹರ-ರಾಘವಾಂಕರ ಕಾಲವಿಚಾರ' ವೆಂಬ ಲೇಖವನ್ನು ನೋಡಿ.

೨ ಅದೇ ಪತ್ರಿಕೆ, ಪುಟ ೩೩೫.

ಇನಿತಲ್ಲದೆ ಪಂಪಾಶತಕವನ್ನೂ ರಚಿಸಿದಾಗ ಹರಿಹರನು ಬ್ರಾಹ್ಮ[೩]ಣನಾಗಿದ್ದನೆಂದು, ಸದರಿ ಗೋವಿಂದ ಪೈಗಳವರ ಮತ್ತೊಂದು ಅತಿ ನವೀನಾಭಿಪ್ರಾಯ ಹೊರಟಿದೆ. ಇದನ್ನವರು ತಮಗೆ ತಿಳಿವ ಕಾರಣ ಗಳಿಂದ ವಿವರಿಸಿದ್ದಾರೆ. ಇದೂ ಈ ನಮ್ಮ ಲೇಖಕ್ಕೆ ಆಕ್ಷೇಪವಾಗು ತ್ತೆಯಾದ ಕಾರಣ, ಅದನ್ನು ಈ ಲೇಖದ ಅಂತ್ಯಭಾಗದಲ್ಲಿ ತೋರಿಸಿ ಕೊಟ್ಟು ಉತ್ತರಿಸಲಾಗುವುದು.

## ಪಂಪಾಶತಕಕ್ಕೂ ಮೊದಲು ರಕ್ಷಾಶತಕವು.

ಹರಿಹರದೇವ ಕವಿಯು ಪಂಪಾಶತಕಕ್ಕಿಂತ ಮೊದಲು ರಕ್ಷಾ ಶತಕವನ್ನು ರಚಿಸಿದನೆಂದು, ಈ ಶತಕದಲ್ಲಿಯ ವಿಷಯ ನಿರೂಪಣೆಯಿಂದ ಗೊತ್ತಾಗುತ್ತದಲ್ಲದೆ, ಅವನ ಗ್ರಂಥಗಳಲ್ಲಿ ರಕ್ಷಾಶತಕವೇ ಮೊದಲನೆಯ ದೆಂದು ನಿಶ್ಚಯವಾಗಿರುತ್ತದೆ.

ರಕ್ಷಾಶತಕದಲ್ಲಿ ಹರಿಹರನು ಈ ರೀತಿ ಹೇಳುತ್ತಾನೆ.

"ಅವಿಚಾರಂ ಮಿಕ್ಕುಲಾಭಂ ಬಡೆವತಿ ಭರದಿಂ ಸುತ್ತಿ ದೇಶಂಗ
ಳೊಳ್, ಪಿಂ-।
ದೆ ವಿತಾನ ಪ್ರಾಂತದೊಳ್ ತಿಟ್ಟನೆ ತಿರುಗಿ ಮೊದಲ್ಗೆಟ್ಟು ಬೆಂಬಿರ್ದು
ದುಃಖ. ॥
ವ್ಯವಹಾರಕ್ಕಳ್ಕಿ ನಿಮ್ಮೀಚರಣ ಯುಗಳಮಂ ಪೊರ್ದಿದೆಂ ಭಕ್ತ
ವೃಂದೋ- ।
ತ್ಸವ ಕಲ್ಪೋರ್ವೀಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪು
ದೆನ್ನಂ ॥೧೯॥
ಅವನೆಂತಾರಾದೊಡಂ ಪಲ್ಗಿರಿದು ಬಿರಿದು ಬಾಯಿಂದೆ ದೈನ್ಯಾಕ್ಷರಂ ಸಂ-।
ಭವಿಸುತ್ತೇನಂ ಬೆಸಂ ದೇವನೆ ಕರುಣಿಪುದೆಂದಲ್ಲಿ ಮರ್ತ್ಯರ್ಗೆ ಸಾವು- ॥
ತ್ತವೆ ಪುಟ್ಟುತ್ತಿರ್ಪ ಸೇವಾನರಕ ನಿಧಿಯ ನೀಸಾಡಿ ಮದ್ಭಾಗ್ಯದಿಂ ನಿಂ-।
ಮವನಾದೆಂ ದೇವ ಪಂಪಾ . ॥೨೦॥

ಕವಿಯು ಮೊದಲು ತಾನು ಲಾಭವನ್ನು ಪಡೆವುದಕ್ಕಾಗಿ ದೇಶ ದೇಶಗಳನ್ನೆಲ್ಲ ಸುತ್ತಿ, ಆ ಆ ಪ್ರಾಂತಗಳಲ್ಲಿ ತಿಟ್ಟನೆ ತಿರುಗಿ, ಸಾಕಾಗಿ

ಟಿ:— ೩ ಅದೇ ಪತ್ರಿಕೆಯ ಪುಟ ೩೨೩.

ಆ ದುಃಖ ವ್ಯವಹಾರಕ್ಕೆ ಅಳ್ಕಿ ವಿರೂಪಾಕ್ಷನತ್ತ ಬಂದೆನೆಂದೂ, ಮತ್ತು ಇದರ ಮುಂದೆ—"ದೈನ್ಯಾಕ್ಷರಂ ಸಂಭವಿಸುತ್ತ ಏನಂ ಬೆಸಂ [ಏನಪ್ಪಣೆ] ದೇವನೆ ಕರುಣಿಪುದು!" ಎಂಬ ಮಾತಿನಿಂದ ಕವಿಯು ಒಬ್ಬ ಅರಸನ ಬಳಿ ಅಧಿಕಾರಿಯಾಗಿದ್ದು, ಆ ಸೇವಾನರಕನಿಧಿಯನೀಸಾಡಿ ಪೂರ್ವ ಭಾಗ್ಯದಿಂದೀಗ ದೇವಾ! ನಿಮ್ಮವನಾದೆನೆಂದೂ ಹೇಳುತ್ತಿರುವಾಗ, ತನ್ನ ಹಿಂದಣ ಆ ದೇಶಪರ್ಯಟನ, ಅದರ ಉದ್ದೇಶ, ಆ ರಾಜಸೇವೆಯಲ್ಲಿರುವ ದುಃಖಾತಿರೇಕ ಇವುಗಳನ್ನು ಈ ಶತಕದಲ್ಲಿ ಮಾತ್ರ ನೆನೆನೆನೆದು ಒಳ್ಳೆ ವಿವರ ವಿವರವಾಗಿ ಕೊಂಚದರಲ್ಲಿ ಹೇಳಿಹುದನ್ನು ನೋಡಿದರೆ ನರ ಸಿಂಹಬಲ್ಲಾಳನ ರಾಜಧಾನಿಯಾದ ಹಳೇ ಬೀಡನ್ನು ಬಿಟ್ಟ ಹೊಸತ ರಲ್ಲಿಯೆ ಈ ಶತಕವನ್ನು ರಚಿಸಿದನು ಇಷ್ಟೆಅಲ್ಲ—

ಅದನಿನ್ನೇನೆಂಬೆನಾಹಾ ಗುರುತರಸುಖಮಂ ತುಂಗಭದ್ರಾನ ದೀತೀ-।
ರದೊಳಿರ್ದುತ್ತುಂಗಹಸ್ತಂ ಮುಕುಳಿತನಯನಂ ಭೂತಿಸರ್ವಾಂಗ ನಾಗಿ-॥
ರ್ದ್ದ ದಯಾಂಭೋರಾಶಿ ಗಂಗಾಧರ ಪುರಹರ ಸರ್ವಜ್ಞನೆಂದು ಬ್ಬುವಾ ಸೌ-।
ಖ್ಯದಪೆರ್ಚಂ ಕೊಟ್ಟು ಪಂಪಾ ॥೬೨॥

ಪದ್ಯಾರಂಭದಲ್ಲಿ, ತುಂಗಭದ್ರೆಗೆ ಸಾಮೀಪ್ಯಬೋಧಕವಾದ-"ಇದ ನಿನ್ನೇನೆಂಬೆನಾಹಾ" ಎಂಬ ಪದವನ್ನಿಡದೆ, ದೂರ ಸಂಬಂಧಬೋಧಕ ವಾದ "ಅದನಿನ್ನೇನೆಂಬೆ" ನೆಂದು ಆರಂಭಿಸಿರುವುದರಿಂದ, ಮತ್ತು "ಸರ್ವಜ್ಞನೆಂದುಬ್ಬುವಾ ಸೌಖ್ಯದ ಪೆರ್ಚಂಕೊಟ್ಟು"—ಎನ್ನುವಲ್ಲಿ, ಹಂಪೆಗೆ ತಾನಿನ್ನೂ ದೂರವಲ್ಲಿರುವ ಪ್ರಯುಕ್ತ, ತನ್ನಾ ಬಯಕೆಯು ಹಂಪೆಯನ್ನು ಮುಟ್ಟದ ಹೊರತು, ವರ್ತಮಾನದಲ್ಲಿ ದೊರೆಯಲಾರದೆಂದು ತಿಳಿದೇ, 'ಉಬ್ಬುವ' ಎಂಬ ಪದದಲ್ಲಿ ಭವಿಷ್ಯದರ್ಥಪ್ರತ್ಯಯವಾದ ಕನ್ನಡ 'ವ' ಪ್ರತ್ಯಯವನ್ನಿಟ್ಟಿರುವುದರಿಂದಲೂ, ರಕ್ಷಾಶತಕವನ್ನು ರಚಿಸಿದಂದು ಹರಿ ಹರನಿನ್ನೂ ಹಂಪೆಯನ್ನು ಮಾತ್ರ ಮುಟ್ಟಿರಲಿಲ್ಲವೆಂದು ಹೇಳಬೇಕಾ ಗುತ್ತದೆ. ಇದೆಂತಾದರೂ ಆಗಲಿ. ಇನ್ನು ಹೆಣವನ್ನು ರುದ್ರಭೂಮಿಗೆ ತಂದು ಸುಡುವುದನ್ನು ಕರುಣಾರಸಪೂರ್ಣವಾಗಿ ವರ್ಣಿಸುವ—

ದೇವಾ! ನಾನೇವೆನೆಂದಿಂತಳುತಮುಬಲೆ ತಾಂಪೋಗೆ, ಪಿಂತಿಂ
ಜನಂಗಳ್
ಸಾವೀತಂಗಾಯ್ತೆನುತ್ತುಂ ಮರುಗುತಿರೆ, ತನೂಜಾಳಿಯುಂ
ಬಂಧುವರ್ಗಂ॥
ಭಾವಂ ಗೂಡುತ್ತೆ ಶೋಕಂ ಮುಸುಕಿ, ನಡೆವುತಾ ಕಾಷ್ಠದೊಳ್
ಕಷ್ಟರೂಪಿಂ।
ಬೇವಲ್ಲಿಂ ಮುನ್ನ ಪಂಪಾ ॥೪೧॥

ಈ ಪದ್ಯದಲ್ಲಿ "ಕಾಷ್ಠದೊಳ್ ಕಷ್ಟರೂಪಿಂ ಬೇವಲ್ಲಿಂ ಮುನ್ನ" ಎಂಬುದಾಗಿನ್ನೂ ಶವಕ್ಕೆ ದಹನ ಕ್ರಿಯೆಯನ್ನು ಹೇಳುತ್ತಿರುವುದರಿಂದ, ಈ ಶತಕವನ್ನು ಒರೆವಾಗ ಹರಿಹರನಿನ್ನೂ ಬ್ರಾಹ್ಮಣನಾಗಿಯೆ ಇದ್ದ ನಾದರೂ ಇದೇ ಶತಕದಲ್ಲಿ ಮುಂದೆ—

ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ
ದುರ್ವಲ್ಲಿಯಂ ಕೀ-।
ಳ್ವುದು ನಿತ್ಯ ಶ್ರೀಗುರು ಶ್ರೀಪದಸರಸಿಜಮಂ ತೋರ್ಪುದಾಹಾ!
ಬಳಿಕ್ಕ-।
ಕ್ಕದು 'ಲಿಂಗಾರಾಧನಂ' ಮಾಡಿಪುದು 'ಶರಣಸಾಂಗತ್ಯ'
ವಾಸಂಗವಂ ಪಿಂ।
ಗದವೋಲ್ ನೀಂ ಮಾಡಿ ಪಂಪಾಪುರದರಸ.......... ॥೫೮॥

[ಇದರಲ್ಲಿರುವ ಧಾತುಗಳೆಲ್ಲವೂ ಭವಿಷ್ಯದರ್ಥಪ್ರತ್ಯಯವುಳ್ಳವುಗಳಾಗಿವೆ.]

ಈ ಪದ್ಯದಲ್ಲಿ ಶರಣಸಾಂಗತ್ಯವು ತನಗೆ ತಪ್ಪದಂತಿರಬೇಕೆಂದು ಕವಿಯು ಸಕಾರಣವಾಗಿ ಕೋರಿದ್ದಾನೆ. ಈ ಶರಣ ಶಬ್ದವು ವೀರಶೈವ ಬೋಧಕವಾದ ಪಾರಿಭಾಷಿಕ ಶಬ್ದವು. ಜೈನರು ತಮ್ಮ ಮತ ಪ್ರವಿಷ್ಟರಿಗೆ ಹೇಗೆ 'ಭವ್ಯ' ರೆಂದು ಕರೆಯುತ್ತಾರೊ, ಮತ್ತು ಅದು ಅನ್ಯ ಬೋಧಕವಲ್ಲವೋ, ಹಾಗೆಯೇ 'ಶರಣ' ಶಬ್ದವು ವೀರಶೈವರ ಭಾವ ಭರಿತವಾದ ಪಾರಿಭಾಷಿಕ ಶಬ್ದವಾಗಿ ಸ್ವತಂತ್ರವೂ ಆಗಿದೆ. ಒಟ್ಟು ಶರಣ ಶಬ್ದವೆಲ್ಲಿರುತ್ತದೊ ಅಲ್ಲಿ ಲಿಂಗವಂತನೆಂಬ ಅರ್ಥವಲ್ಲದೆ ಬೇರೆಯಲ್ಲ. ಶರಣಸಾಂಗತ್ಯವೆಂದರೆ ಶರಣರೊಡನೆ ಇರುವಿಕೆ— ಶರಣರ ಸಹವಾಸ. ಈ ಸಹವಾಸವು ಸಂಸಾರ ಸಾಗರದಿಂದ ದಾಂಟಿಸಿ, ದುರಾ

ಚಾರ ದುರ್ವಲ್ಲಿಯನ್ನು ನಿವಾಂಟಿಸಿ, ನಿತ್ಯನಾದ ಶ್ರೀಗುರುವಿನ ಪಾದ ಪದ್ಮವನ್ನು ತೋರಿಸುವುದೆಂತಲೂ, ಬಳಿಕ ಅದು 'ಲಿಂಗಾರೂಢನಂ' ಎಂದರೆ ಲಿಂಗಧಾರಿಯನ್ನಾಗಿ ಮಾಡಿಸುವುದೆಂತಲೂ ಬಗೆದುಂಬಿ ಭಾವಿಸಿ ಬಯಸಿ ಬಣ್ಣಿಸಿದ್ದಾನೆ. ಈ ಪದ್ಯದಿಂದ ಕವಿಯಿನ್ನೂ ಲಿಂಗಧಾರಿ ಯಾಗಿಲ್ಲವೆಂದೂ, ಲಿಂಗವಂತನಾಗಲು ಅತ್ಯುತ್ಕಂಠಿತನಾಗಿದ್ದನೆಂದೂ ತಿಳಿಯುತ್ತದೆ. ಇನ್ನೂ ಮುಂದೆ—

ಗುರುವಂ ನಂಬಿರ್ದು ಮತ್ತಾ ಗುರುಕರುಣದ ಪಂಚಾಕ್ಷರೀ
ಮಂತ್ರಮಂ ತಾ-।
ಳ್ದು ರಹಸ್ಯಂ ಭಕ್ತಿಯಿಂದಂ ಜಪವನೆಣಿಸಿ ಗುರ್ವಾಜ್ಞೆಯಂ
ಮಿಾರದತ್ಯಾ-॥
ದರದಿಂದಂ ನೆತ್ತಿಯೊಳ್ ಪೊತ್ತನುಪಮಸುಖದಿಂ ಬಾಳ್ವ
ಭೃತ್ಯತ್ವಮಂ ಸ-।
ದ್ಗುರುವೇ ನೀವಿತ್ತು ಪಂಪಾ. . . ॥೭೫॥

ಇಂತು ವೀರಶೈವನಾಗುವ, ಆದ ತರುವಾಯ ಆ ವಿಧಿಯಂತೆ ಅನುಷ್ಠಿಸುವ ಮುಂದಿನ ಕಾರ್ಯ ಪ್ರಪಂಚವನ್ನು, ಮೊದಲೇ ತನ್ನ ಭಾವ ಪ್ರಪಂಚದಲ್ಲಿ ತಂದುಕೊಂಡು ಕೋರುತ್ತಿದ್ದನು. ಈ ಪದ್ಯದಲ್ಲಿ ಕವಿಯು ತನಗಿನ್ನೂ ಗುರುಕರುಣವಾಗಿಲ್ಲವೆಂದೆ ಒಪ್ಪಿದ್ದಾನೆ. ಮತ್ತು ಗುರು ಕರುಣವೆಂದರೆ "ಪಂಚಾಕ್ಷರೀಮಂತ್ರೋಪದೇಶ" ವೆಂಬುದನ್ನುಕವಿಯೇ— " ಗುರುಕರುಣದ ಪಂಚಾಕ್ಷರೀ ಮಂತ್ರಮಂ ತಾಳ್ದು ಎಂದಿರುವಲ್ಲಿ ಅರುಹಿದ್ದಾನೆ. ವೀರಶೈವರಲ್ಲಿ— ಗುರುಕಾರುಣ್ಯ-ವೆಂದು ಕರೆಯುತ್ತಿರು ವುದೂ ಇದಕ್ಕೆ ಸಾಕ್ಷಿಯಾಗಿದೆ. ಪಾರಮೇಶ್ವರಾಗಮ (೧ ಪಟಲ, ಪದ್ಯ ೭೧) ರಲ್ಲಿ ವೀರಶೈವ ದೀಕ್ಷೆಗೆ 'ಗುರುಕಾರುಣ್ಯ' ವೆಂಬ ಪರ್ಯಾಯನಾಮವು ಹೇಳಲ್ಪಟ್ಟಿದೆ. ಹರಿಹರ ಕವಿಯು ತನ್ನ 'ಮಹಾದೇವಿಯಕ್ಕನ ರಗಳೆಯು' ೨ನೇ ಸ್ಥಲದಲ್ಲಿ—'ಶೈವಾಗಮಾಚಾರ್ಯರಿಂ ಗುರುಕಾರುಣ್ಯಮಂ ಮಾಡಿಸಿ'- ಎಂದೂ ಹೇಳಿದ್ದಾನೆ.

ಇಂತು ರಕ್ಷಾಶತಕದಲ್ಲಿ ಕವಿಯು ತನಗಿನ್ನೂ ಗುರುಕರಣವಾಗಿ ಲ್ಲವೆಂದು ಒಪ್ಪುತ್ತಿರುವುದರಿಂದ, ಮುಂದಾಗಲೆ ಪಂಪಾಶತಕದ ೭೨ ನೆ ಪದ್ಯದಲ್ಲಿ—'ಭರದಿಂ ಲಿಂಗಾರ್ಚನಂ ಮಾಡದ ಶಿವಕುಲವುಂಟೇ ? ಶಿವಾ

ಚಾರಮುಂ ಸದ್ಗುರುವೆನ್ನಂ ಪೇಳ್ದಂ— ಎನ್ನುತ್ತಿರುವುದರಿಂದ, ಮತ್ತು ಅದೇ ಶತಕದ ೬೮ ನೆ ಪದ್ಯದಲ್ಲಿ— ಶಿವಾಚಾರಮಲ್ಲದೆ ಬೇರಿಲ್ಲದು ತಾನೆ ವಾಂಛಿತಕರಂ ನಂಬು,+ಆಗಳುಂ ಸಾರ್ದು, ನೀಂ ಪದಪಿಂ ಮಾನವ ಮಾಡು ಲೇಸಿದು ಶಿವಾಚಾರಂ ವಿರೂಪಾಕ್ಷನಾ–ಎಂದಿರುವಲ್ಲಿ, ತಾನೆ ಎಂದರೆ ಬೇಡಿಸಿಕೊಳ್ಳದೆ ವಾಂಛಿತಕರವಾದುದು ಶಿವಾಚಾರವಲ್ಲದೆ ಬೇರಿಲ್ಲ; ಅಯ್ಯಾ ಮಾನವ! ಇದನ್ನು ನಂಬು ಮತ್ತು ಇದನ್ನು ಸಾರ್ದು-ಹೊಂದಿ [ಲಿಂಗವಂತನಾಗೆಂದರ್ಥ.] ಆಚರಿಸು; ಏಕೆಂದರೆ ಇದು ಲೇಸಾದುದು. ಎಂದು ಮುಂತಾಗಿ ಪರರಿಗೂ ಲಿಂಗವಂತನಾಗೆಂದು ಉಪದೇಶಿಸಿರುವುದರಿಂದಲೂ, ಪಂಪಾಶತಕವನ್ನು ರಚಿಸಿದಂದು ಮಾತ್ರ, ಹರಿಹರನು ಲಿಂಗವಂತನಾಗಿದ್ದನೆನ್ನಲು— ಶಿವಾಚಾರಮುಂ ಸದ್ಗುರುವೆನ್ನಂ ಪೇಳ್ದಂ- ಇತ್ಯಾದಿ ವಾಕ್ಯಗಳಲ್ಲಿ ಸಾಕಷ್ಟು ಸಲಹೆಯಾಗಿ, ನಮ್ಮ ಗೋವಿಂದ ಪೈಗಳವರ ಅಭಿಪ್ರಾಯವು ನೆರಪಿಲ್ಲದೆ ತನ್ನಷ್ಟಕ್ಕೆ ಇರವನ್ನು ಕಳೆದುಕೊಳ್ಳುತ್ತದೆ.

ಮುಂದೆ ರಕ್ಷಾಶತಕದ ಮತ್ತೊಂದು ಪದ್ಯದಲ್ಲಿಃ—

ಎಸೆವೀ ಪಂಚಾಕ್ಷರೀ ಮಂತ್ರಮೆ ಗುರುತರಮಂತ್ರಂ, ವಿಶುದ್ಧಾಂಗ ಲೇಪಂ।
ಭಸಿತಂ, ರುದ್ರಾಕ್ಷಮೇ ಭೂಷಣತತಿ, ಪರಮಸ್ವಾಮಿ ನಿಂಪೂಜೆ ಯಾನಂ-॥
ದಸಮೇತಂ ಭಕ್ತನೇಸತ್ಕುಲಜನೆನಿಪಿದಂ ನಂಬಿ ಮತ್ತೇನುವಂ ಭಾ- ।
ವಿಸದಿರ್ಪಂತಿತ್ತು ಪಂಪಾ ............ರಕ್ಷಿಪ್ಪುದೆನ್ನಂ ॥೭೭॥

ಪಂಚಾಕ್ಷರೀ ಮಂತ್ರ, ಭಸಿತ, ರುದ್ರಾಕ್ಷಿ, ಶಿವಪೂಜೆ ಇವು ಸಮೇತವಾಗಿಯುಳ್ಳ ಭಕ್ತನೇ ಸತ್ಕುಲಜನೆನ್ನುವಲ್ಲಿ ಹರಿಹರನು ವರ್ಣಾಶ್ರಮಗಳನ್ನು ತೂರಿ, ಭಕ್ತನು [ವೀರಶೈವನು] ಅತಿವರ್ಣಾಶ್ರಮಿಯಾಗಿರುವನೆಂಬ ಲಿಂಗವಂತ ತತ್ವವನ್ನು ಸಾರಿದ್ದಾನೆ; ಮತ್ತು ಇದನ್ನೆ ತಾನು ಎರಡನೆಣಿಸದಂತೆ ಭಾವಿಸಿರಲು ಕರುಣಿಸಬೇಕಾಗಿ ಬೇಡಿದ್ದಾನೆ. ಸಾಮಾನ್ಯವಾಗಿ [ಸ್ವೇಷ್ಟದೇವತಾಂ] "ಭಜತೀತಿ ಭಕ್ತ:" ಎಂದು ಸರ್ವಭಜಕರಿಗೂ ಅರ್ಥವಿದೆ. ಆದರೂ 'ಭಾವುಕಂ ಭವಿಕಂ ಭವ್ಯಂ' ಎಂಬ ಪ್ರಸಿದ್ಧಾರ್ಥದ

ಭವ್ಯಶಬ್ದವು, ಹಾಗೂ 'ಶರಣಂ ಗೃಹ ರಕ್ಷಿತ್ರೋಃ' ಎಂಬ ದ್ವಂದ್ವಾರ್ಥವುಳ್ಳ ಶರಣ ಶಬ್ದವೂ, ಮತಸಂಬಂಧನಾದ ಪಾರಿಭಾಷಿಕಾರ್ಥದಲ್ಲಿ ಮಾತ್ರ ಕ್ರಮವಾಗಿ ಹೇಗೆ ಜೈನ, ವೀರಶೈವ ಬೋಧಕಗಳೊ, ಹಾಗೆ ಭಕ್ತ ಶಬ್ದವೂ ಪಾರಿಭಾಷಿಕ ರೀತ್ಯಾ ವೀರಶೈವಾರ್ಥವುಳ್ಳದ್ದು. ಉದಾಃ— ಪಾರಮೇಶ್ವರಾಗಮ [ *IX* ಪಟಲ, ಪದ್ಯ– ೭೭] ದಲ್ಲಿ ವೀರಶೈವೇತರರಿಗೆ 'ಅಭಕ್ತ' ಎಂದರೆ ಭಕ್ತನಲ್ಲದವನು ಎಂಬ ಪ್ರಯೋಗವಿದೆ. ಹರಿಹರನಾದರೂ 'ಮಹಾದೇವಿಯಕ್ಕನರಗಳೆ'ಯ ೫೧ನೆ ಪುಟದಲ್ಲಿಯೇ ಶರಣ, ಮಾಹೇಶ್ವರ, ಭಕ್ತ, ಶಿವಭಕ್ತ ಈ ಪದಗಳನ್ನೆಲ್ಲಾ, ಒಂದೇ ಅರ್ಥವುಳ್ಳ ಪರ್ಯಾಯ ಶಬ್ದಗಳನ್ನಾಗಿ ತಿಳಿದು, ಬೇರೆ ಬೇರೆ ವಾಕ್ಯಗಳಲ್ಲಿ ಪ್ರಯೋಗಿಸಿರುವನು; ಇದರಂತೆ ಲಿಂಗವಂತರಾದ ಬಸವರಾಜದೇವ ಮೊದಲಾದವರ ರಗಳೆಗಳಲ್ಲಿಯೂ ಆಗಿಂದಾಗ್ಗೆ ಬರುತ್ತದೆ. ಒಟ್ಟು ಸಾಮಾನ್ಯವಾಗಿ ಲಿಂಗವಂತರಲ್ಲದ, ಚೋಳದೇಶದ ಶಿವಗಣದ ರಗಳೆಗಳಲ್ಲಿ ಭಕ್ತ ಅಥವಾ ಶಿವಭಕ್ತ-ಎಂದು ಬಂದರೆ ಮಾತ್ರ ವೀರಶೈವಾರ್ಥವಾಗುವುದಿಲ್ಲ. ಇನ್ನು ಶೈವ, ವೀರಶೈವ ಪರವಲ್ಲದ ತನ್ನ ಗ್ರಂಥದಲ್ಲಿ, ಭಕ್ತ ಅಥವಾ ಶಿವಭಕ್ತ ಶಬ್ದವನ್ನು ಹರಿಹರನು ಪ್ರಯೋಗಿಸಿದ್ದರೆ, ಲಿಂಗವಂತನೆಂಬ ಅರ್ಥವೇ ಆಗುತ್ತದೆ. ಉದಾಹರಣೆಗೆಂದರೆ—'ಗಿರಿಜಾಕಲ್ಯಾಣಕಾವ್ಯವು' ಚೋಳ ಶೈವರದೂ ಅಲ್ಲ, ಲಿಂಗವಂತರದೂ ಅಲ್ಲ. ಹೀಗಿದ್ದೂ ಇದರಲ್ಲಿ ಕವಿಯು ಕೇವಲ ಭಕ್ತ, ಮತ್ತು, ಶಿವಭಕ್ತ, ಶರಣಶಬ್ದಗಳನ್ನು ಪ್ರಯೋಗಿಸಿರುವದು ವೀರಶೈವ ಕುಲಕ್ಕೆ ಸಾಮಾನ್ಯವಾಗಿದೆ. ಏಕೆಂದರೆ ಅಂದಿನ ವೀರಶೈವೇತರಗಳಾದ ಅದಾವ ಕವಿ ಕಾವ್ಯಗಳಲ್ಲಿಯೂ ಇಂತಹದೊಂದು ಪ್ರಯೋಗವಿಲ್ಲದಿರುವುದೇ ಸಾಕ್ಷಿಯಾಗುತ್ತಿದೆ.

## ರಕ್ಷಾಶತಕದಲ್ಲಿ ವೀರಶೈವಮತತತ್ವ.

ಹರಿಹರದೇವನು ಹಳೇಬೀಡು ರಾಜಧಾನಿಯನ್ನು ಬಿಟ್ಟು ಹೊಸತರಲ್ಲಿಯೆ ರಕ್ಷಾಶತಕವನ್ನು ರಚಿಸಿರುತ್ತಾನೆಂದು ಈ ಹಿಂದೆ ವಿವರಿಸಿದೆಯಷ್ಟೆ. ಮತ್ತು ಈ ಶತಕದಲ್ಲಿ ಕವಿಯು ಲಿಂಗವಂತನಾಗಲು ಹೊರಟಿರುವನೆಂಬುದೂ ವಾಚಕರಿಗೆ ಅರಿದ ಮಾತು. ಇದು ಕಾರಣ ಹರಿಹರನು

---

೫೧— ೪ ಚೆನ್ನಮಲ್ಲಿಕಾರ್ಜುನ ಹಾವೇರಿ ಇವರು ಅಲ್ಲಿಯ ಶಿವಲಿಂಗ ವಿಜಯ ಮುದ್ರಣಾಲಯದಿಂದ ಪ್ರಕಟಿಸಿದ ಪ್ರತಿ.

ಹಳೇಬೀಡಿನಲ್ಲಿರುವಂದೂ, ಅದಕ್ಕೆ ಮುಂಚೆಯೂ ವೀರಶೈವ ಮತದ ಮಾದರಚೆನ್ನಯ್ಯ, ಕೆಂಭಾವಿ ಭೋಗಣ್ಣ, ವೀರಶಂಕರದಾಸಿಮಯ್ಯ[೫] ಮೊದಲಾದ ಶರಣರ ವಚನಗಳನ್ನು, ಇಲ್ಲವೆ ಈ ಮತದ ಆಗಮ ಗ್ರಂಥಗಳನ್ನು ಚೆನ್ನಾಗಿ ಮನನ ಮಾಡಿದ್ದನೆಂಬುದು, ಈ ಮುಂದೆ ಉದಾಹರಿಸುವ ಅವನಾ ಪದ್ಯಗಳಿಂದಲೇ ವೇದ್ಯವಾಗುವುದು:—

(೧) ವೀರಶೈವ ಮತವು ಪಾಪದಂತೆ ಪುಣ್ಯವನ್ನೂ ಬಯಸುವುದಿಲ್ಲ. ಏಕಂದರೆ ಅದು ಕರ್ಮವಾಗುವುದರಿಂದ ಅದನ್ನು ಭೋಗಿಸಲು ಪುನರ್ಜನ್ಮವುಂಟಾಗಿ, ವೀರಶೈವನಾದವನಿಗೆ ಕೊನೆಯಲ್ಲಿ ಬಯಸದಲೆ ಸಹಜವಾಗಿ ಲಭಿಸುವ—ಲಿಂಗಾಂಗಸಾಮರಸ್ಯ ಅಥವಾ ಶಿವೈಕ್ಯತೆ ಎಂದರೆ 'ತಾದಾತ್ಮ್ಯ'ಕ್ಕೆ ಭಂಗಬಪ್ಪದು. ಅಂತೆಯೆ ಹರಿಹರನು ೮೭ ನೆ ಪದ್ಯದಲ್ಲಿ ಆ ಶ್ರೀ ವಿರೂಪಾಕ್ಷನನ್ನು—"ಪುಣ್ಯಪಾಪ ಪ್ರದೂರಂ" ಎಂದು ತುತಿಸಿದ್ದಾನೆ. ಸಾರಾಂಶವೆಂದರೆ— ಪುಣ್ಯದಿಂದ ಮೇಲೆ ಸ್ವರ್ಗಾದಿ ನಶ್ವರ ಸುಖವಲ್ಲದೆ ಶಿವೈಕ್ಯ ಪದ ಪ್ರಾಪ್ತಿಯಿಲ್ಲ. ಅಂತೇ ಶಿವನು ಪುಣ್ಯಕ್ಕೂ ದೂರನಾಗುವನು. ಇಲ್ಲೊಂದು ಪ್ರಮಾಣ:—

ವೀರಶೈವಮತಂ ಪ್ರಾಪ್ತಃ ಶಿವ ಏವ ನ ಸಂಶಯಃ ॥೪೨॥
ನ ತಸ್ಯಾಸ್ತಿಭಯಂ ಪಾಪಾತ್+ನಾಧಿಕ್ಯಂ ಪುಣ್ಯಕರ್ಮಣಃ ।
ಸ್ವಯಂ ಹಿ ಪುಣ್ಯಪಾಪಾನಾಂ ನಿರ್ಣೇತಾ ಚ ನಿಯಾಮಕಃ ॥೪೩॥
(ಪಾರಮೇಶ್ವರಾಗಮ, ಪಟಲ ೧)

ಮತ್ತು "ತಾನೆ, ತಾನಾಗಬೇಕು" ಎಂಬ ಶಿವಾದ್ವೈತ ಶಾಸ್ತ್ರ ರೀತ್ಯಾ ವೀರಶೈವನು ಇರುವಂದು ಶಿವನೆ ಆಗಿ, ಆ ಪುಣ್ಯ ಪಾಪಗಳ ನಿರ್ಣೇತೃವೂ ನಿಯಾಮಕನೂ ಆಗುತ್ತಾನೆ.

(೨) ಭಗವತ್ಪಾದರಾದ ಆದ್ಯ ಶ್ರೀ ಶಂಕರಾಚಾರ್ಯರವರ ಅದ್ವೈತ ಶಾಸ್ತ್ರದಲ್ಲಿ ತಲೆದೋರಿರುವ ಮಾಯಾವಾದದ ಭ್ರಾಂತಿಯನ್ನು, ವೀರಶೈವ [ಶಿವಾದ್ವೈತ] ಶಾಸ್ತ್ರ ರೀತ್ಯಾ ಆಚಾರ್ಯ ಹರಿಹರನು ಈ ಕೆಳಗಣ ಪದ್ಯಗಳಲ್ಲಿ ಆವೇಶಪೂರ್ವಕ ನಿರಸನಮಾಡಿದ್ದಾನೆ:—

---

ಟಿ:— ೫ 'ವೀರಶಂಕರದಾಸಿಮಯ್ಯನ ವಚನ' ವೆಂಬುದೊಂದು ಬಹು ದೊಡ್ಡದಿದ್ದು, 'ಪುರಾತನರ ವಚನಗಳು' ಎಂಬ ತಾಡಓಲೆಯ ಗ್ರಂಥದಲ್ಲಿ ದೊರೆತಿದೆ. ಅದನ್ನು ಇದೆ ಪತ್ರಿಕೆಯ ಮುಂದಿನ ಸಂಚಿಕೆಯಲ್ಲಿ ಕೊಡುವೆನು.

ಶಿವ ನಿಮ್ಮಿಂ ಪುಟ್ಟಲೇಮಾಯೆಗಡೆನಿಸಿದನಾಂ ಸ್ವೈರಿಸೆಂ ಪುಟ್ಟಿತೆಂಬೊಂ-।
ದವಿಚಾರಂ; ನಿಷ್ಕ್ರಿಯಾತ್ಮಪ್ರಭುತನಕೆ ಕರಂಹಾನಿ; ಶುದ್ಧಾತ್ಮನೊಳ್
ಶಂ- ॥
ಭುವಿನೊಳ್ ಸಮ್ಯಕ್ ಪರಾನಂದದಕೆನೆ ತಿರುಳೊಳ್ ನಿಮ್ಮೊಳೀ
ಭ್ರಾಂತಿ ಯೆಂಬೀ ।
ಶ್ರವಿಯಂ ತರ್ಕ್ಗೊತ್ತಿ, ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥೯೨॥

ಈ ಪದ್ಯವು ಪರಮತತ್ವ ಪೂರ್ಣವಾಗಿದ್ದರೂ, ಕಥನ ಕ್ರಮವು ಮಾತ್ರ ಸಂಪೂರ್ಣ ಸುಲಲಿತ, ಸುಂದರ, ಸುಬೋಧವಾಗಿರುವುದರಿಂದ ಅದನ್ನು ಮತ್ತೆ ವಿವರಣೆ ಮಾಡಿ ಕಥಿತಪದದೋಷಕ್ಕೀಡಾಗುವುದಿಲ್ಲ. ಇದನ್ನೇ ಕವಿಯು ಮತ್ತೆ ಮುಂದಿನ ಪದ್ಯದಲ್ಲಿ ವಿವರಿಸಿದ್ದಾನೆ:—

ಮೊದಲಿಂದಂ ಕೂರ್ಮರೋಗಂ, ಬಗೆಯೆ ಶಶವಿಷಾಣಂ, ವಿಯತ್ಪು
ಷ್ಪದಂತಿ ।
ಲ್ಲದುದೇ ಸತ್ಯಂ ಪ್ರಪಂಚಂ ಬಗೆದು ತಿಳಿಯೆ ನಿಷ್ಕಾಮ ನಿರ್ಮಾಯ
ನಿತ್ಯಾ ॥
ಭ್ಯುದಯಾನಂದೈಕ ತೇಜೋನಿಧಿ ನಿರುಪಮ ನಿರ್ಲೇಪ ನಿರ್ವಾಣ
ನೀನೆಂ ।
ಬುದನೇ ಸ್ಥಿತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
॥೯೩॥

೧ ವಿಯತ್ಪುಷ್ಪ, [ಕೇವಲ ಆಕಾಶದಲ್ಲಿ ಬಿಟ್ಟಹೂ] ೨ ಕೂರ್ಮರೋಗ, [ಆವೆಗೆಕಾಯಿಲೆ] ೩ ಶಶಿವಿಷಾಣ, [ ಮೊಲಕ್ಕೆ ಕೋಡು] ಇವು ಮೂರು ಇಲ್ಲವೆಂಬುದು ದಿಟವು, ಆದರೂ ಅಭಾವಗಳಾದ [ಇಲ್ಲದಿರುವ] ಅವುಗಳನ್ನೆಲ್ಲಾ ಸ್ವತಃ ಕಲ್ಪನೆಯಲ್ಲಿ ತಂದು [ಆರೋಪಿಸಿ] ಕೊಂಡು ಶಬ್ದಮಾತ್ರದಲ್ಲಿ ನಾವು ನಿರ್ದೇಶ ಮಾಡಿರುವುದು ಹೇಗೆ ಸಟೆಯೋ, ಹಾಗೆಯೆ ಸತ್ಯನಿತ್ಯ ಮತ್ತು ನಿಷ್ಕಾಮ ನಿರ್ಮಾಯ ಆನಂದ ನಿರ್ಲೇಪರೂಪಾದ ಎಂದರೆ ಶಿವಾಭಿನ್ನವಾದ ಈ ಪ್ರಪಂಚಕ್ಕೆ, ಅದರಲ್ಲಿ ತೋರದಿರುವ ಮಾಯೆಯಾವಾದವನ್ನು ಕಲ್ಪಿಸಿ [ಆರೋಪಿಸಿ]ರುವುದು ವ್ಯರ್ಥಶ್ರಮವಾಗಿರುವುದಲ್ಲದೆ ಭ್ರಾಂತಿಯು. [ಸತ್ಯಮಾತ್ರವಲ್ಲ.] ಸಾರಾಂಶವೆಂದರೆ ಜಗತ್ತು ಮಿಥ್ಯವಾಗಿರದೆ ಶಿವಾದ್ವೈತ ಶಾಸ್ತ್ರಪ್ರಕಾರವೆ ಸತ್ಯವಾದುದು. ಇದನ್ನೇ ತನ್ನ ಪಂಪಾಶತ

ಕದ ೯೩ನೆ ಪದ್ಯದಲ್ಲಿ—"ಜಗದೊಳಗೆಲ್ಲ ನೋಡುವೊಡೆ ಸತ್ಯವೆ ತೀವಿ ತುಳುಂಕುತಿರ್ಪುದೈ. ಬಗೆವೊಡೆ ಭಕ್ತನೊರ್ವನದರೊಳ್" ಎಂಬುದಾಗಿಲ್ಲಿ ಅನುಭವಪೂರ್ವಕ ನುಡಿದಿದ್ದಾನೆ--ಇದನ್ನು ಭಕ್ತನೇ ಬಲ್ಲನೆಂದು. ಮತ್ತು ಇದೆ ಶತಕದ ೬೬ ನೆ ಪದ್ಯದಲ್ಲಿ—'ಬಿಡು ಮಾಣ್ಮಾಣೆಲೆ ಬೊಮ್ಮವಾದಿ ಸಟೆಯುಂ ನೀಂ ನಂಬಿಗೋ " ಎಂದು ಉದ್ಘೋಷಿಸಿದ್ದಾನೆ. ಬೊಮ್ಮವಾದಿಯೆಂದರೆ ಬ್ರಹ್ಮವಾದಿಯೆಂದರ್ಥ. ದೇವರಿಗೆ ಬ್ರಹ್ಮವೆಂದು ನುಡಿಯುವವರು ವಿಶೇಷವಾಗಿ ವೇದಾಂತಿಗಳೇ ಎಂಬುದು—"ಬ್ರಹ್ಮೇತಿ ವೇದಾಂತಿನೋ" ಎಂಬ ಜಗತ್ಪ್ರಸಿದ್ಧವಾದ ವಾಕ್ಯದಿಂದಲೇ ಗೊತ್ತಾಗುತ್ತದೆ.

(೩) ೮೬ನೆ ಪದ್ಯದಲ್ಲಿ ಶಿವನನ್ನು "ಅಪರಿಚ್ಛಿನ್ನಂ" ಎಂದು ಬಣ್ಣಿಸಿದ್ದಾನೆ. ಜಗತ್ತು ಶಿವನಿಂದ ಪರಿಚ್ಛಿನ್ನವಾದಂತೆ ತೋರುತ್ತಿದ್ದರೂ, ಶಿವನು ಅದರಿಂದ ಅಪರಿಚ್ಛಿನ್ನನಾಗಿದ್ದಾನೆಂಬುದು ಲಿಂಗವಂತ ತತ್ವ.

## ಗಿರಿಜಾಕಲ್ಯಾಣಕ್ಕೂ ಮೊದಲು ಪಂಪಾಶತಕ.

ಇನ್ನು ಗಿರಿಜಾಕಲ್ಯಾಣಕಾವ್ಯಕ್ಕಿಂತ ಮೊದಲು ಪಂಪಾಶತಕದ ರಚನೆಯಾಯಿತೆನ್ನಲು ಒಂದು ಆಧಾರಃ—

ವಿನುತ ಬ್ರಹ್ಮಾಂಡಮಂ ಪುಟ್ಟಿಪ ಹರಹರ ಪಾಲಿಪ್ಪ ಸಾಮರ್ಥ್ಯದೊಂದೊಂ।
ದನುವಂ ಕಂಡಾಗಳಾರ್ಪಿಂದಜಹರಿಗಳನಾಂ ಬಂಣಿಸುತ್ತಿರ್ಪೆನೇಭೋಂ॥
ಕನೆ ನಿಮ್ಮೊಂದಾಜ್ಞೆಯೆನ್ನೀ ಮನಕೆ ಮುಸಕದಿಂ ದಂದು ತೋರಲ್ಕೆ, ಪೋ! ನ।
ಚ್ಚಿನ ವಾಕ್ಯಂ ಮುದ್ರಿಸಲ್ ಸುಮ್ಮನಿರುತಿ ಮರವಟ್ಟಿಂ ವಿರೂಪಾಕ್ಷಲಿಂಗಾ॥

(ಪಂಪಾಶತಕ ಪದ್ಯ ೨೨.)

ಈ ಪದ್ಯದ ವಿವರಣೆಃ— ಇದರ ಮೇಲಿರುವ ೨೧ನೆ ಪದ್ಯದಲ್ಲಿ ಕವಿಯು ತನ್ನ ಹಂಪೆಯಾಳ್ದನನ್ನು ವಿಧವಿಧದಿಂದ ಕರೆಯುತ್ತ—"ತತ್ವನಿಧಿ ಬಾರೆಲೆ ಬಾರೆಲೆ ಹಂಪೆಯಾಳ್ದನೇ" ಎಂದು ಪತಿಯು ಸಲುಗೆಯಿಂದ ಎಷ್ಟು ಬೇಡಿದರೂ ಅವನ ಸಾಕ್ಷಾತ್ಕಾರವಾಗದಿರಲು, ಆಗ

ಕವಿಯು ಮತ್ತೆ— ಎಲೆ ವಿರೂಪಾಕ್ಷಲಿಂಗವೆ! ನಿನ್ನ ಭಕ್ತನಾದ ನಾನು, ಈ ಬ್ರಹ್ಮಾಂಡವನ್ನು ಪುಟ್ಟಿಪ, ಪಾಲಿಪ ಸಾಮರ್ಥ್ಯವೊಂದುಳ್ಳ, ಈ ಅಜ, ಹರಿಗಳನ್ನೇನಾದರೂ ಬಣ್ಣಿಸಿರುವ ಪ್ರಯುಕ್ತ, ಇವನು (ಹರಿಹರನು) ಸ್ಥಿರಭಕ್ತನಲ್ಲವೆಂದು ಒಲಿಯದೆ ನೀನು ಉದಾಸೀನದಿಂದಿರಬಹುದು ಎನ್ನೋಣವೇ, ನಾನು ಅಂತಹ ಪುಟ್ಟಿಪ, ಪಾಲಿಪ ಕಿಂಚಿತ್ ಸಾಮರ್ಥ್ಯವನ್ನು ಪಡೆದಿರುವ ಅವರನ್ನು ಅದೆಂದೂ ಬಣ್ಣಿಸೆನು; ಬಣ್ಣಿಸಿಯೂ ಇಲ್ಲ. [ಲಿಂಗಾಂಗಿ ತತ್ವದ ಸತಿಪತಿಭಾವದ ಪತಿಭಕ್ತಿಯಲ್ಲಿ ವ್ಯಭಿಚಾರಿಯಾಗಿಲ್ಲವೆಂದು ಭಾವಾರ್ಥ.] ಹಾಗಾದರೆ ನನ್ನನ್ನೇಕೆ ನೀನು ಬಣ್ಣಿಸುತ್ತಿಲ್ಲವೆಂದು, ಎಲೆ ವಿರೂಪಾಕ್ಷನೆ ನೀ ಕೇಳಬಹುದು. ಆದರೆ ಎಲೆ ಸ್ವಾಮಿಯೆ! ಮುಸಕದಿಂ— ವಿಜೃಂಭಣೆಯಿಂದ [ಶಬ್ದರೂಪಿನಲ್ಲಿ ಪ್ರಕಟವಾಗಿಯೆಂದು ಭಾವ.] ನನ್ನ ಮನಕೆ ನಿಮ್ಮ ಆಣತಿ ದೊರೆತು, ಅದರಲ್ಲಿಯೂ ನಚ್ಚಿನ ವಾಕ್ಯವು ನನ್ನೀ ಮನದಲ್ಲಿ ಮುದ್ರಿಸಲೆಂಬ ಉದ್ದಿಶ್ಯವಾಗಿ, ಇದುವರೆಗೂ ಸುಮ್ಮನಿರುತ ಮರವಟ್ಟೆನು— ನಿಶ್ಚೇಷ್ಟಿತನಾದೆ. [ಆ ವ್ಯಾಪಾರದಲ್ಲಿ ತೊಡಗಿರುವುದಿಲ್ಲವೆಂದರ್ಥ.]

ಈ ಪದ್ಯದಿಂದ ಹರಿಹರದೇವ ಕವಿಯು ಇನ್ನೂ ಯಾವ ಕಾವ್ಯವನ್ನೂ ಬರೆದಿಲ್ಲವೆಂದೂ, ತನ್ನ ಸ್ವಾಮಿಯಾದ ಶ್ರೀವಿರೂಪಾಕ್ಷನಾಜ್ಞೆಯನ್ನು ಪಡೆದೇ ಆ ಎಲ್ಲ ಕಾವ್ಯ ಸೃಷ್ಟಿಗೆ ತೊಡಗಲು ನಿಂತಿರುವನೆಂದೂ ಈ ಪಂಪಾಶತಕದ ಪದ್ಯದಿಂದ ಸುಸ್ಪಷ್ಟವಾಗಿ ವ್ಯವಸ್ಥಿತವಾಗುತ್ತದೆ. ಇಂತಾದರೆ ಶ್ರೀವಿರೂಪಾಕ್ಷನಾಣತಿಯು ಸ್ವಪ್ನ ಇಲ್ಲವೆ ಸಾಕ್ಷಾತ್ಕಾರ ರೂಪಿನಲ್ಲಿ ಆಗಬೇಕು. ಇದನ್ನೀಗ ಆ ಕವಿವರನ ಮಾತಿನಿಂದಲೇ ನಿರ್ಧರಿಸೋಣ:—

---

ಟಿ:— ೬ ಹಾಗಾದರೆ ರಕ್ಷಾಶತಕವೇ ಮೊದಲನೆಯದೆಂದು ಹೇಳಿರುವ ಮಾತಿಗಿದು ಆಕ್ಷೇಪವಾಗುವದಿಲ್ಲವೆ? ಎನ್ನಬಹುದು. ಆದರೆ ಈ ರಕ್ಷಾಶತಕವು ವಿರೂಪಾಕ್ಷಸ್ವಾಮಿಯ ಚರಿತ್ರಾತ್ಮಕವಾದ ವರ್ಣನೆಯಲ್ಲ. ಅದೊಂದು— ಭವಿಯಾದ ತನ್ನನ್ನು ಭಕ್ತನನ್ನಾಗಿ ಮಾಡಿ ರಕ್ಷಿಸಬೇಕೆಂದು, ಆ ದೇವನಲ್ಲಿ ಮಾಡಿಕೊಂಡ, ಒಂದು ನಿವೇದನೆಯೆಂಬುದಿಷ್ಟು ಸ್ಪಷ್ಟವಿರುವುದರಿಂದ, ಹರಿಹರ ಕವಿಯು ಈ ಶತಕವನ್ನು ಶಿವಲೀಲೆಯ ವರ್ಣನಾತ್ಮಕ ಕಾವ್ಯವನ್ನಾಗಿ ಬರೆದಿಲ್ಲವೆಂದೂ, ನಾವೂ ಹಾಗೆಯೇ ಭಾವಿಸಬೇಕೆಂದೂ ಸಿದ್ಧವಾಗುತ್ತದೆ.

ಭಕ್ತಕುಲತಿಲಕನಾದ ಹರಿಹರ ಕವಿರಾಜನು ತನ್ನದೇ ಆದ 'ಭೃಂಗಿಯರಗಳೆ'ಯಲ್ಲಿ— ಭೃಂಗಿಯು ನಾಟ್ಯವಾಡುವಾಗ, ಶ್ರೀಶಿವನು ಆ ಆ ಶರಣರಿಗೊಲಿದ ಪರಿಯನ್ನು ಆ ನಾಟ್ಯದಲ್ಲಿ ಅಭಿನಯಿಸಿ ತೋರಿಸುತ್ತಿದ್ದನೆಂದು ಬಣ್ಣಿಸುವಂದು— "ಹಂಪೆಯ ಹರಿಹರಗೊಲಿದಪರಿಗಳಂ" ಅಭಿನಯಿಸಿದನೆಂದು, ಭಕ್ತಿಪ್ರವಾಹದ ಸೆಳೆತಕ್ಕೆ ಸಿಕ್ಕ ಕವಿಯು, ತಡೆಯಲು+ಅರದವನಾಗಿ ನುಡಿದೇ ಬಿಟ್ಟಿದ್ದಾನೆ.[೭] ಹಂಪೆಯಾಳ್ದನು ತನಗಾಗ ಪ್ರತ್ಯಕ್ಷವಾದಂದೇ 'ಗಿರಿಜಾಕಲ್ಯಾಣ ಮಹಾಕಾವ್ಯ'ವನ್ನು ರಚಿಸೆಂದು ಆಜ್ಞಾಪಿಸಿಹನು. ಅಂತೇ ಗಿರಿಜಾಕಲ್ಯಾಣ ಕಾವ್ಯದ ಕೊನೆಯಾಶ್ವಾಸದ ೧೧೩ನೆಯ ಪದ್ಯದಲ್ಲಿಯೂ:—

ಪಂಪಾಪುರದಧಿಪತಿ ವಿರೂಪಾಕ್ಷನಿತ್ತಾಜ್ಞೆಯಿಂದಂ।
ಹರಿದೇವಂ ಭಕ್ತಿಯಿಂದಂ ಗುರುಕರುಣದಿನುತ್ಸಾಹದಿಂ ಮೆಚ್ಚಿ ಪೇಳ್ದೀ।
ಗಿರಿಜಾಕಲ್ಯಾಣಕಾವ್ಯಂ ರವಿ ಶಶಿ ರಸೆಗಳ್ ನಿಲ್ವಿನಂ ನಿಲ್ಕೆ ಸಂತಂ॥

ಎಂದು ಕಂಠೋಕ್ತವಾಗಿ ಸ್ವಯಂ ಪಾಡಿರುವನು.

ರಕ್ಷಾಶತಕದಲ್ಲಿ ಇನ್ನೂ ಲಿಂಗಧಾರಣಕ್ಕಾಗಿಯೇ ಹೊರಟಿದ್ದ ಹರಿಹರನು, ಹಂಪೆಯನ್ನು ಮುಟ್ಟಿದೊಡನೆಯೆ ವೀರಶೈವ ದೀಕ್ಷೆಯನ್ನು ಕೈಕೊಂಡಾಗಲೆ, ಆ ನೂತನ ಮತಾಭಿಮಾನದಿಂದ ಪೂರಿತನಾದ, ಪ್ರೇರಿತನಾದ ಕವಿಯು—'ಶಿವನಲ್ಲದೆ ಮತ್ತೊಂದು ದೈವವಿಲ್ಲ.[೮] ಶಿವಭಕ್ತರಿಗಿಂತ ಶ್ರೇಷ್ಠರಿಲ್ಲ. ವೆಂಬ ಈ ವೀರಶೈವ ಮತದ ಸಾರಾಂಶವನ್ನು ಒಳ್ಳೆ ಧಾರ್ಷ್ಟ್ಯದಿಂದ ಉದ್ಘೋಷಿಸುವುದಕ್ಕಾಗಿಯೆ ಈ ಪಂಪಾಶತಕವನ್ನು ರಚಿಸಿದನು. ಅಂತೇ ತನ್ನ ಪಂಪಾಶತಕವನ್ನುಃ—

...ಶರಣರ್ ಮಿಗೆ ಬಂಣಿಸೆ ಪೇಳ್ದನಾಹ! ಹಂ-।
ಪೆಯ ಹರಿದೇವನೀ ಶತಕಮುಂ ಸಕಲೇಷ್ಟ ಫಲಪ್ರದಾತೃವಂ ॥೧೦೦॥

---

ಟಿ:- ೭ ಶಿವಾನುಭವ ೧೪ ಹರಿಹರನ ರಗಳೆಗಳು ಭಾಗ ೭; ಪುಟ ೩೮

ಟಿ:- ೮ ಇದೇ ಈ ಪಂಪಾಶತಕದಲ್ಲಿರುವ ವಿಷಯಸ್ವರೂಪ. ಇದನ್ನು ಲೇಖ ವಿಸ್ತಾರದ ಆಕ್ಷೇಪಣೆಯಿಂದ ವಿವರಿಸಿಲ್ಲ ಶತಕವನ್ನು ಪಠಿಸಿದೊಡನೆಯೇ ಆ ವಿಷಯ ಸ್ವರೂಪು ಥಟ್ಟನೇ ಅರಿಯುವುದರಿಂದಲೂ ಅದರ ವಿವರಣೆಯಲ್ಲಿ ಅನವಶ್ಯಕವೆಂದೇ ಬಿಡಲ್ಪಟ್ಟಿದೆ.

ಎಂದು ಕೊನೆಯ ಪದ್ಯದಲ್ಲಿ ಸಾರಿದ್ದಾನೆ. ಒಟ್ಟು ಹರಿಹರ ಕವಿಯು ಮೊದಲು ರಚಿಸಿದುದು ರಕ್ಷಾಶತಕ, ಎರಡನೆಯದು ಪಂಪಾಶತಕ, ತರುವಾಯ ಗಿರಿಜಾಕಲ್ಯಾಣ ಮಹಾಕಾವ್ಯವೆಂದು ಇದುವರೆಗಿನ ವಿಚಾರದಿಂದ ಸಿದ್ಧವಾಗುತ್ತದೆ. ಮತ್ತು ರಕ್ಷಾಶತಕವೊಂದನ್ನು ಬಿಟ್ಟರೆ, ಇನ್ನುಳಿದ ಹರಿಹರನ ಕಾವ್ಯಗಳೆಲ್ಲವೂ ಲಿಂಗವಂತನಾದ ಬಳಿಕ ಹೊರಹೊಮ್ಮಿದವೆನ್ನುವಲ್ಲಿ ಅದಾವ ಸಂದೇಹವೂ ಇಲ್ಲ. ಇನ್ನು ಗಿರಿಜಾಕಲ್ಯಾಣಕಾವ್ಯದಲ್ಲಿ ಕಾಣುವ ಹರಿಹರನ ಲಿಂಗವಂತಿಕೆಯನ್ನು ವಿವರಿಸಲಾಗುವದು.

## ಗಿರಿಜಾಕಲ್ಯಾಣದಲ್ಲಿ ಕವಿಯ ಲಿಂಗವಂತಿಕೆ.

ಹರಿಹರಕವಿಯು ಪಂಪಾಶತಕದಲ್ಲಿ ತನ್ನ ಗುರುಗಳ ಹೆಸರನ್ನು ನಿರ್ದೇಶಿಸಿಲ್ಲ. ನೂರು ಪದ್ಯಗಳುಳ್ಳ ಗ್ರಂಥ ಸಮುದಾಯಕ್ಕೇ 'ಶತಕ'ವೆಂದು ಹೆಸರಿರುವ ಕಾರಣ ಅಲ್ಲಿ ವಿಸ್ತಾರಕ್ಕೆ ಇಂಬು ಸಾಲದು. ಆದುದರಿಂದ ಕೇವಲ ಗುರುದೇವನೊಬ್ಬನ ನಾಮ ನಿರ್ದೇಶಕ್ಕಿಂತಲೂ ಆ ಗುರುಪರಂಪರೆಯನ್ನೇ ಹೇಗೂ—ಮುಂದೆ ವಿರೂಪಾಕ್ಷನಿತ್ತಾಜ್ಞೆಯಿಂದ ಆತನ ಕಾವ್ಯವನ್ನು ತಾನು ಬರೆಯಬೇಕೆಂದಿರುವ ಪ್ರಯುಕ್ತ—ಅದರಲ್ಲಿ ಸವಿಸ್ತಾರವಾಗಿ ಬಣ್ಣಿಸೋಣವೆಂದು ಬಿಟ್ಟಿರಬಹುದು. ಗಿರಿಜಾ ಕಲ್ಯಾಣ ಕಾವ್ಯದ (೧ ಆಶ್ವಾಸದ)ಲ್ಲಿ ತನ್ನ ಗುರುಪರಂಪರೆಯನ್ನು ಆ ಹರಿಹರನೇ ಈ ರೀತಿ ಹೇಳುತ್ತಾನೆ.

..................ಈ ಕಾವ್ಯಮಂ ಬಿ-॥
ತ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಹರಿದೇವಂ ಮಹೋತ್ಸಾಹ
ದಿಂದಂ ॥೩೩॥

ಆತನ ಗುರುಕುಲಮತಿ ವಿ-
ಖ್ಯಾತಂ ಘನಪೂತಮಿಂದುಧರ ಸಂಭೂತಂ।
ನೂತನ ಪುಣ್ಯವ್ರಾತಂ
ಪ್ರೀತಿಕರಂ ಭೂತಳಾತಿಶಯ ಸುಖಜಾತಂ ॥೩೪॥

ಸುರುಚಿರಮೂರ್ತಿ ಸತ್ಯತರಮೂರ್ತಿ ಕೃಪಾಕರಮೂರ್ತಿ ಪುಣ್ಯ ವಿ-
ಸ್ತರ ಗುರುಮೂರ್ತಿ ಶಾಂತಿಮಯ ಮೂರ್ತಿ ಸುಧಾಕರಮೂರ್ತಿ ಯುತ್ತ
ರೋ- ।

ತ್ರರವರಮೂರ್ತಿ ಮುಕ್ತಿ ಸುಖಮೂರ್ತಿ ಮನೋಹರಮೂರ್ತಿ ಚಂದ್ರ ಶೇ-
ಖರ ಗುರುಮೂರ್ತಿ ಕೀರ್ತಿಪತಿ ಹಂಪೆಯ ಶಂಕರ ದೇವರೊಪ್ಪುವರ್॥೩೫॥

ಆ ಶೈವಾಗಮ ಸಿದ್ಧರಪ್ಪ ಪರಮ ಶ್ರೀಶಂಕರಾಚಾರ್ಯರಿಂ
ಪಾಶಚ್ಛೇದಮನಿಂಬುಗೊಂಡು ಮೆರೆದಂ ಶ್ರೀಶುದ್ಧಪಂಚಾಕ್ಷರೀ ।
ವೇಶಾನಂದ ರಸಾದ್ರ್ರಚಿತ್ತಯುತ ಹೃದ್ರಾಜೀವ ಸಂಪೂರ್ಣ ಸಂ-
ಕಾಶ ಪ್ರಜ್ವಲಮೂರ್ತಿ ಕೀರ್ತಿಭರಿತಂ ಶ್ರೀಮಾದಿರಾಜಾಹ್ವಯಂ ॥೩೬॥

ಇಂತಿಂತೊಪ್ಪುವ ಮಾದಿರಾಜನ ಮನೋದುಗ್ಧಾಬ್ಧಿಚಂದ್ರಂ ಶಿವಂ
ಶಾಂತಂ ಶಾಶ್ವತಮೂರ್ತಿ ಶೈವಸುಭಗಂ ಸಾಕಾರ ಸರ್ವೇಶ್ವರಂ ।
ಸಂತೋಷಾಭರಣಂ ಪ್ರಸನ್ನ ಕರಣಂ ಪ್ರತ್ಯಕ್ಷಪಂಚಾನನಂ
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ ॥೩೭॥

ಶ್ರೀಗುರು ಪರಗುರು ಘನ ಮಹಿ-
ಮಾಗುರು ಮಾಧುರ್ಯ ಗುರು ಮಹಾಗುರು ವರವಿ- ।
ದ್ಯಾಗುರು ಸುಖೈಕಗುರು ವಸು
ಧಾಗುರು ಶೈವಗುರು ಶಾಂತಗುರು ಮಾಯ್ದೇವಂ ॥೩೮॥

ಸವಮಳನೆಂಬುದುತ್ತಮ ಗುಣಾಶ್ರಯನೆಂಬುದು ಶೈವಸಿದ್ಧನೆಂ-
ಬುದು ರವಿತೇಜನೆಂಬುದು ಕೃಪಾಂಬುಧಿಯೆಂಬುದು ಶಾಂತಮೂರ್ತಿಯೆಂ।
ಬುದು ಪರಮಾಗಮ ಪ್ರಕರನೆಂಬುದು ಹಂಪೆಯ ಮಾಯಿದೇವನೆಂ
ಬುದು ಶಿವನೆಂಬುದಪ್ರತಿಮನೆಂಬುದು ಸದ್ಗುರುವೆಂಬುದೀ ಜಗಂ ॥೩೯॥

ಈ ಸ್ತುತಿಕ್ರಮದಲ್ಲಿ ಹರಿಹರನು ತನ್ನಾ ಗುರುಪರಂಪರೆಗೆ ವೈದಿಕ ವಿಚಾರವಾದ ಒಂದಾದರೂ ವಿಶೇಷಣವನ್ನು ಎಲ್ಲಿಯೂ ಇಡದೆ, ಕೇವಲ ತಾಂತ್ರಿಕ (ಆಗಮ) ಮತ [ವೀರಶೈವಮತ] ರೀತ್ಯಾ, ಶ್ರೀಶಂಕರದೇವರು ಅಥವಾ ಶಂಕರಾಚಾರ್ಯರು ಶೈವಾಗಮಸಿದ್ಧರೆಂದೂ ಇವರಿಂದ ಪಾಶ ಚ್ಛೇದವನ್ನು ಹೊಂದಿ ಮಾದಿರಾಜನು ಒಪ್ಪುತ್ತಿರುವನೆಂದೂ ಹೇಳಿ, ಇವನಿಂದ ಉಪದಿಷ್ಟನಾದ ಮಾಯಿದೇವನು ಶೈವಸುಭಗನಾಗಿ ಶೋಭಿ

ಸ್ತುತಿಹನೆಂದು ಬಣ್ಣಿಸತೊಡಗಿದ್ದಾನೆಃ— ಈತನನ್ನು ಮುಖ್ಯೈಕಗುರು, ಶೈವಗುರು, ಶೈವಸಿದ್ಧ, ಪರಮಾಗಮಪ್ರಕರ, ಶಿವ, ಸದ್ಗುರುವೆಂದು ಮುಂತಾಗಿ ಜಗವೆನ್ನುವುದು. ಮತ್ತು ಈತನೆ ತನಗೆ ವಿದ್ಯಾಗುರುವೆಂದು ಹರಿಹರನೆ ಹೇಳುತ್ತಾನೆ. ಇನ್ನು ರಕ್ಷಾಶತಕದಲ್ಲಿ—

ಎರೆದೇವೆಂ ಪೊರ್ದಿಯೇವೆಂ ಮರುಕದಿನಿರದೇವೆಂ ಮನಂಮುಟ್ಟಿಯೇವೆಂ
ಕರೆದೇವೆಂ ಕೂರ್ತುಮೇವೆಂ ಬಿಡದತಿಭಯದಿಂ ನಂಬಿಯೇವೆಂ ? ಶಿವಾ ಮ-
ದ್ಗುರುವೇ ! ಇನ್ನೇವೆನೇವೆಂ ನಿಜಕರುಣಲವಂ ಪೊರ್ದದ+ಅಸ್ಪೃಶ್ಯನಾಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥೩೬॥

ಎನ್ನುವಲ್ಲಿ, ತಾನು ಪರಮಾತ್ಮನನ್ನು ನಂಬಿ ಅದೆಷ್ಟು ಕರೆದರೂ, ಮುಟ್ಟಿ ಪೂಜಿಸಿದರೂ ಪ್ರಯೋಜನವಿಲ್ಲದಾಗಿದೆ; ಏಕೆಂದರೆ— ಎನ್ನ ಗುರುವೆ! ನಿನ್ನ ಕರುಣವಾಗಿಲ್ಲದ್ದರಿಂದ ನಾನಿನ್ನೂ ಅಸ್ಪೃಶ್ಯ ಎಂದರೆ ವೀರಶೈವ ಶಾಸ್ತ್ರಪ್ರಕಾರ ಭವಿಯು— ಎಂದು ನಿರ್ವೇದಪಡುತ್ತ ಮತ್ತೆ ಅದೇ ಶತಕದಲ್ಲಿ—

ಗುರುವಿಂ ಶುದ್ಧಾತ್ಮನಾದೆಂ ಗುರುವಿನಕೃಪೆಯಿಂ ಜಗತ್ಪೂಜ್ಯನಾದೆಂ
ಗುರುವಿಂ ನಿಷ್ಕಾಮಿಯಾದೆಂ ಘನತರ ಗುರುವಿಂ ಶಾಂತಿಸಂಪನ್ನನಾದೆಂ ।
ಗುರುವಿಂ ಸರ್ವಜ್ಞನಾದೆಂ ದಿಟವು+ಎನಿಪಿದನೆನ್ನೊಳ್ ದಿಟಂ ಮಾಡುತಂ ಮ-
ದ್ಗುರುವೇ ಗೌರೀಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ.೯೬॥

---

ಟಿಃ— ೧ ಶೈವಗುರುವೆಂದರೆ ವೀರಶೈವ ಗುರುವೆಂದರ್ಥವು, ಉದಾಃ— ಮಹಾದೇವಿಯಕ್ಕನ ರಗಳೆಯ ೨ನೆ ಸ್ಥಲದಲ್ಲಿ ಶಿವದೀಕ್ಷೆಯ ವಿಚಾರ ಬಂದಾಗ, ಮಹಾದೇವಿಯಕ್ಕನಿಗೆ ತಂದೆಯಾದ ಶಿವಭಕ್ತನು "ಶಿವಾಚಾರ್ಯರಿಂ ಗುರುಕಾರುಣ್ಯಮಂ ಮಾಡಿಸಿ" ಎಂದು ಹರಿಹರನೆ ಹೇಳಿಹನು. ಶೈವಾಚಾರ್ಯ ಎಂದರೆ ಇಲ್ಲಿ ವೀರಶೈವ ಗುರುವಿಗಲ್ಲದೆ, ಬೇರೆ ಅರ್ಥವೆಂತೂ ಆಗದು.

ತನ್ನಾ ಅಸ್ಪೃಶ್ಯತೆಯನ್ನು ಕಳೆಯುವ ಗುರುವಿನ ಕರುಣವಾಗಿ ಆ ಗುರುವಿನಿಂದ ಶುದ್ಧಾತ್ಮನೂ, ಜಗತ್ಪೂಜ್ಯನೂ ಆದೆನೆಂಬುದನ್ನು ಅದೆಂದು ದಿಟವಮಾಡಿ ಆ ಶ್ರೀವಿರೂಪಾಕ್ಷನು ರಕ್ಷಿಸುವನೋ ಎಂದು ಅಂಗಲಾಚಿ ಹಂಬಲಿಸುತ್ತಿದ್ದ ಹರಿಹರನು, ಗಿರಿಜಾಕಲ್ಯಾಣವ (೧ ಆಶ್ವಾಸ, ೪೦ನೆಯ) ಪದ್ಯದಲ್ಲಾಗಲೆ—

ಧರೆಯೊಳಗಾ ಮಾಯ್ದೇವರ
ವರ ಕರುಣಂ ಬಡೆದು ಮೆರೆವನುನ್ನತ ಮಹಿಮಂ ।
ಗುರುಪದಭಕ್ತಂ ಹಂಪೆಯ
ಹರಿದೇವಂ ಕವಿಕಳಾ ವಿಶಾರದರರಸಂ ॥

ಎಂದು ಹೇಳಿಯೆ ಮುಗಿಸಿದ್ದಾನೆ. ಇಲ್ಲಿ ಅಸ್ಪೃಶ್ಯತೆಯನ್ನು ಕಿತ್ತೊಗೆವ ಗುರು ಮಾಯ್ದೇವರ ವರಕರುಣವನ್ನು ಪಡೆದು— 'ಉನ್ನತ ಮಹಿಮ' 'ಗುರುಪದಭಕ್ತ' ಮತ್ತು ಕವಿಗಳಿಗೆ ದೊರೆವ ಪದವಿಗಳಲ್ಲಿ 'ಕವಿರಾಜ' ಪದವಿಯು ಶ್ರೇಷ್ಠತಮವಾದುದು; ಅದನ್ನೆ ತಾನು ಕೊಂಚ ಹಿಗ್ಗಿಸಿ "ಕವಿಕಳಾವಿಶಾರದರ+ಅರಸ" ನೆಂದು, ಆಗಿನ ಕಾಲದ ಶಿವಭಕ್ತನಿಗೆ ತಕ್ಕ ಧಾರ್ಷ್ಟ್ಯಪೂರ್ವಕ ಹೇಳಿಹನು. ಅಲ್ಲಲ್ಲ-ಎಂದಿಂತೆಲ್ಲಾ ಕವೀಂದ್ರರ್ 'ಭಕ್ತವ್ರಜಂ' ಸಜ್ಜನರ್ ಹರಸಿಕೊಂಡಾಡುತ್ತಿರ್ದರಂತೆ. ವೀರಶೈವನಲ್ಲದ ಕವಿಯಾಗಿದ್ದರೆ ಇಲ್ಲಿ ಕವೀಂದ್ರರ್, ಸಜ್ಜನರ್ ಎಂದಿಷ್ಟೇ ಸಾಮಾನ್ಯವಾಗಿ ಹೇಳಿ ಮುಗಿಸುತ್ತಿದ್ದನು. ಆದರೆ ಹರಿಹರನಾಗಲೆ ಲಿಂಗವಂತನಾಗಿದ್ದುದರಿಂದ 'ಭಕ್ತವ್ರಜಂ' ಎಂಬ ಪದವನ್ನು ಆ ಎರಡು ಪದಗಳಿದ್ದರೂ ಪ್ರತ್ಯೇಕವಾಗಿಟ್ಟಿದ್ದಾನೆ. ಇದಲ್ಲದೆ ತನ್ನ ಕಾವ್ಯವು "ಭೂತೇಶ ಭಕ್ತಜನತಾಭಾವ್ಯಂ" ಎಂದೇ ನಂಬಿರುವನು. ಮತ್ತು ಇದೇ ಕಾವ್ಯದ ೧ನೆ ಆಶ್ವಾಸದಲ್ಲಿ:—

ಶಿವನ ಮನೋಹರಂ ಶಿವನ ಪುಣ್ಯ ಫಲಂ ಶಿವನಾಪ್ತ ಸಂಕುಳಂ
ಶಿವನ ವಿಲೋಚನಂ ಶಿವನ ಗೋತ್ರಬಲಂ ಶಿವನೂರ್ಜಿತೋಜ್ಜ್ವಲಂ ।
ಶಿವನಂ ಸುಖಂ ಸದಾಶಿವನಸರ್ವಮುಖಂ ಶಿವಭಕ್ತರೆನ್ನ ಕಾ-
ವ್ಯವನತಿ ಸಮ್ಮದಂ ಬೆರಸಿ ಪೊರ್ದುಗೆ ತಿರ್ದುಗೆ ತಾಳ್ದುದಳ್ಕರಿಂ ॥೭॥

ತನ್ನ ಕಾವ್ಯದಲ್ಲಿ ತಪ್ಪಿದ್ದರೆ ಅದನ್ನು ಶಿವಭಕ್ತರೇ ಪ್ರೀತಿಯಿಂದ ತಿದ್ದಲಿ; ಎಂದು ಒತ್ತಿ ಹೇಳುವಲ್ಲಿ, ಶಿವಭಕ್ತರಿಗಿಟ್ಟಿರುವ ವಿಶೇಷಣ

ಗಳನ್ನಿನಿತು ಪರಿಕಿಸೋಣ. ಸೂಕ್ಷ್ಮಾಗಮದ ಸಪ್ತಮ ಪಟಲದಲ್ಲಿ ವೀರ ಶೈವ ಮತ ತತ್ವ ನಿರೂಪಣೆ ಮಾಡುವಾಗ—

ಗೋತ್ರಂಚ ಶಿವಗೋತ್ರಂಚ, ನಾಮಾಪಿ ಶಿವನಾಮಚ
ಸದಾಶಿವೌಚ ಪಿತರೌ ಬಾಂಧವಾಃ ಶಿವಕಿಂಕರಾಃ ॥೪೧॥

ಎಂದಿರುವಲ್ಲಿ ಶಿವಭಕ್ತರಿಗೆ- ವೀರಶೈವರಿಗೆ ಗೋತ್ರವು, ಶಿವಗೋತ್ರವೆಂದು ಹೇಳಿದೆ. ಇದು ಋಷಿಗೋತ್ರವೆನ್ನುವ ಬ್ರಾಹ್ಮಣ ವರ್ಣಕ್ಕೆ ಸಲ್ಲದ ಮಾತು. ಹರಿಹರನು ಶಿವಭಕ್ತರು 'ಶಿವನ ಗೊತ್ರಬಲ' ವುಳ್ಳವರೆಂದು ಹೇಳಿರುವುದು, ಮೇಲಿರುವ ವೀರಶೈವಾಗಮಕ್ಕೆ ಸಮ್ಮತವಾಗಿ, ಅದರ ಅಭ್ಯಾಸದ ಬಳಿ ವಿಡಿದು ಹರಿಹರನ ವಾಣಿಯಲ್ಲಿ ಬಂದುದಾಗಿದೆ. ಮತ್ತು 'ಶಿವನ ಸುಖ' ವುಳ್ಳವರೆಂಬ ವಿಶೇಷಣದಿಂದ ವೀರಶೈವ ಮತ ಪ್ರಕಾರ—"ಲಿಂಗ ಭೋಗೋಪಭೋಗಿಗಳೆಂದೂ, 'ಸದಾಶಿವನ ಸರ್ವಮುಖಂ' ಎಂಬ ವಿಶೇಷಣವು-ಪರಮಾತ್ಮನು "ಭಕ್ತದೇಹಿ" ಯಾಗಿರುವನೆಂಬ ವೀರಶೈವ ತತ್ವವನ್ನೂ ಸಾರುತ್ತದೆಂಬುದಿಷ್ಟು ಸುವ್ಯಕ್ತವಿರುವುದರಿಂದಲೂ "ಈ ಪದ್ಯದಿಂದ ಹರಿಹರನು ಶೈವನೆಂದೇವಿನಾ ವೀರಶೈವನೆಂದು ವ್ಯವಸ್ಥಿತವಾಗದು—" ಎಂಬ ನಮ್ಮ ಶ್ರೀಮಾನ್ ಗೋವಿಂದ ಪೈಗಳವರ ವಾದಸರಣಿಯು ಎಷ್ಟೂ ಸಾಧುವಾಗಿಲ್ಲವೆಂದು ತಾನೇ ವ್ಯವಸ್ಥಿತವಾಗುತ್ತದೆ. ಒಂದು ಪಕ್ಷ ಬ್ರಾಹ್ಮಣ ಕವಿಯಾಗಿದ್ದರೆ ಅಂದು ಕೇವಲ 'ಶಿವಭಕ್ತ' ಪದವನ್ನಿಟ್ಟು ಅವರಿಗೆ ತಿದ್ದುವ ಅಧಿಕಾರವನ್ನು ಅದೆಂತು ಕೊಡುತ್ತಿದ್ದನು ವಿಚಾರಿಸಲಿ; ಅಥವಾ ಬ್ರಾಹ್ಮಣ ಕವಿಗಳ ಇಂತಹದೊಂದು ಪ್ರಯೋಗವನ್ನು ಉದಾಹರಿಸಲಿ. ಇನ್ನು ಗಿರಿಜಾಕಲ್ಯಾಣ ಕಥಾಗರ್ಭದ ಅಂತ್ಯದಲ್ಲ "ಈ ಪ್ರಬಂಧವಂ ಸಕಲ ಭಕ್ತರ್ ಸುಚಿತ್ತದಿಂದವಧರಿಪುದು" ಎಂದು ಕವಿಯೇ ಬರೆದಿಹನು. "ಭಕ್ತನೇ ಸತ್ಕುಲಜನೆಂಬ" ರಕ್ಷಾಶತಕದಲ್ಲಿಯ ಹರಿಹರನ ವಾಕ್ಯವನ್ನು ಈ ಹಿಂದೆ ತೋರಿಸಲಾಗಿದೆ. ಅದನ್ನಿಲ್ಲಿ ಮರೆಯಬಾರದು.

## ಗಿರಿಜಾಕಲ್ಯಾಣಕಾವ್ಯದಲ್ಲಿರುವ ಹರಿಹರನ ಗುರುಪರಂಪರೆಯು ವೀರಶೈವರದಾಗಿದೆ.

ಶಿವಗಣದ ರಗಳೆಗಳನ್ನು ರಚಿಸಿದಂದುಮಾತ್ರ ಹರಿಹರನು ಲಿಂಗವಂತನೆಂಬುದರಲ್ಲಿ ಇದು ವರೆಗೆ ಯಾರದೂ ಭಿನ್ನಾಭಿಪ್ರಾಯವಿಲ್ಲ. ಹರಿ

ಹರನು ತಾನೇ ಬರೆದ ಮಹಾದೇವಿಕ್ಕನ ರಗಳೆಯ'ಕಥಾಗರ್ಭ' ದ ಅಂತ್ಯದಲ್ಲಿ— "ಹಂಪೆಯಮಾದರಸದೇವರ ಕಾರುಣ್ಯದ ಶಿಶುವಪ್ಪ ಹಂಪೆಯ ಹರಿದೇವಂ" ಎಂದೂ ಮತ್ತು

ಹಂಪೆಯ ಶಂಕರ ದೇವರ
ಹಂಪೆಯ ಗುರು ಮಾದಿರಾಜ ದೇವರ ಮತ್ತಂ।
ಹಂಪೆಯ ಮಾದರಸರ ದಯೆ-
ಯಿಂ ಪೇಳ್ದಂ ರಸಿಕಚಕ್ರಿ ಹರಿಹರದೇವಂ ॥ ೨ ॥

(ಅದೇ ರಗಳೆ ಸ್ಥಲ ೧.)

ಇದಲ್ಲದೆ ಗಿರಿಜಾಕಲ್ಯಾಣದಲ್ಲಿ ಹರಿಹರನೆ ಹೇಳಿರುವ ತನ್ನ ಗುರು ಪರಂಪರೆಯು ಕ್ರಮವಾಗಿ

೧. ಹಂಪೆಯ ಶಂಕರದೇವ.
|
೨. ಹಂಪೆಯ ಮಾದಿರಾಜ.
|
೩. ಹಂಪೆಯ ಮಾಯಿದೇವ, ಇಲ್ಲವೆ-ಮಾಯ್ದೇವ.

ಎಂಬುದಾಗಿರುವುದನ್ನು ಈ ಮೊದಲು ಆತನ ಪದ್ಯದಿಂದಲೇ ತಿಳಿಸಿದೆ. ಅದೇ ಗುರುಪರಂಪರೆಯನ್ನೇ ಈ ಮಹಾದೇವಿಯಕ್ಕನ ರಗಳೆಯಲ್ಲಿಯೂ ಹೆಸರಿಸಿರುವುದು ದಿಟವು. ಆದರೆ ೩ ನೆ ಮಾಯಿದೇವರಿಗೆ ಮಾಯ್ದೇವರೆಂದೂ, ಅಲ್ಲದೆ ಮಾದರಸರೆಂಬ ಮತ್ತೊಂದು ನಾಮವಿರುವುದೆಂದೂ ಧೃಢಪಡುತ್ತದೆ:— ಏಕಂದರೆ ೩ ನೆ ಮಾಯಿದೇವನೇ ಹರಿಹರನ ಸಾಕ್ಷಾತ್‌ಗುರುವು; ೨ ನೇ ಮಾದಿರಾಜನಲ್ಲ. ಹೀಗಿದ್ದೂ ಗಿರಿಜಾಕಲ್ಯಾಣ ಕಥಾಗರ್ಭದ ಅಂತ್ಯದಲ್ಲಿಯೂ, ಮಹಾದೇವಿಯಕ್ಕನ ರಗಳೆಯ ಕಥಾಗರ್ಭದ ಅತ್ಯಂತದಲ್ಲಿಯೂ "ಮಾದರಸದೇವರ ಕಾರುಣ್ಯದ ಶಿಶುವಪ್ಪ ಹಂಪೆಯ ಹರಿಹರಂ (ಹರಿದೇವಂ)" ಎಂದೂ ಮತ್ತು ಇದೇ ರಗಳೆಯ ೧ ನೇ ಸ್ಥಲದ ೨ ನೇ ಪದ್ಯದಲ್ಲಿ, ೨ ನೆ ಮಾದಿರಾಜನ ತರುವಾಯ ಮಾಯಿದೇವನೆನ್ನದೆ ಮಾದರಸರೆಂದಿರುವುದರಿಂದಲೂ, ೩ ನೇ ಮಾಯಿದೇವನಿಗೆ ಮಾಯ್ದೇವ ಮತ್ತು ಮಾದರಸನೆಂಬ ನಾಮಾಂತರ ವಿತ್ತೆಂದೇ ನಿಶ್ಚಯವಾಗುತ್ತದೆ. ಇದಿರಲಿ.

ಒಂದು ಪಕ್ಷ ಗಿರಿಜಾಕಲ್ಯಾಣದಲ್ಲಿ ಹೆಸರಿಸಿದ ಹರಿಹರನ ಗುರು ಪರಂಪರೆಯು ಬ್ರಾಹ್ಮಣ ವರ್ಣದ್ದೆಂದು ಇಟ್ಟುಕೊಂಡರೂ, ಲಿಂಗ ವಂತನಾದ ಬಳಿಕ ರಚಿಸಿದ ಮಹಾದೇವಿಯಕ್ಕನ ರಗಳೆಯಲ್ಲಿ ಆ ಬ್ರಾಹ್ಮಣ ವರ್ಣದ ಗುರುಕುಲವನ್ನು ಮತ್ತೆ ಕವಿಯು ಮರೆತಾದರೂ ಸತ್ಯವಾಗಿ ನೆನೆಸಿಕೊಳ್ಳುತ್ತಿದ್ದಿಲ್ಲ. ಈ ದೃಷ್ಟಿಯಿಂದ ನೋಡಿದರೂ, ಗಿರಿಜಾಕಲ್ಯಾಣ ಕಾವ್ಯವು ಲಿಂಗವಂತನಾದ ಬಳಿಕ ರಚಿತವಾಗಿದೆಯೆಂದು ಸೂರ್ಯ ಪ್ರಕಾಶದಷ್ಟೇ ವ್ಯಕ್ತವಾಗುತ್ತದೆ; ಮತ್ತು ಗಿರಿಜಾಕಲ್ಯಾಣವನ್ನು ರಚಿಸಿ ದಂದು ಹರಿಹರನು ಲಿಂಗವಂತನಾಗಿದ್ದನೆನ್ನಲು, ಇದೊಂದು ಅಚಾಲ್ಯ ವಾದ ಪ್ರಬಲ ಪ್ರಮಾಣವೇ ಆಗುತ್ತದೆ.

ಗಿರಿಜಾಕಲ್ಯಾಣದಲ್ಲಿ ಹರಿಹರನು ಜನನೀ ಜನಕರ ನಾಮ ನಿರ್ದೇಶ ಪೂರ್ವಕ ಸ್ವನಾಮವನ್ನು ಹೇಳದೆ, ಎತ್ತದೆ, ಗುರುಪರಂಪರೆ ಯನ್ನು ಮುಂದುಮಾಡಿ ಮಾತ್ರ ಹೆಸರಿಸಿರುವುದು ಗುರುಪುತ್ರರೆಂಬ ಲಿಂಗವಂತ ತತ್ವಕ್ಕೇನೋ ಸರಿಯಾಗಿ ಒಪ್ಪುತ್ತದೆ. ಆದರೆ ಹರಿಹರನು ತನ್ನಯಾವ ಗ್ರಂಥದಲ್ಲಿಯೂ ಇತರ ಮತೀಯ ಕವಿಗಳಂತೆ ತಂದೆ ತಾಯಿ ಗಳ ಹೆಸರನ್ನು ಹೆಸರಿಸದಿರುವ ಕಾರಣವೇನು ಹೇಳಲಿ ?

**ಗಿರಿಜಾಕಲ್ಯಾಣದೊಳಗೆ ಲಿಂಗವಂತಿಕೆಯುವಾಗ್ಧೋರಣೆ.—**

ಗಿರಿರಾಜನು-ಮಜ್ಜನಂ ಮಾಡುತೆ ಭಸಿತಲಲಾಟಂ ಸರುದ್ರಾಕ್ಷಕಂಠಂ।
ಸ್ಥಿರಚಿತ್ತಂ ಲಿಂಗಪೂಜಾವಿರಚನಪರಿತೋಷಂ ಪ್ರಸಾದ ಪ್ರಮೋದಂ
(ಆಶ್ವಾಸ ೩, ಪದ್ಯ ೫.)

ನಿರ್ಮಳೀ ಕೃತ ಕರಚರಣನುಂ ಭಸಿತಾವಯವನುಂ ರುದ್ರಾಕ್ಷ ಮಾಲಾಲಂಕೃತನುಂ ಶಿವಲಿಂಗೇಕ್ಷಣ ನಿತ್ಯನಿಯಮಸಂಪನ್ನನುಂ ಪ್ರಸಾದ ಭರಿತ ಶರೀರನುಂ ಸುಗಂಧಮಯ ತಾಂಬೂಲಮುಖನುಂ.
(೪-೧೦೩ ನೇ ಪದ್ಯದ ಮುಂದಿನ ಗದ್ಯ ಭಾಗ.)

ಗಿರಿರಾಜಂ— ನಿರ್ಮಳೀಕೃತ ಕರಚರಣನುಂ ನವ್ಯವಸ್ತು ಪರಿಶೋ ಭಿತನುಂ ವಿಭೂತಿ ವಿಳಸಿತ ಸರ್ವಾಂಗನುಂ ರುದ್ರಾಕ್ಷಮಾಲಾಲಂಕೃತ ಶರೀರನುಂ ಶಿವಲಿಂಗಪೂಜಾ ವಿರಚಿತ ಹಸ್ತ ಕಮಳನುಂ ತತ್ಪಾದವಂದ ನಾಸಕ್ತನುಂ ಪಾದೋದಕ ಪ್ರಸಾದ ಸಂತುಷ್ಟ ಹೃದಯನುಂ.
(೬-೯೬೧ ರ ಮುಂದಿನ ಗದ್ಯ.)

ಈ ಮೇಲಿರುವ ವರ್ಣನೆಯಲ್ಲಿ ವೀರಶೈವರ ಅಷ್ಟಾವರಣದೊಳ ಗಣ ಲಿಂಗ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ ಈ ಐದು ಶಬ್ದ ಗಳು ಮೇಲಿಂದಮೇಲೆ ಬೇರೆ ಬೇರೆ ಆಶ್ವಾಸಗಳಲ್ಲಿ ಬಂದಿವೆ. ಅವುಗ ಗಳಲ್ಲಿ ಪಾದೋದಕವೆಂಬುದು ಬ್ರಾಹ್ಮಣವರ್ಣದ್ದಲ್ಲ; ಅದಕ್ಕೆ ತೀರ್ಥ ವೆನ್ನುವ ಸಂಪ್ರದಾಯು ಬ್ರಾಹ್ಮಣರದಾಗಿದೆ. 'ಪ್ರಸಾದಭರಿತ ಶರೀ ರನುಂ' ಎಂದ ಬಳಿಕವೆ ತಾಂಬೂಲ ಸೇವನೆಯನ್ನು ಹೇಳುತ್ತಿರುವು ದರಿಂದ, ಇಲ್ಲಿ ಪ್ರಸಾದವೆಂದರೆ ಭೋಜ್ಯಸಾಮಗ್ರಿಯು. ಇದನ್ನು ಲಿಂಗ ಮೂರ್ತಿ ಅಥವಾ ಗುರು, ಜಂಗಮ ಮುಖದಿಂದ ಪ್ರಸಾದವನ್ನಾಗಿ ಮಾಡಿಕೊಂಡು ಸ್ವೀಕರಿವುದು, ಲಿಂಗವಂತರಲ್ಲಲ್ಲದೆ ಇತರ ಮತೀಯರ ಲ್ಲಿಲ್ಲ. ಗಿರಿರಾಜನು ಲಿಂಗವಂತನಿರಲಿ, ಇಲ್ಲದಿರಲಿ, ಈ ವರ್ಣನೆಯಲ್ಲಿ ಮಾತ್ರ ಕವಿಯು ವೀರಶೈವ ಮತ ಸಂಪರ್ಕದಿಂದಾದ ತನ್ನ ಮನೋ ಭಾವವನ್ನು ಬಿಚ್ಚಿಬಿಟ್ಟಿದ್ದಾನೆಂಬುದು ವಿಚಕ್ಷಣರಿಗೆಲ್ಲ ಅರಿದ ಮಾತು.

ಇನ್ನು ಗಿರಿಜೆಯ ಶೈಶವವರ್ಣನೆಯುಳ್ಳ ೩ ನೆ ಆಶ್ವಾಸದಲ್ಲಿ, ಗಿರಿ ರಾಜನ ರಾಜ ಠೀವಿಗೆ ತಕ್ಕ ನೂತ್ನ ರತ್ನಾಭರಣಗಳಿಂದ ಗಿರಿಜೆಯನ್ನು ಬಂಣಿಸಿದ್ದರೂ ೯೧ನೆಯ ಪದ್ಯದಲ್ಲಿ ಮಾತ್ರ ಕವಿಯು ಮರೆಯದೆ ಆಶೈಶ ವದ ಗಿರಿಜೆಗೆ ಏಕಮುಖರುದ್ರಾಕ್ಷಿಯನ್ನು ಕಟ್ಟಿಸಿಬಿಟ್ಟಿದ್ದಾನೆ. ರಾಜ ಶಿಶುವಿಗೂ ರುದ್ರಾಕ್ಷಿಯನ್ನು ಕಟ್ಟುವುದು ಅದಾವ ಬ್ರಾಹ್ಮಣ ಕಾವ್ಯಗಳ ಲ್ಲಿಲ್ಲವಾದರೂ, ವೀರಶೈವ ಕಾವ್ಯಜ್ಞರಿಗೆ ಮಾತ್ರ ಹೊಸ ನುಡಿಯಲ್ಲ. ಈ ೯೧ ರ ಮುಂದಿನ ಗದ್ಯ ಭಾಗದಲ್ಲಿ "ಹೊಂಗಡಗದ ಲಿಂಗವಂತೆ" ರುದ್ರಾ ಕ್ಷಿಯ ಭದ್ರಾಂಗಿ ವಿಭೂತಿಯ ವಿಳಾಸ ನಿಧಿ" ಎಂದೂ ತುತಿಸಿದ್ದಾನೆ. ಹರಿಹರನಾಗ ಬ್ರಾಹ್ಮಣ ಕವಿಯಾಗಿದ್ದರೆ 'ಹೊಂಗಡಗದ ಲಿಂಗವಂತೆ' ಎಂಬ ವಾಕ್ಯದಿಂದ ಬಂಣಿಸುವಲ್ಲಿ ನಮಗೆ ಏನೊಂದೂ ಕಾರಣ ತೋರದು. ಇದಕ್ಕೆ ಸಮಾಧಾನವನ್ನು ಬಲ್ಲವರು ಹೇಳಲಿ.

ಶಿವನ ತಪಃಸ್ಥಾನವಾದ ಹಂಪೆಯಲ್ಲಿರುವ ಹೇಮಕೂಟದೊಳಗೆ ವ್ರತಿಗಳು, ಸಾಧುಗಳು, ಸಿದ್ಧರು, ಪರಮತಪಸ್ವಿಗಳೂ ನೆಲಸಿದ್ದರೆಂದು ಹೇಳಿದ್ದರೂ, ೫-೨೪ ನೆಯ ಪದ್ಯದಲ್ಲಿ—

ನಿರತರ್ ಭರಿತರ್ ಚರಿತರ್
ಪರತತ್ವರತರ್ ನುತರ್ ವಿರಕ್ತನ ತೇಜಃ ।

ಕಿರಣರ್ ಕರುಣರ್ ಶರಣರ್
ಕರುಣಾಳುಗಳರುಣಮಣಿನಿಭರ್ ನೆಲಸಿರ್ದರ್ ॥

ಎಂದು ಪ್ರತ್ಯೇಕವಾದ ಒಂದು ಪದ್ಯದ ತುಂಬಾ ಶರಣರನ್ನೇ ಹೊಗಳಿಹನು.

೧೧ನೆ ಆಶ್ವಾಸ, ಪದ್ಯ ೯೭; ೧೧೯ ಮತ್ತು ಇದರ ಮುಂದಿನ ಗದ್ಯಭಾಗ ಇವುಗಳಲ್ಲಿ ಕ್ರಮವಾಗಿ— "ಶರಣಕುಲಕಲ್ಪವೃಕ್ಷ ಶರಣ ಸುರಭೂಜ ಭಕ್ತಜನಭಾಗ್ಯೋದಯ" ಎಂದು ಶ್ರೀ ಶಿವನನ್ನು ಬಣ್ಣಿಸಿದ್ದಾನೆ. ಇದೇ ಕೊನೆಯಾಶ್ವಾಸದಲ್ಲಿ

ಹರಿಸಂ ಮಿಗೆ ಕೈಲಾಸದ
ಪುರದೊಳಗೊಪ್ಪಿರ್ದನಭವನದ್ವಯರೂಪಂ ।
ವರಶರಣಾಳಿಗೆ ವರವಂ
ಕರುಣದೆ ಕರುಣಿಸುತೆ ಹಂಪೆಯ ವಿರೂಪಾಕ್ಷಂ ॥೧೧॥

ಇಂತು ಕಥಾಂತ್ಯವನ್ನು ಸೂಚಿಸಿರುವನು. ಶರಣ, ಭಕ್ತ ಶಬ್ದಗಳ ವಿಚಾರವಾಗಿ ಈ ಮೊದಲೆ ಬರೆದುದಾಗಿದೆ. ಇದುಕಾರಣ ಇವುಗಳನ್ನೆಲ್ಲಾ ಮನನಮಾಡಿ ನೋಡಿ, ಹರಿಹರನ ಶೈವ—ವೀರಶೈವತ್ವವನ್ನು ನಿರ್ಣಯಿಸಲೆಂದು ಆಕ್ಷೇಪಕರಲ್ಲಿ ನಮ್ಮ ವಿನಂತಿ.

ಹರಿಹರ ಕವಿರಾಜನ ಲಿಂಗವಂತಿಕೆಯನ್ನು ಗೊತ್ತುಪಡಿಸುವ ಸಂಗತಿಗಳು ಗಿರಿಜಾಕಲ್ಯಾಣ ಕಾವ್ಯದೊಳಗೆ ಹಾಗೂ ವಿಶೇಷವಾಗಿ ರಕ್ಷಾಶತಕ, ಪಂಪಾಶತಕಗಳಲ್ಲಿ ಇನ್ನೂ ಬೇಕಾದಷ್ಟಿವೆ. ರಕ್ಷಾಶತಕವಂತೂ ಈ ಕವಿಯ ಚರಿತ್ರೆಯನ್ನು ಅಥವಾ ವ್ಯಕ್ತಿತ್ವವನ್ನು ಗೊತ್ತುಪಡಿಸಲು ಬಲು ಸಲಹೆಯಾಗುತ್ತದೆ. ಲೇಖ ವಿಸ್ತಾರವಾಗುವುದೆಂದು ಬಗೆದು ಅವುಗಳನ್ನೆಲ್ಲಾ ಎತ್ತದೆ, ಆ ಹರಿಹರದೇವನ ಲಿಂಗವಂತಿಕೆಯ ಒಂದು ಸುಸ್ಪಷ್ಟರೇಖೆಯನ್ನು ಮಾತ್ರ ತೋರಿಸಿಕೊಡಲು ಇದು ವರೆಗೆ ಯತ್ನಿಸಲಾಗಿದೆ.

## ಆಕ್ಷೇಪಗಳು ಮತ್ತು ಕವಿಯ ಜೀವನ ಕಾಲವು.

ಇನ್ನುಳಿದುದೆಂದರೆ ಲೇಖದಾದಿಯಲ್ಲಿ ಹೇಳಿದ ಶ್ರೀಮಾನ್ ಗೋವಿಂದಪೈಗಳವರ ಆಕ್ಷೇಪವಿಚಾರ. ಆ ಆಕ್ಷೇಪಕ್ಕೆ ಉತ್ತರಿಸದೆ ಬಿಟ್ಟರೂ

ಇದುವರೆಗಿನ ವಿಚಾರದಿಂದ ಪಂಪಾಶತಕ, ಗಿರಿಜಾಕಲ್ಯಾಣಕಾವ್ಯ ಇವುಗಳನ್ನು ರಚಿಸಿದಂದು ಮಾತ್ರ ಹರಿಹರನು ಲಿಂಗವಂತನಾಗಿದ್ದನೆಂದು ಏನೊಂದೂ ಸಂಶಯವಿಲ್ಲದೆ ಸಿದ್ಧವಾಗುತ್ತದೆ. ಆದರೂ ಆಕ್ಷೇಪದಲ್ಲಿ ಸೇರಿಸಿ ಲೇಖದಾದಿಯಲ್ಲಿ ಹೇಳಿಕೆಕೊಟ್ಟದ್ದಕ್ಕಾಗಿಯೂ ಮತ್ತು ಹರಿಹರನ ಜೀವನ ಕಾಲ ನಿರ್ಣಯದ ವಿಚಾರವಾಗಿ ಕೊಂಚ ನಿವೇದಿಸಬೇಕಾಗಿರುವುದರಿಂದಲೂ, ಅವುಗಳ ಸತ್ಯಾಸತ್ಯತೆಯ ಬಗ್ಗೆ— ನನ್ನರಿದಂತುಟಂ ಬಿನ್ನಪಂಗೆಯ್ವೆನೀ ವಿಮರ್ಶೆಯಂ ಸಕಲೈತಿಹಾಸಿಕ ಸಾಹಿತಿಗಳ್ ಸುಚಿತ್ತದಿಂದವಧರಿಪುದು; ತಪ್ಪಿತವಿರೆ ತಿದ್ದುವುದು.

## ಆಕ್ಷೇಪದಲ್ಲಿಯ ಸಾರಾಂಶ.

(೧) ಬಸವೇಶ್ವರನ ಚರಿತ್ರವನ್ನೇ ಬರೆದ ಹರಿಹರನು, ಪಂಪಾಶತಕದಲ್ಲಿ ಹಲವು ಶಿವಶರಣರನ್ನು ಹೆಸರಿಸಿರುವನಾದರೂ, ಬಸವೇಶ್ವರನ ಹೆಸರನ್ನು ಹೇಳದೆ ಅಷ್ಟು ಮೌನವಾಗಿರಬೇಕಾದರೆ, ಅವನು (ಹರಿಹರನು) ಇನ್ನೂ ವೀರಶೈವನಾಗಿರಲಿಲ್ಲ, ಎಂದು ಸ್ವಯಮೇವ ಸಿದ್ಧವಾಗುತ್ತದೆ[೧೦] ಎಂಬುದು ನಮ್ಮ ಗೋವಿಂದಪೈಗಳವರ ಆಕ್ಷೇಪದಲ್ಲಿಯ ಮುಖ್ಯ ಸಾರಾಂಶ.

## ಈ ಆಕ್ಷೇಪಕ್ಕೆ ನಮ್ಮ ವಿನಂತಿ.

(೧) ಹರಿಹರನು ಪಂಪಾಶತಕವನ್ನು ಬರೆವಾಗ ಬ್ರಾಹ್ಮಣನೇ ಇದ್ದಿದ್ದರೆ ಮಾತ್ರ ಸದರಿಯವರ ಆಕ್ಷೇಪವು ಸರಿಹೋಗುತ್ತಿತ್ತು; ಆದರೆ ಅದೇ ಶತಕದಲ್ಲಿ ಕವಿಯೇ ತನ್ನ ಲಿಂಗವಂತಿಕೆಯನ್ನು ಒಪ್ಪಿಕೊಳ್ಳುತ್ತಾನೆಂಬುದನ್ನು ಈ ಹಿಂದೆ ತೋರಿಸಿಕೊಡಲಾಗಿದೆ.—

ಹರಿಹರನನ್ನು ಕರಣಿಕನನ್ನಾಗಿ ನಿಯಾಮಿಸಿಕೊಂಡಿದ್ದವನು ಕ್ರಿ. ಶ. ೧೧೪೧ ರಿಂದ ೧೧೭೩ ರಲ್ಲಿ ಆಳಿದ ಹಳೇಬೀಡಿನ ೧ ನೇ ನರಸಿಂಹ ಬಲ್ಲಾಳನೆಂಬುದು ಸರಿಯಷ್ಟೇ. ಆ ಹಳೇಬೀಡಿನಿಂದ ಹರಿಹರನು ಹೆಚ್ಚಾದರೆ ತನ್ನ ೨೫ ರಷ್ಟರ ವಯಸ್ಸಿನೊಳಗಾದರೂ ಹೋಗಿರಬೇಕು ಎಂದು

ಟಿ:—೧೦ ಶರಣಸಾಹಿತ್ಯ ಸಂಪುಟ ೨, ಪುಟ ೪೨೪.

ಅಂತ್ಯಕ್ಕೆ ಸರಿ ಹೋಗುವುದರಿಂದ ಹರಿಹರನ ಜನ್ಮವು ಕ್ರಿ. ಶ. ೧೧೩೪ ಇಲ್ಲವೆ ೩೫ ರಲ್ಲೆಂದು ಸ್ಥಿರವಾಗುತ್ತದೆ.

ಶ್ರೀಮಾನ್ ಗೋವಿಂದಪೈಗಳವರು ಇದನ್ನು ಕ್ರಿ. ಶ. ೧೧೪೫ ರ ಸುಮಾರಿಗೆ ಊಹಿಸಿರುವಲ್ಲಿ ಏನೊಂದೂ ಸರಿಯಾದ ಕಾರಣವಿಲ್ಲ. ಹೀಗೆ ಊಹಿಸಿರುವುದರಿಂದಲೇ ಸದರೀಯವರು—ಹರಿಹರನು ಪಂಪಾಶತಕ, ಗಿರಿಜಾಕಲ್ಯಾಣಗಳನ್ನು ರಚಿಸಿದಾಗ ಬ್ರಾಹ್ಮಣನಿದ್ದನೆನ್ನುವ, ಹಾಗೂ ವೀರಶೈವವಿನ್ನೂ ಸ್ಥಾಪಿತವಾಗಿದ್ದಿಲ್ಲವೆನ್ನುವ ತೊಡಕಿನಲ್ಲಿ ಪೂರ್ಣ ಸಿಕ್ಕಿದ್ದಾರೆ.

ಆದರಾಗ ಬ್ರಾಹ್ಮಣನಾಗಿರಲಿಲ್ಲವೆಂಬುದನ್ನು, ಅವನಾ ಗ್ರಂಥಗಳಿಂದಲೇ ಮೊದಲು ಸಪ್ರಮಾಣವಾಗಿ, ಸವಿಸ್ತಾರವಾಗಿ ತಿಳಿಸಲಾಗಿದೆ. ಇನ್ನು ಪಂಪಾಶತಕದ ಬಳಿಕ ಗಿರಿಜಾಕಲ್ಯಾಣವು ರಚಿತವಾಗಿರುವುದರಿಂದ, ಈ ಕಾವ್ಯದ ರಚನೆಯನ್ನು ಕ್ರಿ. ಶ. ೧೧೫೪ರಿಂದ ಮುಂದೆ ಇಟ್ಟುಕೊಳ್ಳುವುದೇ ಯುಕ್ತಿಯುಕ್ತವಾಗುತ್ತದೆ.

'ಹರಿಹರನು ಅಕಾಲಮರಣಕ್ಕೆ ತುತ್ತಾಗದೆ ಪ್ರಾಯಃ ಸಂಪೂರ್ಣಾಯುಷ್ಯವುಳ್ಳವನಾಗಿದ್ದನೆಂದು ಆತನ ಕಾವ್ಯಸೃಷ್ಟಿಯಿಂದಲೇ ಊಹಿಸಲವಕಾಶವಿದೆ'[೧೩]ಯೆಂದು ನಾನೊಂದು ಸಾರಿ ಬರೆದಿದ್ದೆನು. ಗೋವಿಂದಪೈಗಳವರದೂ ಹೀಗೇ ಅಭಿಪ್ರಾಯವಿದೆ. ಒಟ್ಟು ಹರಿಹರನ ಆಯುಷ್ಯವು ೧-೩ ವರುಷ ಹೆಚ್ಚು ಕಡಿಮೆ ೬೫ ವರುಷವೆಂದು ಇಟ್ಟುಕೊಳ್ಳಲು ಅಭ್ಯಂತರವಿಲ್ಲ. ಇದಕ್ಕೆ ಮುಂದಾಗಲಾರದು. ಇಂತಾದರೆ, ಹರಿಹರನು ಕ್ರಿ. ಶ. ೧೧೩೫ರಿಂದ ಕ್ರಿ. ಶ. ೧೨೦೦ರ ವರೆಗೆ ಜೀವಿಸಿದ್ದನು.

ಶಿವಗಣದ ರಗಳೆಗಳನ್ನು ಕ್ರಿ. ಶ. ೧೧೫೮ ರ ಮುಂದೆ ಬರೆಯಲಾರಂಭಿಸಿ, ತನ್ನ ಆಯುಷ್ಯದೊಳಗೆ ಎಂದಾದರೂ ಮುಗಿಸಿರಬಹುದು.

ಬಸವಣ್ಣನವರ ಕೀರ್ತಿಯು ಅವರ ಜೀವನ ಕಾಲದಲ್ಲೇ ಜಗತ್ತನ್ನು ವ್ಯಾಪಿಸಿತ್ತೆಂದು ಹರಿಹರನೇ ಆ ಬಸವರಾಜದೇವ ರಗಳೆಯಲ್ಲಿಯ "ಬಸವನ ಪುಣ್ಯಕೀರ್ತಿಲತೆ ಬೇರ್ವರಿಯಿತ್ತು...' ಎಂಬ ಪದ್ಯದಲ್ಲಿ ಅದ್ವಿ

---

ಟಿ:— ೧೩ ೧೯೩೮ನೇ ಶಿವಾನುಭವ ಪತ್ರಿಕೆ, ಪುಟ ೬೩೪.

ತೀಯ ಶೈಲಿಯಿಂದ ವರ್ಣಿಸಿದ್ದಾನೆ. ಬಸವಣ್ಣನವರು ಕ್ರಿ. ಶ. ೧೧೬೭ ರ ಪೂರ್ವಭಾಗದಲ್ಲಿ[೧೪] ಶಿವೈಕ್ಯವಾದರೆಂದು ಗೋವಿಂದ ಪೈಗಳು ತಿಳಿಸಿರುತ್ತಾರೆ. ಆಗ್ಗೆ ಶಿವಶರಣರು ಕರ್ಣಾಟಕದ ತುಂಬಾ ವಿಶೇಷವಾಗಿ ಸಂಚರಿಸುತ್ತಿದ್ದರೆಂಬುದು ಹರಿಹರನ ರಗಳೆಗಳಿಂದಲೂ ವೀರಶೈವ ಪುರಾಣಗಳಿಂದಲೂ ತಿಳಿದುಬರುತ್ತದೆ. ಹರಿಹರನು ತಾನು ಅನುಷ್ಠಾನಪರನಾದ ಪ್ರಯುಕ್ತ ಎತ್ತಲು ಹೋಗುತ್ತಿರಲಿಲ್ಲವಾದರೂ, ಪ್ರಸಿದ್ಧವಾದ ಪಂಪಾಕ್ಷೇತ್ರಕ್ಕೆ ಬಂದು ಬಂದು ಹೋಗುತ್ತಿದ್ದ ಆ ಆ ಶರಣರ ಮುಖದಿಂದೆಲ್ಲಾ ಆ ಬಸವಣ್ಣನವರ ವಿಶಿಷ್ಟಚರಿತ್ರೆಯನ್ನು ತಿಳಿತಿಳಿದು ಆನಂದಪಡುತ್ತಿದ್ದನು. ಶಿವಶರಣರಲ್ಲಿ ಅತುಲವಾದ ಭಕ್ತಿವಿಶ್ವಾಸಗಳನ್ನಿಟ್ಟು ವೊದಲೇ ಅವರ ಚರಿತ್ರವನ್ನು ಬರೆಯುತ್ತಿದ್ದ ಹರಿಹರನು, ತನ್ನಷ್ಟೇ ಯೋಗ್ಯತೆಯುಳ್ಳ ಬಸವಣ್ಣನವರು ಕಾಯುವಾಗಲು, ಬಹು ದಿವಸ ತಡೆಯಲಾರದೆ ಎಂದರೆ ಅವರು ಶಿವೈಕ್ಯವಾದ ೨-೩ ವರ್ಷಗಳೊಳಗೆ ಅವರಾ ಮಹಿಮಾಸಂಪತ್ತಿನ ಕಾರ್ಯಕಲಾಪಗಳನ್ನು ನೆನೆನೆನೆದು, ಒಳ್ಳೇ ತಾದಾತ್ಮ್ಯತೆಯಿಂದ ಬರೆಯತೊಡಗಿ ಅದ್ವಿತೀಯವಾದ "ಬಸವರಾಜದೇವರ ರಗಳೆ" ಯೆಂಬ ಕಾವ್ಯವನ್ನಾಗಿ ಮಾಡಿಟ್ಟನು. ಅಂತೇ ಆ ಕಾವ್ಯದಲ್ಲಿ ಬಸವಣ್ಣನವರ ಚರಿತೆಯ ತುಂಬಾ ಸ್ವಾಭಾವಿಕತೆ-ಸಹಜ ಸುಂದರತೆ ಪುಟವಿಟ್ಟು ಮೂಡಿದೆ. ಇದಿರಲಿ. ಒಟ್ಟು ಬಸವರಾಜದೇವರ ರಗಳೆಯು ಕ್ರಿ. ಶ. ೧೧೭೦ ರಲ್ಲಿ ರಚಿತವಾಗಿದೆಯೆಂದೂ, ಇದೇ ಸಮಯದಲ್ಲೇ ಅಥವಾ ಇದಕ್ಕೆ ಹಿಂದೋಮುಂದೋ ಮಹಾದೇವಿಯಕ್ಕನ ರಗಳೆಯೂ ರಚಿತವಾಯಿತೆಂದೂ ನಿರ್ಣಯಾತ್ಮಕವಾದ ಅಭಿಪ್ರಾಯಪಡುತ್ತೇವೆ.

ಬಸವೇಶ್ವರನು ಕ್ರಿ. ಶ. ೧೧೩೦ ರಲ್ಲೋ ಅದರ ೧-೨ ವರ್ಷಗಳ ಹಿಂದೋ ಹುಟ್ಟಿ,[೧೫] ೧೧೬೭ ರ ಪೂರ್ವಭಾಗದಲ್ಲಿ ಐಕ್ಯವಾದನು.

ಹರಿಹರನು ಕ್ರಿ. ಶ. ೧೧೨೫ ರಲ್ಲಿ ಹುಟ್ಟಿ ೧೧೯೦ ರಲ್ಲಿ ಶಿವೈಕ್ಯವಾದನು. ಈ ದೃಷ್ಟಿಯಿಂದ ಬಸವೇಶ್ವರನಿಗೆ ಹರಿಹರನು ಕಿರಿಯ ಸಮಕಾಲಿಕನಾಗುವನಾದರೂ, ಅವನಿಗೆ ವಯಸ್ಸಿನಿಂದ ಕೊಂಚಮಟ್ಟಿಗೆ ಹಿರಿಯನೂ ಆಗುತ್ತಾನೆ.

---

ಟಿ:— ೧೪ ಶರಣಸಾಹಿತ್ಯ ಸಂಪುಟ ೨, ಪುಟ-೩೮೦.

ಟಿ:— ೧೫ ಅದೇ ಪತ್ರಿಕೆ, ಪುಟ ೪೭೭.

ಹರಿಹರನು ಹಳೇಬೀಡನ್ನು ಬಿಟ್ಟು, ಹಂಪೆಯನ್ನು ಬಂದು ಮುಟ್ಟಿದೊಡನೆ ಲಿಂಗವಂತನಾಗಿ, ಪಂಪಾಶತಕವನ್ನು ರಚಿಸಿರುವನೆಂದು ನಿಶ್ಚಯಿಸಿದೆ. ಈ ಶತಕದ ರಚನೆಯನ್ನು ಕ್ರಿ. ಶ. ೧೧೫೩ ರ ಅಂತ್ಯಕ್ಕೆ ಸರಿಪಡಿಸಿರುವುದರಿಂದ, ಹರಿಹರನು ಹಳೇಬೀಡು ರಾಜಧಾನಿಯನ್ನು ೧೧೫೩ ಮಧ್ಯಭಾಗದ ಬಳಿಕ ಬಿಟ್ಟಿದ್ದಾನೆ- ಸುಮಾರು ಹರಿಹರನು ತನ್ನ ೨೫ ರ ವಯಸ್ಸಿನಿಂದ ೨೮ ರ ವಯಸ್ಸಿನ ವರೆಗೆ, ಎಂದರೆ ಕ್ರಿ. ಶ. ೧೧೫೦ ರಿಂದ ಮುಂದೆ ೧೧೫೩ ರ ಉತ್ತರಾರ್ಧದ ವರೆಗೆ ಮಾತ್ರ ಹಳೇಬೀಡಿನ ೧ನೇ ನರಸಿಂಹಬಲ್ಲಾಳನಲ್ಲಿ ಕರಣಿಕನಾಗಿದ್ದನೆಂದು ಹೇಳಲು ಅಡ್ಡಿಯಿಲ್ಲ.

---

## ಸಂಗೀತ ವಚನಗಳು.

(ಲೇಖಕ:— ಪಿ. ವ್ಹಿ. ಪಾಟೀಲ. ಸಂಗೀತ ಶಿಕ್ಷಕ ವಿಜಾಪುರ.)

೭೭

ರಾಗ:- ದುರ್ಗಾ ತಾಲ:. ತ್ರಿತಾಲ

(ಮನಮೋಹನ ಮುರಲೀವಾಲಾ ಎಂಬಂತೆ)

ಹೊಲೆಯು ಹೊಲಬಿಗನಾದೊಡೆ ।
ಅವನ ಹೊರೆಯುಲಿಪ್ಪುದು ಲೇಸು ॥ಪ॥
ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ ।
ಹೊಲಬುಗೆಡಬೇಡ ಶಿವಶರಣೆನ್ನಿರಯ್ಯಾ ।
ನಮ್ಮ ಕೂಡಲ ಸಂಗನ ಮಹಾಮನೆಯುಲು ।
ಮಾದಾರ ಚನ್ನಯ್ಯ ಹೊಲಬಿಗನಯ್ಯಾ ॥ ೧ ॥

(ಬಸವಣ್ಣ)

೭೮

(ರಾಗ:- ಭೈರವಿ ತಾಲ:- ತ್ರಿತಾಲ

(ಹರನೇ ಗೋವಿನ ಜನ್ಮವು ಸಾಕು......ಎಂಬಂತೆ)

ಲೋಕದ ಡೊಂಕ ನೀವೇಕೆ ತಿದ್ದುವಿರಿ ।
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ॥ಪಲ್ಲ॥
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ ।
ನೆರೆಮನೆಯ ದುಃಖಕ್ಕೆ ಅಳುವರ ।
ಮೆಚ್ಚ, ಕೂಡಲಸಂಗಮದೇವಾ ॥ ೧ ॥

(ಬಸವಣ್ಣ)

# ಶರಣವಾಣಿ.

(ಲೇಖಕರು:—ಪ್ರಭು ಸ್ವಾಮಿಗಳು ಆನಂದಾಶ್ರಮ ಗದಗ)

ಕರೆಯುತಿದೆ ! ಶರಣವಾಣಿ
ವರವೀರ ಪುತ್ರರಿರಾ !
ಹರಸುತಿದೆ ! ಕರವೆತ್ತಿ
ಕರುನಾಡ ಕಂದರಿರಾ !
ಕಿವಿಗೊಟ್ಟು ಕೇಳಿ. ಕಣ್ದೆರೆದು ನೋಡಿ.

---

ಓ ತ್ಯಾಗಿ ! ಓ ಯೋಗಿ !
ಓ ಕವಿ ! ಓ ಕೃಷಿಕ !
ಓ ಭವಿ ! ಓ ಬಕುತ ! ಬನ್ನಿ.
ಬಾಳಿನಲಿ ಬೆಳಕನ್ನು ಕಾಣಿ.
ಇಲ್ಲಿ! ಈ ವಾಣಿಯಲ್ಲಿ.

---

ಕಾಂತಿ ಕಂಗಳ ನೋಟ,
ಶಾಂತಿ ಸಮತೆಯ ಪಾಠ,
ಭ್ರಾಂತಿ ನೀಗುವ ಮಾಟ,
ಕ್ರಾಂತಿ ನೀತಿಯು ಪೀಠವಿದೆ,
ಇಲ್ಲಿ ! ಈ ವಾಣಿಯಲಿ.

---

ಎಲ್ಲರಿಗು ಎಡೆ ಇಹುದು.
ಸಲ್ಲಲಿತ ಸೊಬಗಿಹುದು.
ಕುಲ್ಲತನ ಬಿಡಿಸುವದು.
ಪಲ್ಲವಿಪ ಬಲವಿಹುದು.
ಇಲ್ಲಿ ! ಈ ವಾಣಿಯಲ್ಲಿ.

ಧರ್ಮದಾ ಹೊಲಬನು,
ಕರ್ಮದಾ ಕುಶಲವನು.
ಸರ್ವರೂ ಅರಿವವೋಲ್
ಮರ್ಮದಿಂ ಪೇಳಿಹುದು.
ಇಲ್ಲಿ ಈ ವಾಣಿಯಲ್ಲಿ.

---

ಆ ಚೆನ್ನ, ಬಸವರಸ,
ಆ ದೇವ ಪ್ರಭು, ಸಿದ್ಧ,
ಆ ಮಹಾದೇವಿಯರ್ಕಳ್
ನಡೆದು ನುಡಿದೊಲವಿದೆ
ಇಲ್ಲಿ ! ಈ ವಾಣಿಯಲ್ಲಿ.

---

ವಿಶ್ವಮೋಹವಗೊಳಿಪ
ಈ ವಾಣಿ ವೀಣೆಯನು
ಪಿಡಿದು ಪಾಡುತಲಿ
ಏರಿಸಿ ಹಾರಿಸಿ
ಶರಣ ಬಾವುಟವ !

---

ಕರೆಯುತಿದೆ ಶರಣವಾಣಿ
ವರವೀರ ಪುತ್ರರಿರಾ !
ಹರಸುತಿದೆ ಕರವೆತ್ತಿ
ಕರುನಾಡ ಕಂದರಿರಾ !
ಕಿವಿಗೊಟ್ಟು ಕೇಳಿ. ಕಣ್ದೆರೆದು ನೋಡಿ.

---

# ಶಿವಾನುಭವ ಶಬ್ದಕೋಶ.

(ವಚನ ಶಾಸ್ತ್ರದಲ್ಲಿ ವಿಶೇಷಾರ್ಥವುಳ್ಳ ಪಾರಿಭಾಷಿಕ ಶಬ್ದಗಳು ಅನೇಕ ಬರುವದುಂಟು. ಅವುಗಳ ಭಾವವು ವಾಡಿಕೆಯಾಗಿ ಜನರಿಗೆ ಅಪರಿಚಿತವಾಗಿರುತ್ತದೆ. ವಚನಗಳ ಅರ್ಥವು ತಿಳಿಯದಿರಲಿಕ್ಕೆ ಇದೊಂದು ಮುಖ್ಯ ಕಾರಣವಾಗಿರುತ್ತದೆ. ಆದ್ದರಿಂದ ಇಂಥ ಕಠಿಣ ಶಬ್ದಗಳನ್ನು ಆಯ್ದು ಅವುಗಳ ಅರ್ಥವನ್ನು ವಿವರಿಸುವ ಒಂದು ಕೋಶವನ್ನು ಸಿದ್ಧಪಡಿಸಬೇಕೆಂದು ಬಹುಜನರ ಕೋರಿಕೆ ಇರುವದು ನಮಗೆ ಕಂಡುಬಂದಿರುತ್ತದೆ. ಆದುದರಿಂದ 'ಶಿವಾನುಭವ ಶಬ್ದಕೋಶ' ಎಂಬ ಹೆಸರನ್ನಿಟ್ಟು ಇಂಥ ಒಂದು ಕೋಶವನ್ನು ಸಿದ್ಧಪಡಿಸಲೆಣಿಸಿ ನಾವು ಈ ಪ್ರಯತ್ನವನ್ನು ಈಗ ಆರಂಭಿಸಿದ್ದೇವೆ. ವಚನಶಾಸ್ತ್ರದಲ್ಲಿ ಬೇರೆ ಬೇರೆ ಸಂದರ್ಭಗಳ ಪ್ರಕಾರ ಶಬ್ದಗಳಿಗೆ ಭಿನ್ನ ಭಿನ್ನ ಅರ್ಥಗಳಿರುತ್ತವೆ. ಅವುಗಳೆಲ್ಲವನ್ನು ಒಳಕೊಳ್ಳುವಂತೆ ಕೋಶವನ್ನು ರಚಿಸುವದು ಬಹು ದುಸ್ತರವಾದದ್ದು. ಆದರೆ ವಾಚಕರು ಇದರಲ್ಲಿ ನಮಗೆ ಸಹಕರಿಸಿದಲ್ಲಿ ಸರಿಯಾಗಿ ಈ ಕಾರ್ಯವು ಜರಗಬಹುದೆಂದು ನಾವು ಎಣಿಸಿದ್ದೇವೆ. ಈ ಕೋಶವು ಸದ್ಯಕ್ಕೆ ಪೂರ್ಣ ವಿವರಣೆಯುಳ್ಳದ್ದೆಂದು ಯಾರೂ ಭಾವಿಸಕೂಡದು. ಇದರಲ್ಲಿ ದೋಷಗಳಿದ್ದರೆ ವಾಚಕರು ಅವುಗಳನ್ನು ನಮ್ಮ ಲಕ್ಷಕ್ಕೆ ಅವಶ್ಯವಾಗಿ ತರಬೇಕೆಂದು ನಮ್ಮ ವಿನಂತಿ ಇದೆ.)

**ಸಂಪಾದಕ.**

(೧) ಬಯಲು, ನಿರವಯ, ಶೂನ್ಯ:— ಇವು ಮೂರು ಪರ್ಯಾಯ ಶಬ್ದಗಳು. ಅವೆಲ್ಲವೂ ಒಂದೇ ಅರ್ಥವನ್ನು ಸೂಚಿಸುತ್ತಿವೆ. ಜಗತ್ತು ಪ್ರಕಟವಾಗದ ಸ್ಥಿತಿಯನ್ನು ವಚನಕಾರರು ಬಯಲೆಂತಲೂ, ಶೂನ್ಯವೆಂತಲೂ, ನಿರವಯವೆಂತಲೂ ಕರೆಯುತ್ತಾರೆ. ಜಗತ್ತಿನಲ್ಲಿ ಇಂದ್ರಿಯಗಳಿಗೆ ಗೋಚರವಾಗುವ ಗುಣ, ಕ್ರಿಯೆ, ಶಕ್ತಿ ಮೊದಲಾದವು ಈ ಕಾಲದಲ್ಲಿ ಗೂಢ ಸ್ಥಿತಿಯಲ್ಲಿ ಇರುತ್ತವೆ. ಈ ಸ್ಥಿತಿಯು ಅಲೆಗಳಿಲ್ಲದ ಸಮುದ್ರದೋಪಾದಿ ಎಂದು ಇದನ್ನು ವಚನಕಾರರು ವರ್ಣಿಸುವದುಂಟು. ಅಂದರೆ

ಇದು ಅತ್ಯಂತ ಶಾಂತ ಸ್ತಬ್ಧ ಸ್ಥಿತಿಯು. ಏನೇನೂ ತೋರದ ಸ್ಥಿತಿಯು. ಇದನ್ನು ವಚನಕಾರರು 'ಇಲ್ಲವೆ' ಎಂತಲೂ ಬೇರೊಂದು ' ಶಬ್ಧದಿಂದ ಕರೆಯುತ್ತಾರೆ. ನಾಸ್ತಿಕರು ಪರಮಾತ್ಮನು 'ಶೂನ್ಯ' ಎಂದರೆ ಇಲ್ಲವೇ ಇಲ್ಲ ಎಂದು ಅಭಿಪ್ರಾಯಪಡುತ್ತಾರೆ. ಆದರೆ ವಚನಕಾರರಲ್ಲಿ ಈ ಭಾವವಿಲ್ಲ. ಜಗತ್ತು, ಪರಮಾತ್ಮ ಅಥವಾ ಪರಬ್ರಹ್ಮವಸ್ತು ಇವುಗಳಿಗೆ ಅಸ್ತಿತ್ವವು ಇದೆ ಎಂತಲೇ ಅವರ ಭಾವವು. ಆದರೆ ಮೂಲಸ್ಥಿತಿಯಲ್ಲಿ ಮಾತ್ರ ಅವುಗಳಿಗೆ ಪ್ರಕಟತೆ ಇಲ್ಲೆಂದು ತೋರಿಸುವ ಅಭಿಪ್ರಾಯದಿಂದ ಅವರು ಈ ತೆರದ ಶಬ್ದಗಳನ್ನು ಉಪಯೋಗಿಸುತ್ತಾರೆ. ಮೊದಲು ಬಯಲು. ತರುವಾಯ ಆ ಬಯಲಿನೊಳಗಿಂದಲೇ ಜಗತ್ತು ಪ್ರಕಟವಾಗುತ್ತದೆ. ಮತ್ತು ಕಡೆಗೆ ಈ ಬಯಲಿನಲ್ಲಿಯೇ ಅದು ಲಯವಾಗುತ್ತದೆ. ಶೂನ್ಯ, ನಿರವಯ, ಬಯಲನ್ನು ಪರಬ್ರಹ್ಮವಸ್ತು ಎಂದು ವೇದಾಂತಿಗಳ ಶಬ್ದದಿಂದ ಕರೆಯಬಹುದು.

(೨) ಬ್ರಹ್ಮಾಂಡ ಜಗತ್ತುಃ— ಬಯಲು ಪ್ರಕಟವಾಗಲು, ಅದು ಬ್ರಹ್ಮಾಂಡ, ಜಗತ್ತು ಈ ಶಬ್ದಗಳಿಂದ ಕರೆಯಲ್ಪಡುತ್ತಿದೆ. ಇದು ಅನೇಕ ತರದ ಜೀವರಾಶಿಗಳನ್ನು ಒಳಕೊಂಡಿರುತ್ತದೆ.

(೩) ಪಿಂಡ, ಅಂಗ, ಶರೀರ, ದೇಹಃ— ಇವೆಲ್ಲವೂ ಪರ್ಯಾಯ ಶಬ್ದಗಳೆಂದು ಹೇಳಬಹುದು. ಆದರೆ ಉಪಯೋಗದಲ್ಲಿ ದೇಹ ಈ ಶಬ್ದವು ವಾಡಿಕೆಯಾಗಿ ಮನುಷ್ಯನಿಗೆ ಮಾತ್ರ ಅನ್ವಯಿಸುತ್ತದೆ. ಉಳಿದ ಮೂರು ಶಬ್ದಗಳು ಅದಕ್ಕೂ ಹೆಚ್ಚು ವ್ಯಾಪಕಾರ್ಥವುಳ್ಳವಾಗಿವೆ. ಅಂದರೆ ಮನುಷ್ಯನಿಗಷ್ಟೇ ಅಲ್ಲ ಇತರ ವಸ್ತುಗಳಿಗೂ ಅವು ಅನ್ವಯಿಸುತ್ತವೆ. ಬ್ರಹ್ಮಾಂಡ ಎಂಬುದು ಜಗತ್ತನ್ನೆಲ್ಲ ನಿರ್ದೇಶಿಸುತ್ತಿದೆ. ಆದರೆ ಪಿಂಡ ಈ ಶಬ್ದವು ಜಗತ್ತಿನಲ್ಲಿರುವ ಪ್ರತ್ಯೇಕ ವಸ್ತುವನ್ನು ನಿರ್ದೇಶಿಸುತ್ತಿದೆ. ಶರೀರ ಮತ್ತು ಅಂಗ ಇವು ಪರ್ಯಾಯ ಶಬ್ದಗಳಾಗಿವೆ. ಅವು ಇಂದ್ರಿಯಗಳಿಗೆ ಗೋಚರವಾಗುವಂಥವುಗಳು, ಕ್ರಿಯಾಯುಕ್ತವಾದವುಗಳು, ಜೀವಮಯವಾದವುಗಳು. ಅಂಗ ಇದನ್ನು ಜೀವ ಎಂತಲೂ ಆಗಿಂದಾಗ್ಗೆ ಹೇಳುವದುಂಟು.

(೪) ಕೈ, ಕ್ರಿಯೆ, ಮಾಟಃ— ಮನುಷ್ಯನ ಕಾರ್ಯಗಳು ಈ ಶಬ್ದಗಳಿಂದ ಕರೆಯಲ್ಪಡುತ್ತಿವೆ. ಇವೆಲ್ಲವೂ ಪರ್ಯಾಯ ಶಬ್ದಗಳು.

'ಮಾಡು' ಎಂಬ ಧಾತುವಿನಿಂದ 'ಮಾಟ' ಈ ಶಬ್ದವು ಬಂದಿದೆ. ವಚನಕಾರರು ಈ ಶಬ್ದವನ್ನು ಕ್ರಿಯೆ ಈ ಅರ್ಥದಲ್ಲಿ ಉಪಯೋಗಿಸುತ್ತಾರೆ. ಹಾಗೆಯೇ ಅವರು ಕ್ರಿಯೆ ಈ ಶಬ್ದದ ಬದಲು 'ಕ್ರಿ' ಎಂದು ಸಂಕ್ಷೇಪವಾಗಿಯೂ ಆಗಿಂದಾಗ್ಗೆ ಉಪಯೋಗಿಸುವದುಂಟು.

(೫) ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳುಃ— ಇವು ಶರೀರದಲ್ಲಿ ಮಾಡಲ್ಪಟ್ಟ ಮೂರು ವಿಭಾಗಗಳಿವೆ. ಇವುಗಳು ತನುತ್ರಯುಗಳೆಂತಲೂ ಕರೆಯಲ್ಪಡುತ್ತಿವೆ. ಇವುಗಳ ವ್ಯಾಖ್ಯೆಗಳು ವಚನಶಾಸ್ತ್ರಸಾರ ಭಾಗ ೨, ಪುಟ ೧೦೧ ರಲ್ಲಿ ಕೊಡಲ್ಪಟ್ಟವೆ. ಪಂಚಭೂತಗಳಿಂದಾದ ಬಾಹ್ಯ ಶರೀರವೇ ಸ್ಥೂಲಶರೀರವು. ಇದು 'Physical body' ಎಂದು ಹೇಳಬಹುದು. ಜ್ಞಾನೇಂದ್ರಿಯ, ಪಂಚ ವಿಷಯಗಳು, ವಾಯು ಪಂಚಕಗಳು, ಮನ, ಬುದ್ಧಿ ಇವುಗಳುಳ್ಳದೇ ಸೂಕ್ಷ್ಮಶರೀರವು. ಇದು "Mental body" ಎಂದು ಹೇಳಬಹುದು. 'ಕಾರಣ ಶರೀರ'ವು ಮೂಲಾತ್ಮವುಳ್ಳದು. ಉಳಿದ ಶರೀರಗಳಲ್ಲಿ ಅದು ಚೈತನ್ಯವನ್ನು ಉಂಟು ಮಾಡುವಂತಹದು. ಉಳಿದ ಶರೀರಗಳಲ್ಲಿ ಆಗುವ ಅನುಭವಗಳನ್ನೆಲ್ಲ ಅದು ತನ್ನಲ್ಲಿ ಸಂಗ್ರಹಿಸಿಕೊಳ್ಳುತ್ತಿದೆ. ಮತ್ತು ಅವುಗಳಿಗೆ ಬೇಕಾದ ಕಾಲದಲ್ಲಿ ಅದರ ಉಪಯೋಗವನ್ನು ಅಂದರೆ ಅನುಭವವನ್ನು ಒದಗಿಸಿಕೊಡುತ್ತಿದೆ. ಅದು "*Causal body*" ಎಂದು ಹೇಳಬಹುದು, ಸ್ಥೂಲ ಶರೀರದಲ್ಲಿ ಕ್ರಿಯೆಯು ಗೋಚರವಾಗುವಂಥ ಸ್ವರೂಪದಲ್ಲಿರುತ್ತದೆ. ಸೂಕ್ಷ್ಮ ಶರೀರದಲ್ಲಿ ಮನಸ್ಸು ಬಹು ಪ್ರಬಲವಾದದ್ದು. ಆದರೆ ಕಾರಣ ಶರೀರದಲ್ಲಿ ಜ್ಞಾನವು ಸಂಗ್ರಹಿಸಲ್ಪಡುವದುಂಟು. ಅದು '*Sub-conscious State*' ಎಂದು ಹೇಳಬಹುದು.

(೬) ಅರಿವು, ಜ್ಞಾನಃ— ವಚನಕಾರರು ತಮ್ಮ ವಚನಗಳಲ್ಲಿ ಅರಿವು ಈ ಶಬ್ದವನ್ನು ಬಹಳ ಉಪಯೋಗಿಸುವದುಂಟು. ಅವರು ಜ್ಞಾನ ಮತ್ತು ಕ್ರಿಯೆ ಇವುಗಳನ್ನು ಭಿನ್ನವಾಗಿ ಎಣಿಸುವದಿಲ್ಲ. ಅವರ ದೃಷ್ಟಿಯಲ್ಲಿ ಅರಿವು ಎಂದರೆ ಕೇವಲ ತಿಳುವಳಿಕೆ ಮಾತ್ರವಲ್ಲ. ಕ್ರಿಯೆಯಿಂದಾದ ಅನುಭವವೂ ಅದರಲ್ಲಿ ಕೂಡಿದೆ. ತಿಳುವಳಿಕೆಯು ಕ್ರಿಯೆಯಲ್ಲಿಯೇ ತೋರಬೇಕು. ಅದೇ ಅರಿವು, ಅಥವಾ ಜ್ಞಾನ. ಕ್ರಿಯೆಯಲ್ಲಿ ಅದು ತೋರದೆ ಹೋದರೆ ಅದು ಅರಿವೂ ಅಲ್ಲ, ಅಥವಾ ಜ್ಞಾನವೂ ಅಲ್ಲ. ಅದು ಬರಿಯ ತರ್ಕ, ವಿಚಾರ, ನುಡಿ ಎಂದು ಅವರು ಭಾವಿಸುತ್ತಾರೆ.

(೭) ಅನುಭಾವ, ಅನುಭಾವಿಗಳು; ಅನುಭವ, ಶಿವಾನುಭವ, ಶಿವಾನುಭವಿಗಳು; ಅನುಭಾವ ಗೋಷ್ಠಿ:— ಈ ಬಗೆಯ ಶಬ್ದಗಳು ವಚನಗಳಲ್ಲಿ ಪದೇ ಪದೇ ಬರುತ್ತಿವೆ. ಮನುಷ್ಯನು ತಾನು ಮೊದಲು ವಿಚಾರ ಮಾಡಬೇಕು. ವಿಚಾರ ಮಾಡಿದ ಬಳಿಕ ಅವನು ಅದರಂತೆ ಆಚರಿಸಬೇಕು. ಹೀಗೆ ಆಚರಿಸುವದೇ ಅನುಭಾವವು. ಆದರೆ ಹೀಗೆ ಆಚರಿಸುವ ಪೂರ್ವದಲ್ಲಿ ಅವನು ಬಲ್ಲವರೊಡನೆ ತಾನು ತಿಳಿದದ್ದರ ಬಗ್ಗೆ ಚರ್ಚಿಸಬೇಕು. ಅಥವಾ ಅವರಿಂದ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳಬೇಕು. ಹೀಗೆ ತಿಳಿದುಕೊಳ್ಳುವ ಕಾರ್ಯಕ್ಕೆ 'ಶಿವಾನುಭವ' ಎಂತಲೂ ಹೆಸರು ಇದೆ. ಉದಾಹರಣಾರ್ಥವಾಗಿ, ಬಸವೇಶ್ವರನು ಶರಣರೊಡನೆ ಶಿವಾನುಭವ ಮಂಟಪದಲ್ಲಿ ಶಿವಾನುಭವ ಸದ್ಗೋಷ್ಠಿಯನ್ನು ಮಾಡುತ್ತಿದ್ದನೆಂದು ಆಗಿಂದಾಗ್ಗೆ ವರ್ಣನೆಗಳು ಬರುತ್ತಿವೆ. ಈ ರೀತಿ ಆಚರಿಸುವವರು, ಅಂದರೆ ಮೊದಲು ಸ್ವಂತವಾಗಿ ವಿಚಾರ ಮಾಡುವದು, ಆಮೇಲೆ ತಾನು ವಿಚಾರ ಮಾಡಿದ್ದನ್ನು ತನ್ನವರೊಡನೆ ಚರ್ಚಿಸಿ ದೃಢಪಡಿಸಿಕೊಳ್ಳುವದು, ಹೀಗೆ ದೃಢಪಡಿಸಿಕೊಂಡು ಅದರಂತೆ ಆಚರಿಸುವದು, ಆಚರಿಸುವಲ್ಲಿ ತನಗುಂಟಾದ ಅನುಭವವನ್ನು ಹೆರರಿಗೆ ಹೇಳುವದು, ಅವರಿಗೆ ಹೇಳಿ ತನ್ನ ಮಾರ್ಗವನ್ನು ಹೆಚ್ಚಿಗೆ ಸುಧಾರಿಸಿಕೊಳ್ಳುವದು, ಈ ಎಲ್ಲ ಕಾರ್ಯಗಳನ್ನು ಮಾಡುವಂಥವರು ಶಿವಾನುಭವಿಗಳು. ಇದು ಬಸವಾದಿ ಶಿವಶರಣರು ಶಿವಾನುಭವ ಮಂಟಪದಲ್ಲಿ ಮೊದಲು ಜರಗಿಸುತ್ತಿದ್ದ ಕ್ರಮವು. ಈ ಪ್ರಕಾರ ಆಚರಿಸಿ ಅವರು ನುಡಿದ ವಾಕ್ಯಗಳೇ ವಚನಗಳಾಗಿವೆ. ಆ ವಚನಗಳನ್ನು ಓದಿ, ತಿಳಿದು, ನಡೆಯುವದೇ ಶಿವಾನುಭವವೆನಿಸಿಕೊಳ್ಳುತ್ತಿದೆ.

(೮) ಮಾರ್ಗ ಕ್ರಿ, ಮೀರಿದ ಕ್ರಿ:— ಕ್ರಿಯೆಗಳಲ್ಲಿ ಎರಡು ವಿಧಗಳಿವೆ. ಸ್ಥೂಲ ಶರೀರದಲ್ಲಿ ಮಾಡುವ ಕ್ರಿಯೆಗಳು ಮಾರ್ಗ ಕ್ರಿಗಳು. ಇವುಗಳು ಸಾಮಾನ್ಯ ಜ್ಞಾನವುಳ್ಳವರಿಗೆ ತಕ್ಕವುಗಳಾಗಿರುತ್ತವೆ ಇವು ಸ್ಥೂಲಾಚರಣೆಗಳು. ಆದರೆ ಅನುಭವದಿಂದ ಮರ್ಮವನ್ನು ತಿಳಿದುಕೊಂಡು ಅಂತರಂಗದಲ್ಲಿ ಅವುಗಳನ್ನು ದೃಢಪಡಿಸಿಕೊಂಡು ಆಚರಿಸಿದ್ದಾದರೆ, ಅವು ಮೀರಿದ ಕ್ರಿಯೆಗಳು. ಅವು ಅಂತರಂಗದ ಆಚರಣೆಗೆ ಸಂಬಂಧಿಸುತ್ತವೆ. ಭಕ್ತ, ಮಾಹೇಶ್ವರ, ಪ್ರಸಾದಿ ಸ್ಥಲಗಳಲ್ಲಿಯ ಆಚರಣೆಗಳು ಮಾರ್ಗಕ್ರಿಯೆಗಳೆಂತಲೂ, ಪ್ರಾಣಲಿಂಗಿ, ಶರಣ, ಐಕ್ಯ ಈ ಸ್ಥಲಗಳಲ್ಲಿಯ ಆಚರಣೆಗಳು ಮೀರಿದ ಕ್ರಿಯೆಗಳೆಂತಲೂ ಹೇಳಲ್ಪಡುತ್ತಿವೆ.

(೯) ಮಾಯೆ, ಮಾಯಾಶಕ್ತಿಃ – ಮನುಷ್ಯನಲ್ಲಿ ಕೆಡಕುಮಾರ್ಗ ವನ್ನು ಕೈಕೊಳ್ಳುವ ಪ್ರವೃತ್ತಿಯು ಇರುತ್ತದೆ. ಇದಕ್ಕೆ ಮಾಯೆಯೇ ಕಾರಣವು. ಅದೊಂದು ಶಕ್ತಿ ಎಂತಲೂ ಭಾವಿಸಲ್ಪಡುತ್ತಿದೆ. ಶುದ್ಧಾದ್ವೈತಿ ಗಳಲ್ಲಿ ಮಾಯೆಗೆ ಒಂದು ವಿಶೇಷಾರ್ಥವಿದೆ. ಜಗತ್ತು ಸುಳ್ಳೆಂದು ಅವರು ಹೇಳುತ್ತಾರೆ. ಇದೇ ಅವರ ಪ್ರಕಾರ ಮಾಯೆಯು. ಆದರೆ ಜಗತ್ತು ಸುಳ್ಳೆಂದು ವೀರಶೈವರು ಭಾವಿಸುವದಿಲ್ಲ. ಅದಕ್ಕೆ ಅಸ್ತಿತ್ವವಿದೆ ಎಂದು ಅವರು ಭಾವಿಸುತ್ತಾರೆ. ಕ್ರಿಯೆಗಳಲ್ಲಿ ಕೆಡಕು ಮತ್ತು ಒಳ್ಳೆಯದು ಹೀಗೆ ಇರುವದು ಕಂಡುಬರುತ್ತಿದೆ. ಕೆಡುಕುತನಕ್ಕೆ ಪ್ರೇರಣೆ ಮಾಡುವಂತಹದೇ ಮಾಯೆಯು. ವೀರಶೈವನು ಇದನ್ನು ಮೊದಲು ದೂರಮಾಡಬೇಕು. ಇದನ್ನು ದೂರಮಾಡಿದಲ್ಲಿ ಅವನು ಲಿಂಗಧಾರಣೆಗೆ ಅರ್ಹನಾಗುತ್ತಾನೆ. ವಚನಕಾರರು ಸಂಸಾರಹ್ಯೇಯಸ್ಥಲ, ಮಾಯಾವಿಡಂಬನಸ್ಥಲ ಎಂದು ಒಂದು ಸ್ಥಲವನ್ನು ಕಲ್ಪಿಸಿ ಮನುಷ್ಯನು ಈ ಮಾಯೆಯಿಂದ ದೂರಾ ಗಬೇಕೆಂದು ಮೊದಲು ಉಪದೇಶಿಸುವದುಂಟು.

(೧೦) ಸಂಸಾರಃ— ಸಂಸಾರವು ಮಾಯಾಮಯವಾದದ್ದೆಂದು ವಚನಕಾರರು ಅದನ್ನು ವರ್ಣಿಸುತ್ತಾರೆ. ಅದು ತ್ಯಾಜ್ಯವೆಂತಲೂ ಅವರು ಹೇಳುವದುಂಟು. ಆದರೆ ಅದು ಕೆಡಕಿನ ಕಡೆಗೆ ಒಯ್ಯುತ್ತಿದ್ದರೆ ಮಾತ್ರ ಅದನ್ನು ತ್ಯಜಿಸಬೇಕು. ಹೀಗೆ ಅವರು ಹೇಳುವಲ್ಲಿ ಹೆಂಡಿರು, ಮಕ್ಕಳು, ಬಂಧು ಬಳಗ, ಸ್ನೇಹಿತರು ಇವರನ್ನು ಬಿಟ್ಟುಬಿಡಬೇಕೆಂದು ಅವರ ಅಭಿಪ್ರಾಯವಲ್ಲ. ಇವರೊಡನೆ ಇದ್ದರೂ ಕೂಡ, ಮೋಕ್ಷ ಹೊಂದಲು ಶಕ್ಯವಿದೆಂದು ಅವರ ಅಭಿಪ್ರಾಯವಿರುತ್ತದೆ. ಆದುದರಿಂದ ಇವರು ತ್ಯಾಜ್ಯರಲ್ಲ. ಅವರ ದೃಷ್ಟಿಯಲ್ಲಿ ಸಂಸಾರವೆಂದರೆ ವಿಷಯ ಲಂಪಟತನವು. ಇದು ಮಾತ್ರ ತ್ಯಾಜ್ಯವು. ವಿಷಯಾಸಕ್ತನಾಗದೆ ಸದ್ಗು ಣವುಳ್ಳವನಾಗಿ ಆಚರಿಸಿದ್ದಾದರೆ ಇದು ಮನುಷ್ಯನನ್ನು ಉಚ್ಚಸ್ಥಾನಕ್ಕೆ ಒಯ್ಯುತ್ತಿದೆ. ಸಂಸಾರದಲ್ಲಿದ್ದರೂ ಹೀಗೆ ಆಚರಿಸಬೇಕೆಂದು ವಚನ ಕಾರರು ಸಂಸಾರಹ್ಯೇಯಸ್ಥಲದಲ್ಲಿ ಉಪದೇಶಿಸುತ್ತಾರೆ.

(೧೧) ನಾದ ಬಿಂದು ಕಲೆಗಳುಃ – ಶೂನ್ಯ ಅಥವಾ ಬಯಲು ಇದರಲ್ಲಿ ಮೊದಲು ನಾದವು ಉತ್ಪನ್ನವಾಗುತ್ತಿದೆ. ಜಗತ್ತು ಉಂಟಾಗ ಬೇಕೆಂಬ ಅಭಿಲಾಷೆಯೇ ಇದಕ್ಕೆ ಕಾರಣವು. ಈ ಅಭಿಲಾಷೆಯೇ ಚಿತ್ತು ವೆನಿಸಿಕೊಳ್ಳುತ್ತಿದೆ. ನಾದವೆಂದರೆ ಒಂದು ಬಗೆಯ ಅಲುಗಾಡುವಿಕೆಯು

(*Vibration*). ಈ ಅಲುಗಾಡುವಿಕೆಯಿಂದ ಬಿಂದುವು ಉದಯವಾಗುತ್ತಿದೆ. ಬಿಂದುವು ವಸ್ತುವೆಂದು ಹೇಳಬಹುದು. ಅದು ಸ್ಥೂಲವು. ಅದರಲ್ಲಿ ನಾದವಿದೆ. ಈ ನಾದವು ಈ ಬಿಂದುವಿಗೆ ಚೈತನ್ಯಕೊಡುತ್ತಿದೆಂದು ಹೇಳಬಹುದು. ಇವೆರಡೂ ಪರಸ್ಪರಾವಲಂಬಿಗಳು. ಅವು ಒಂದನ್ನೊಂದು ಬಿಟ್ಟು ಪ್ರಕಟವಾಗಲಾರವು. ಇವೆರಡೂ ಪ್ರಕಟವಾದ ಕೂಡಲೆ ಕಲೆಯು ಆ ವಸ್ತುವಿನಲ್ಲಿ ಉತ್ಪನ್ನವಾಗುತ್ತಿದೆ. ಈ ಕಲೆಯ ಮೂಲಕವಾಗಿಯೇ ವಸ್ತುವಿನ ಗುಣ, ರೂಪ, ಮೊದಲಾದವುಗಳು ತೋರುತ್ತಿವೆ. ಈ ನಾದ ಬಿಂದು ಕಲೆಗಳೆಲ್ಲವೂ ಯಾವಾಗಲೂ ಒಟ್ಟುಗೂಡಿ ವ್ಯವಹರಿಸುತ್ತಿವೆ. ಆದರೆ ಅವು ಮೂಲಚಿತ್ತುವಿನಲ್ಲಿ ಬೆರೆತಿರುತ್ತವೆ. ಈ ನಾಲ್ಕೂ ಕೂಡಿದಲ್ಲಿ ಒಂದು ಪದಾರ್ಥವಾಗುತ್ತಿದೆ. ಮೂಲ ಚಿತ್ತುವಿನ ಮೇಲೆಯೇ ಪದಾರ್ಥಗಳ ವೈಶಿಷ್ಟ್ಯವು ಅವಲಂಬಿಸಿದೆ. ಪದಾರ್ಥಗಳ ವೈಶಿಷ್ಟ್ಯದ ವ್ಯವಹರಣೆಯು ನಾದಬಿಂದು ಕಲೆಗಳ ಮುಖಾಂತರವಾಗಿಯೇ ನಡೆಯುತ್ತಿದೆ. ಜಗತ್ತಿನಲ್ಲೆಲ್ಲ ಈ ನಾದ ಬಿಂದು ಕಲೆಗಳು ಪಸರಿಸಿರುತ್ತವೆ. ಅವಿಲ್ಲದೆ ಜಗತ್ತು ನಡೆಯಲಾರದು. ಅವು ಸಣ್ಣದರಲ್ಲಿಯೂ ದೊಡ್ಡದರಲ್ಲಿಯೂ ಇರುತ್ತಿವೆ. ಆದರೆ ಪದಾರ್ಥಗಳ ಭಿನ್ನತೆಗಳು ಅಥವಾ ವೈಶಿಷ್ಟ್ಯಗಳು ಮೂಲ ಚಿತ್ತುವಿನ ಮೇಲೆಯೇ ಅವಲಂಬಿಸಿರುತ್ತವೆ. (ಹೆಚ್ಚಿನ ವಿವರಣೆಗೋಸ್ಕರ ವಚನಶಾಸ್ತ್ರಸಾರ ಭಾಗ ೨ ಸೃಷ್ಟಿಯ ರಚನೆ ಈ ವಿಷಯದಲ್ಲಿ ಹೇಳಿದ ವಚನಗಳನ್ನು ಮತ್ತು ಅನುಬಂಧ ೧ (ಅ) ನೋಡಬೇಕು.)

(೧೨) ಶಕ್ತಿ:— ಜಗತ್ತಿನಲ್ಲಿ ಮತ್ತು ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿ ಶಕ್ತಿಯು (*energy*) ಇದೆ. ಕೆಲವೊಂದು ಪರಿಸ್ಥಿತಿಯಲ್ಲಿ ಬಯಲಿನಲ್ಲಿ ಅದು ಪ್ರಕಟವಾಗುತ್ತದೆ. ಆಗ ಅದನ್ನು ಚೈತನ್ಯವೆಂದು ಹೇಳುತ್ತೇವೆ. ಮೊದಲು ಬಯಲು ಸ್ಥಿತಿಯಲ್ಲಿ ಅದು ತೋರುವದಿಲ್ಲ. ಅದು ಗುಪ್ತವಾಗಿರುತ್ತದೆ. ಆದರೂ ಅದು ಇರುತ್ತದೆ. ಅದು ಜೀವ ಇದರ ಮೂಲಕ ಜಗತ್ತಿನಲ್ಲಿ ಪ್ರವಹಿಸುತ್ತದೆ. ಈ ಶಕ್ತಿಯು ಮೂಲಕವಾಗಿಯೇ ಜೀವನ ಅಸ್ತಿತ್ವವನ್ನು ಕಂಡು ಹಿಡಿಯುತ್ತೇವೆ. ಜಗತ್ತಿನ ವ್ಯಾಪಾರಗಳು ಅದರ ಮೂಲಕವಾಗಿಯೇ ನಡೆಯುತ್ತಿವೆ. ಶಕ್ತಿಯು ಸರಿಯಾದ ಮತ್ತು ಯೋಗ್ಯವಾದ ಹಾದಿಯಿಂದ ನಡೆಯತಕ್ಕದ್ದು. ಅಂದರೆ ಅದರಿಂದ ಪ್ರಯೋಜನವುಂಟು. ಮತ್ತು ತನಗೂ ಜಗತ್ತಿಗೂ ಹಿತವಿದೆ. ಆದರೆ ಅದು ಸರಿಯಾದ ಹಾದಿಯಿಂದ ಹೋಗದಿದ್ದರೆ, ಅದರಿಂದ ಕೇಡುಂಟು. ಆದ್ದರಿಂದ ವಚನ

ಕಾರರು ಶಕ್ತಿಯಲ್ಲಿ ಎರಡು ವಿಭಾಗಗಳನ್ನು ಮಾಡುತ್ತಾರೆ. ಒಂದು ಕೆಡಕು ಮತ್ತೊಂದು ಒಳ್ಳೆಯದು. ವಚನಕಾರರು ಷಟ್‌ಸ್ಥಲಗಳ ಪ್ರಕಾರ ತಮ್ಮ ವಿಷಯಗಳನ್ನು ವಿವೇಚಿಸುವದುಂಟು. ಆದ್ದರಿಂದ ಅವರು ಶಕ್ತಿಯಲ್ಲಿ ಅವುಗಳಿಗನುಸರಿಸಿ ಆರು ಪ್ರಕಾರಗಳನ್ನು ಮಾಡಿದ್ದಾರೆ. ಅವು ಯಾವವೆಂದರೆಃ— (೧) ಚಿತ್ ಶಕ್ತಿ (೨) ಪರಾಶಕ್ತಿ (೩) ಆದಿಶಕ್ತಿ (೪) ಇಚ್ಛಾಶಕ್ತಿ (೫) ಜ್ಞಾನಶಕ್ತಿ (೬) ಕ್ರಿಯಾಶಕ್ತಿ. ಶಕ್ತಿಯು ಪ್ರಕಟವಾಗಲಿಕ್ಕೆ ಯಾವಾಗಲೂ ಅದಕ್ಕೆ ಅಂಗವು ಬೇಕು. ಅಂದರೆ ಅದಕ್ಕೆ ಒಂದು ಸ್ಥೂಲವಾದ ಶರೀರವು ಬೇಕು. ವಿದ್ಯುಲ್ಲತೆಯು ಜಗತ್ತಿನಲ್ಲೆಲ್ಲ ತುಂಬಿದೆ. ಆದರೆ ಅದು ಪ್ರಕಟವಾಗಲಿಕ್ಕೆ ಒಂದು ತಂತಿಯು ಬೇಕು. ಹಾಗೆಯೇ ಶಕ್ತಿಯ ಪ್ರಕಟತೆಗೆ ಒಂದು ಅಂಗವು ಬೇಕು. ಅಂಗದಲ್ಲಿ ಈ ಶಕ್ತಿಯು ಪ್ರವಹಿಸಿದ ಕೂಡಲೆ ಅದರಿಂದ ಕ್ರಿಯೆಗಳಾಗುತ್ತವೆ. ಈ ಅಂಗದಲ್ಲಿ ಅಥವಾ ಶರೀರದಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ, ಎಂಬ ಶರೀರಗಳಿವೆ. ಆ ಶರೀರಗಳಲ್ಲೆಲ್ಲ ಈ ಶಕ್ತಿಯು ತೋರುತ್ತಿದೆ. ಹೀಗೆ ತೋರಿದ ಕೂಡಲೆ ಆ ಶರೀರಗಳ ಗುಣಧರ್ಮಗಳು ಅದರ ಮೂಲಕ ಪ್ರಕಟವಾಗುತ್ತವೆ. ಈ ಶಕ್ತಿಯು ಮನುಷ್ಯನಲ್ಲಷ್ಟೇ ಅಲ್ಲ, ಜಗತ್ತಿನಲ್ಲೆಲ್ಲ ಪಸರಿಸಿರುತ್ತದೆ. ಆದ್ದರಿಂದ ಜಗತ್ತು ಶಕ್ತಿವಿಶಿಷ್ಟವಾಗಿರುತ್ತದೆಂದು ಹೇಳಲ್ಪಡುತ್ತಿದೆ.

(೧೩) ಭಕ್ತಿಃ— ಶಕ್ತಿಯು ಸರಿಯಾದ ಮಾರ್ಗದಿಂದ ಪ್ರವಹಿಸಿದಲ್ಲಿ ಅದು ಭಕ್ತಿ ಎಂದು ಹೇಳಲ್ಪಡುತ್ತಿದೆ. ಯಾಕಂದರೆ ಈ ಭಕ್ತಿಯಲ್ಲಿಯೂ ಶಕ್ತಿ ಇದೆ. ಷಟ್‌ಸ್ಥಲಗಳ ಪ್ರಕಾರ ಭಕ್ತಿಯು ಆರು ವಿಧವಾಗಿರುತ್ತದೆ. ಈ ವಿಧಗಳು ಯಾವವೆಂದರೆಃ— (೧) ಶ್ರದ್ಧಾಭಕ್ತಿ (೨) ನಿಷ್ಠಾಭಕ್ತಿ, (೩) ಅವಧಾನಭಕ್ತಿ (೪) ಅನುಭಾವಭಕ್ತಿ (೫) ಸುಜ್ಞಾನಭಕ್ತಿ (೬) ಸಮರಸಭಕ್ತಿ. ವಚನಕಾರರು ಭಕ್ತಿ ಇದಕ್ಕೆ ಬಹು ವ್ಯಾಪಕಾರ್ಥವನ್ನು ಕೊಟ್ಟಿದ್ದಾರೆ. ಭಕ್ತಿಮಾರ್ಗ, ಜ್ಞಾನಮಾರ್ಗ, ಕರ್ಮಮಾರ್ಗ ಎಂದು ಹಿಂದೂ ಧರ್ಮಶಾಸ್ತ್ರಕಾರರು ಹೇಳುವದುಂಟು. ಆದರೆ ಅವರು ಹೇಳುವ ಈ ಭಕ್ತಿಮಾರ್ಗವು ವಚನಕಾರರ ಪ್ರಕಾರ ಶ್ರದ್ಧಾಭಕ್ತಿ ಮತ್ತು ನಿಷ್ಠಾಭಕ್ತಿ ಇವುಗಳಲ್ಲಿ ಮಾತ್ರ ಬರುತ್ತಿದೆ. ವಚನಕಾರರು ಈ ಪ್ರಕಾರ ಭಕ್ತಿ ಇದಕ್ಕೆ ವ್ಯಾಪಕಾರ್ಥ ಕೊಟ್ಟಿದ್ದಾರೆ. ಸರಿಯಾದ ಅಂದರೆ ಒಳ್ಳೆಯ ರೀತಿಯಿಂದ ನಡೆಯಿಸಿಕೊಂಡು ಹೋಗುವ ಯಾವ

ಮಾರ್ಗವಾದರೂ ಕೂಡ ಭಕ್ತಿ ಎಂದು ಭಾವಿಸಿ ಅವರು ವಿವೇಚಿಸು ತ್ತಾರೆ. ಜ್ಞಾನವು ಸರಿಯಾದ ಮಾರ್ಗದಿಂದ ಪ್ರವಹಿಸುತ್ತ ಪರಮಾತ್ಮ ನೆಡೆಗೆ ಮನುಷ್ಯನನ್ನು ಒಯ್ದುದ್ದಾದರೆ ಅದೂ ಕೂಡ 'ಸುಜ್ಞಾನಭಕ್ತಿ' ಎಂದು ವಚನಕಾರರು ತಮ್ಮ ಷಟ್‌ಸ್ಥಲ ವಿವೇಚನೆಯಲ್ಲಿ ಹೇಳುತ್ತಾರೆ.

(೧೪) ಪ್ರವೃತ್ತಿಃ— ಶಕ್ತಿಯು ಸರಿಯಾದ ಮಾರ್ಗದಿಂದ ಹೋದ ದ್ದಾದರೆ ಮಾತ್ರ ಅದರ ಮೂಲಕ ಮನುಷ್ಯನ ಗುಣಗಳು ವಿಕಾಸ ಹೊಂ ದುತ್ತವೆ. ಉದಾಹರಣಾರ್ಥವಾಗಿ ಚಿಕ್ಕಂದಿನಲ್ಲಿ ಮಕ್ಕಳ ಬುದ್ಧಿಯು ಪ್ರಕ ಟವಾಗಿರುವದಿಲ್ಲ. ಆದರೆ ಮುಂದೆ ಅದು ಬೆಳವಣಿಗೆಯನ್ನು ಹೊಂದುತ್ತ ಹೋಗುತ್ತದೆ. ಇದು ಅದರ ಪ್ರವೃತ್ತಿಯು. ಇಂಥ ಪ್ರವೃತ್ತಿಯ ಮೂಲ ಕವೇ ಮನುಷ್ಯನಲ್ಲಿ ಪರಿಪೂರ್ಣತೆಯು ಕ್ರಮೇಣ ಉಂಟಾಗುತ್ತ ಹೋಗುತ್ತದೆ. ಆಗ ಅವನ ಮನಸ್ಸು, ಬುದ್ಧಿ, ಚಿತ್ತವೃತ್ತಿ ಮೊದಲಾದ ವುಗಳು ಅವನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು ಉಚ್ಚ ಸ್ಥಿತಿ ಯನ್ನು ಹೊಂದುತ್ತ ಹೋಗುತ್ತವೆ. ವಚನಕಾರರು ತಾವು ಹೇಳುವ ಷಟ್‌ಸ್ಥಲಗಳ ಆಚರಣೆಗಳಂತೆ ನಡೆದದ್ದಾದರೆ ಈ ಪ್ರವೃತ್ತಿಯು ಉಂಟಾ ಗುತ್ತದೆಂದು ಅವರ ಅಭಿಪ್ರಾಯ. ಇದಕ್ಕೆ ಇಂಗ್ಲಿಷದಲ್ಲಿ *Evolution* ಎಂದು ಹೇಳಬಹುದು.

(೧೫) ನಿವೃತ್ತಿಃ— ಪ್ರವೃತ್ತಿಯು ಪರಿಪೂರ್ಣತೆಯನ್ನು ಹೊಂದಿದ ಬಳಿಕ ನಿವೃತ್ತಿಯು ತಲೆದೋರುತ್ತದೆ, ಇದಕ್ಕೆ ಇಂಗ್ಲೀಷದಲ್ಲಿ *un vo- -lution* ಎಂದು ಹೇಳಬಹುದು. ಆಗ ಸ್ಥೂಲ ಸೂಕ್ಷ್ಮ ಕಾರಣ ಶರೀರ ಗಳಲ್ಲಿ ಏಕ ರೂಪತೆಯು ಉಂಟಾಗುತ್ತದೆ. ಅಂದರೆ ಸ್ಥೂಲ ಶರೀರದ ಮೇಲಿನ ಪರಿಣಾಮಗಳು ಕೂಡಲೆ ಸೂಕ್ಷ್ಮ ಶರೀರದ ಮೇಲೆ ಮತ್ತು ಕಾರಣ ಶರೀರಗಳ ಮೇಲೆ ಆಗುತ್ತವೆ. ಕಾರಣ ಶರೀರದಿಂದ ಹೊರಟ ಚೈತನ್ಯವು ಕೂಡಲೆ ಸೂಕ್ಷ್ಮ ಮತ್ತು ಸ್ಥೂಲ ಶರೀರಗಳ ಮೇಲೆ ಆಗುತ್ತದೆ. ಈ ಸ್ಥಿತಿಯಲ್ಲಿ ಮನುಷ್ಯನ ಕ್ರಿಯೆಗಳು ಸರಿಯಾಗಿ ನಡೆಯುತ್ತದೆ. ಅವನಲ್ಲಿ ಕ್ಲೇಶ, ದುಃಖ ಮೊದಲಾದವುಗಳು ಉಂಟಾಗಲಾರವು. ಆಗ ಅವನ ವ್ಯಾಪಾರಗಳು ಒಂದರಲ್ಲಿ ಒಂದು ಬೆರೆದು ಕಡೆಗೆ ಪರಮಾತ್ಮನಲ್ಲಿ ಅಥವಾ ನಿರವಯದಲ್ಲಿ ಬೆರೆತು ಹೋಗುತ್ತಾನೆ. (ವಚನಶಾಸ್ತ್ರಸಾರ ಭಾಗ ೨ ಪುಟ ೩೩೦ ರಿಂದ ೩೩೮ ನೋಡಿರಿ.)

# ಪ್ರಸ್ತಾವನೆ.



ನಮಗೆ ದೊರೆದ ಉರಿಲಿಂಗದೇವನ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಇದರಲ್ಲಿ ಪ್ರಸಿದ್ಧಿಸಿದ್ದೇವೆ. ಸ್ಥಲಾನುಸಾರವಾಗಿ ಅವುಗಳಲ್ಲಿ ಶಕ್ಯವಿದ್ದ ಸ್ವರವಟ್ಟಿಗೆ ಜೋಡಣೆಯನ್ನು ಮಾಡಿದ್ದೇವೆ. ವೀರಶೈವ ವಚನಕಾರರಲ್ಲಿ ಉರಿಲಿಂಗದೇವನ ಸ್ಥಾನವು ಉಚ್ಚತರದ್ದಾಗಿರುತ್ತದೆ. ಅವನು ಲಿಂಗಾನುಭವಿಯು; ತನ್ನ ಲಿಂಗದಲ್ಲಿ ತನ್ಮಯನಾಗಿ ಸಮಾಧಿಸ್ಥನಾಗುತ್ತಿದ್ದನು. ಸತಿಪತಿಭಾವವುಳ್ಳವನಾಗಿ ಲಿಂಗದೊಡನೆ ಆಚರಿಸುತ್ತಿದ್ದನು. ಆದ್ದ ಇಂಥ ವಚನಗಳೇ ಅವನ ವಚನಗಳಲ್ಲಿ ಹೆಚ್ಚಾಗಿರುತ್ತವೆ. ಅವನ ಚರಿತ್ರೆಯು ಭೈರವೇಶ್ವರ ಕಥಾಮಣಿಸೂತ್ರ ರತ್ನಾಕರದಲ್ಲಿ ಬಂದಿರುತ್ತದೆ. ಈ ಗ್ರಂಥದಿಂದ ತಿಳಿಯುವದೇನೆಂದರೆ:— ಉರಿಲಿಂಗದೇವನು ಅವಸಿಕಂದಾರವೆಂಬ ಪಟ್ಟಣದವನು. ಇದು ಆಂಧ್ರದೇಶದಲ್ಲಿ ಇದ್ದ ಹಾಗೆ ತೋರುತ್ತದೆ. ಅವನು ಆರಾಧ್ಯಸಂತತಿಗೆ ಹೊಂದಿದವನಾಗಿ ಲಿಂಗನಿಷ್ಠಾಪರನಾಗಿ ಶರಣಸತಿ ಲಿಂಗಪತಿ ಎಂಬ ಭಾವವುಳ್ಳವನಾಗಿ ಇರುತ್ತಿದ್ದನು. ಅವನು ಲಿಂಗವನರ್ಚಿಸುವಲ್ಲಿ ಯಾವ ಭಯವು ಬಂದರೂ ಕೂಡ ತನ್ನ ಲಿಂಗಾರ್ಚನೆಯನ್ನು ಎಂದೂ ಬಿಡುತ್ತಿದ್ದಿಲ್ಲ. ಆಗ ಹುಲಿ, ಕರಡಿ, ಸಿಡಿಲು, ಉರುಗ, ಕಿಚ್ಚಿದ್ದು ಬಂದರೂ ತನ್ನ ಕ್ರಿಯೆಯನ್ನು ಬಿಡುತ್ತಿರಲಿಲ್ಲ. ಅವನು ನದೀತೀರದಲ್ಲಿ ಚಪ್ಪರವನ್ನು ಹಾಕಿಕೊಂಡು ಅಲ್ಲಿ ವಾಸಿಸುತ್ತಿರಲು ಒಂದು ದಿನ ಪರವಾದಿಗಳು ಈತನ ಲಿಂಗನಿಷ್ಠೆಯನ್ನು ನೋಡಬೇಕೆಂದು ತಾವು ಹೊರಟುಬರುವ ದಾರಿಯಲ್ಲಿ ಆ ಚಪ್ಪರಕ್ಕೆ ಕಿಚ್ಚನ್ನಿಕ್ಕಿದರು. ಆ ಕಿಚ್ಚು ಉರಿಯುತ್ತ ಬಂದರೂ ಕೂಡ ಉರಿಲಿಂಗದೇವನು ಶಿವಧ್ಯಾನದಲ್ಲಿ ನಿಶ್ಚಲನಾಗಿರಲು ಅದು ತಾನೇ ನಂದಿಹೋಯಿತು. ಅದಕ್ಕೆ ಆ ಪರವಾದಿಗಳು ಅಪರಾಧವೆಮ್ಮದೆಂದು ನುತಿಸಲು ಅವರಿಗೆ ಉರಿಲಿಂಗದೇವನು ಅಭಯವಿತ್ತು ಸಲಹಿದನು. ಉರಿಲಿಂಗದೇವನ ಶಿಷ್ಯನು ಉರಿಲಿಂಗಪೆದ್ದಿಯು. ಇವನಾದರೂ ಬಹು ಪ್ರಸಿದ್ಧ ವಚನಕಾರನಾಗಿದ್ದಾನೆ. ಉರಿಲಿಂಗದೇವನು ವೀರಶೈವ ಮತಕ್ಕೆ ಆಚಾರ್ಯನಾಗಿ ಈ ಅವಸಿಕಂದಾರದಲ್ಲಿದ್ದು ಜನಗಳಿಗೆ ಉಪದೇಶ ಮಾಡುತ್ತ ಇದ್ದನು. ಅವನು ಸೂರಯ್ಯನೆಂಬವನಿಗೆ ದೀಕ್ಷೆಯನ್ನು ಮಾಡುತ್ತಿರಲು,

ಪೆದ್ದಣ್ಣನು ರಾತ್ರಿಯಲ್ಲಿ ಕಳವಿಗೆ ಹೋಗಬೇಕೆಂದು, ಮಾಳಿಗೆಯನೇರಿ ಬೆಳಕಿಂಡಿಯಿಂದ ಕೆಳಕ್ಕೆ ನೋಡಲು ಅಲ್ಲಿ ಉರಿಲಿಂಗದೇವನು ಲಿಂಗ ಪೂಜೆಯಲ್ಲಿ ಆಸಕ್ತನಾಗಿರುವದನ್ನು ಕಂಡನು. ಮುಂದೆ ಅವನು ದೀಕ್ಷೆಯ ಮಾಡುವ ಕ್ರಮವನ್ನೆಲ್ಲ ನೋಡಿ ಅವನಲ್ಲಿ ಶಿವಭಕ್ತಿಯುಂಟಾಗಲು ಮಾಳಿಗೆಯನ್ನಿಳಿದು ಹೊರಟುಹೋದನು. ಆಮೇಲೆ ಅವನು ಬೆಳಗಿನ ಲ್ಲೆದ್ದು ದಿನಾಲು ಹೊರೆಹುಲ್ಲು ಕಟ್ಟಿಗೆಯನ್ನು ಉರಿಲಿಂಗದೇವನಿಗೆ ಹಾಕುವ ಕಾರ್ಯಕ್ರಮವನ್ನು ಕೈಕೊಂಡನು. ಹೀಗೆ ಹಾಕುತ್ತಾ ಇರಲು ಒಂದು ದಿನ ಅವನು ಹಿಂದೆ ರಾತ್ರಿಯಲ್ಲಿ ನಡೆದ ಸಂಗತಿಯನ್ನು ಉರಿಲಿಂಗ ದೇವನಿಗೆ ತಿಳಿಸಿ ತನಗೆ ದೀಕ್ಷೆ ಮಾಡಬೇಕೆಂದು ಕೇಳಿಕೊಂಡನು. ಅದಕ್ಕೆ ಉರಿಲಿಂಗದೇವನು ಸುಮ್ಮನಾದನು. ಆದರೆ ಪೆದ್ದಣ್ಣನು ತನ್ನ ಕಾಯ ಕವನ್ನು ಬಿಡದೆ ನಿತ್ಯ ಹುಲ್ಲು ಕಟ್ಟಿಗೆಯನ್ನು ತಂದು ಅವನಲ್ಲಿ ಹಾಕು ತ್ತಿದ್ದನು. ಮತ್ತು ತನಗೆ ದೀಕ್ಷೆಯನ್ನು ಮಾಡಲು ಆಗಿಂದಾಗ್ಗೆ ಕೇಳಿ ಕೊಳ್ಳಹತ್ತಿದನು. ಆಗ ಉರಿಲಿಂಗದೇವನು ಇವನ ಕಾಟ ಬೇಡವೆಂದು ಒಂದು ದಿವಸ ಒಂದು ಕಲ್ಲನ್ನು ಕೈಯ್ಯಲ್ಲಿ ಎತ್ತಿಕೊಂಡು "ಔದಗಿಡಿಚ" ಎಂದು ಬೈದು ಅದನ್ನು ಪೆದ್ದಣ್ಣನ ಕಯ್ಯಲ್ಲಿ ಕೊಟ್ಟನು. ಆಗ ಪೆದ್ದ ಣ್ಣನು "ಔದಗಿಡಿಚ" ಎಂಬುದೇ ತನ್ನ ಗುರುಮಂತ್ರವೆಂದು ಭಾವಿಸಿ ಆ ಕಲ್ಲನ್ನು ಪೂಜಿಸುತ್ತಿರಲು ಅದು ಅವನ ಭಾವದ ಬಲುಮೆಯಿಂದ ಜ್ಯೋತಿರ್ಮಯ ಲಿಂಗವಾಯಿತು. ಉರಿಲಿಂಗದೇವನು ಮುಂದೆ ಪೆದ್ದಣ್ಣನ ಈ ಮಹಿಮೆಯನ್ನು ಅರಿಯಲು ಈತನು ನಿಜವಾದ ಭಕ್ತನೆಂದರಿದು ಆತನಿಗೆ 'ಉರಿಲಿಂಗಪೆದ್ದಯ್ಯ' ನೆಂಬ ಹೆಸರನ್ನೇ ಇಟ್ಟು, ನಿಜೋಪದೇಶ ವನ್ನು ಕೊಟ್ಟು, ಭಕ್ತರ ಭಾವದಲ್ಲಿ ಶಿವನು ನೆಲೆಗೊಳ್ಳುವದು ಸತ್ಯ ವೆಂದು ಜಗತ್ತಿಗೆ ತೋರಿ ಉರಿಲಿಂಗಪೆದ್ದಿಯನ್ನೇ ತನ್ನ ಆಚಾರ್ಯ ಪೀಠಕ್ಕೆ ಪಟ್ಟವನ್ನು ಕಟ್ಟಿದನು. ಹೀಗೆ ಈ ಗುರುಶಿಷ್ಯರ ಚರಿತ್ರೆ ಇದೆ.

ಇವರಿಬ್ಬರೂ ವಚನಕಾರರಲ್ಲಿ ಬಹು ಶ್ರೇಷ್ಠರು. ಇದು ಅವರ ವಚನಗಳಿಂದಲೇ ತಿಳಿಯುತ್ತಿದೆ. ಉರಿಲಿಂಗದೇವನ ವಚನಗಳು ನಮಗೆ ಸಿಕ್ಕಿದವು ಬಹಳ ಸ್ವಲ್ಪ. ನಮಗೆ ದೊರೆತವುಗಳನ್ನಷ್ಟೇ ನಾವು ಇಲ್ಲಿ ಪ್ರಸಿದ್ಧಿಸಿದ್ದೇವೆ.

ತಾ॥ ೧೪-೭-೪೦ ಫ. ಗು. ಹಳಕಟ್ಟಿ,
ಸಂಪಾದಕ.

೧೩. ಗಾಡಿಗ ನಲ್ಲನು ಕಾಡಿಹನೆಲಗೆ. ಕೂಡಿಹನಗಲಿಹನೆನ್ನ. ನೀನದ ಮಾಣಿಸು. ಅವನ ಅಗಲಿ ಕೂಡುವ ಬೇಟದ ಸುಖವನು ಮುಗುದೆ ನೀನರಿಯೆ. ಅಗಲಿದ ವಿರಹಿಯು ಕೂಟದ ಸುಖವನು ಉರಿಲಿಂಗದೇವ ಬಲ್ಲನು ಕೆಳದಿ.

೧೪. ನಲ್ಲನ ಕೂಡಲು ಸುಖಭೋಗ ದ್ರವ್ಯವನೆಲ್ಲಿಂದ ತಹೆನು ಹೇಳಾ ಕೆಳದಿ? ನಲ್ಲನ ಬೇಡಲು ನಾಚಿಕೆ. ಎನಗೆ ಮತ್ತೆ ಆರು ಇಲ್ಲ. ಇನ್ನು ಕೊಡುವ ಶಕ್ತರ ನಾನರಿಯೆನು ಕೇಳಾ ಕೆಳದಿ. ಹೆಣ್ಣು ಕೂಡುವ ಸುಖವನು ಮಣ್ಣಿನಲ್ಲಿ ನೆರಹುವೆನು ಉರಿಲಿಂಗದೇವ.

೧೫. ಮಂಗಳ ಮಯ ಲಿಂಗವ ಮನ ಹಿಂಗದೆ ಸುಸಂಗಿಯಾಗಿ ಮಹಾಲಿಂಗದ ಪ್ರಸಂಗಿಯಾಗಿಪ್ಪಾತನಂಗವೆನಗೆ ಮಂಗಳ ತರಂಗ. ಆತನ ಪ್ರಸಂಗದಲ್ಲಿರಿಸಾ ಉರಿಲಿಂಗದೇವ.

---

## ಮಹೇಶ್ವರ ಸ್ಥಲ.

೧೬. ಎನ್ನ ನಲ್ಲನು ಒಲ್ಲೆನೆಂದು ಕೇಳಿದಡೆ ಇಲ್ಲಿಯೇ ಅರಸುವೆನವನ. ಗಂಗೆಯು ನೋಣೆನು. ಗೌರಿಯು ನೋಣೆನು. ಇಲ್ಲಿಯೇ ಅರಸುವೆನವ್ವಾ! ಎನ್ನಂತರಂಗದ ಆತ್ಮಜ್ಯೋತಿಯೇ ಉರಿಲಿಂಗದೇವ ಎಂದು ಇಲ್ಲಿಯೇ ಅರಸುವೆನವ್ವಾ.

೧೭. ಇವನೊಬ್ಬನೆ ಗರುವ. ಇವನೊಬ್ಬನೆ ಚೆಲುವನು. ಇವನೊಬ್ಬನೆ ಧನಪತಿ ಕೇಳಾ ಕೆಳದಿ. ಇವಗೆ ಹಿರಿಯರಿಲ್ಲ. ಎನಗೊಡೆಯರಿಲ್ಲ. ಇಂತಪ್ಪ ನಲ್ಲನು ಲೇಸು ಕಾಣೆಲಗೆ. ನಾವೆಲ್ಲರೊಂದಾಗಿ ಹಿಡಿದು ಬಡಿದಿರೆ, ಬಿಡಿಸುವರಿಲ್ಲ. ಲೇಸು ಉರಿಲಿಂಗದೇವ.

೧೮. ಕಾಮ ನಿನ್ನ ಬಲ್ಲಾಳುತನವನು ಎಸುಗೆಯನು ನೋಡುವೆ ಕೇಳೆಲವೊ. ಕುಸುಮಶರವ ತೊಡು ನೀನು. ಎಸು. ನಿನ್ನೆಸುಗೆಯನು ನೋಡುವೆನು ಕೇಳಾ ಕಾಮಾ. ಎನಗೂ ಉರಿಲಿಂಗದೇವಗೂ ತೊಟ್ಟಿಸು. ಎಸೆಯಲು ನೀ ಬಿಲ್ಲಾಳಹೆಯೋ ಕಾಮಾ.

೧೯. ಕಾಮಿಗೆ ಕಾಮಿನಿಗೆ ಎರಡು ಗುರಿಯೊಂದು ಸರಳು. ಎಸು ಗೆಯ ಮಾಡು ಕಾಮಾ. ಎಸೆಯಲು ಎರಡೊಂದಪ್ಪುದು ಗಡಾ ಕಾಮಾ. ಎನಗೆಯೂ ಉರಿಲಿಂಗದೇವಗೆಯೂ ತೊಟ್ಟಿಸು. ಎರಡೊಂದಾದೊಡೆ ಬಿಲ್ಲಾಳಹೆಯೋ ಕಾಮಾ.

೨೦. ಲಿಂಗವ ಮೇಲೆ ಲಿಂಗದೇವನಿರ್ದಂತೆ ಇತರ ಸ್ಥಾವರ ಲಿಂಗಕ್ಕೆ ಹೋಗಿ, ಹೋಗಿ, ದೇವರ ಕಂಡೆನೆಂದು ಅರಿವುತಿಪ್ಪ ಸಲೆ ಮನು ಜರುಗಳಿಗೆ ಉಪದೇಶವ ಮಾಡುವ ಗುರುವಿಂಗೆ ಪುಣ್ಯದ ಬಟ್ಟೆಯ ಕೊಡ ಉರಿಲಿಂಗ ತಂದೆ.

೨೧. ತೀರ್ಥ ಯಾತ್ರೆಯಲ್ಲಿ ಕಂಡೆಹೆನೆಂದ್ಹೈದಿ ಹೋಹ ಪರಿಯ ನೋಡಾ ಅಯ್ಯಾ. ಮನೆಗೆ ಬಂದ ಜಂಗಮಕ್ಕೆ ಇಲ್ಲ ಎಂದು ಜಗ ಜಾತ್ರೆಯಲ್ಲಿ ಅನ್ನವನಿಕ್ಕಿದರೆ ಪುಣ್ಯವೆಂಬಣ್ಣಗಳಿಗೇಕೆ ಸದಾಚಾರ ಉರಿ ಲಿಂಗತಂದೆ ?

೨೨. ಅನಂತ ವೇದ ಶಾಸ್ತ್ರ ಆಗಮ ಪುರಾಣ ತರ್ಕ ತಂತ್ರಂಗ ಳನ್ನು ಆತ್ಮ ಮಾಡಿದನಲ್ಲದೆ, ಆತ್ಮನನವು ಮಾಡಿದುದಿಲ್ಲ. ಎನ್ನಂತ ರಂಗದ ಅರಿವಿನ ಮೂರ್ತಿಯಾಗಿ ಎನ್ನ ಉರಿಲಿಂಗದೇವರು ಸಂಕಲ್ಪಿಸಿ ಆಗೆಂದರಾದವು.

೨೩. ಆರ ಪರಿಯಲ್ಲಿ ನಮ್ಮ ನಲ್ಲನು. ವಿಶ್ವವೆಲ್ಲವು ಸತಿಯರು. ಚೋದ್ಯದ ಪುರುಷನು. ಅವರವರ ಪರಿಯಲ್ಲಿ ಅವರವರ ನೆರೆವನು. ಅವರ ವರಿಗೆ ಅವರಂತೆ ಸುಖಮಯ ನೋಡಾ. ಅವರೆಲ್ಲರ ವಂಚಿಸಿ ಎನ್ನ ನಗಲದ ಪರಿಯ ಹೇಳಾ ಕೆಳದಿ. ನೀನೊಳ್ಳಿದಳಾದರೆ ಮಹಾ ಮಂತ್ರವ ಜಪಿಸಲು ನಿನ್ನನಗಲ. ನಿನ್ನಾಣೆ ಉರಿಲಿಂಗದೇವ ತನ್ನಾಣೆ.

೨೪. ಒಬ್ಬನೆ ಗರುವನು. ಇವನೊಬ್ಬನೆ ಚಲುವನು. ಇವ ನೊಬ್ಬನೆ ಧನಪತಿ ಕೇಳಾ ಕೆಳದಿ. ಅವಗೆ ಹಿರಿಯರಿಲ್ಲ. ಅವಗೆ ಒಡೆಯ ರಿಲ್ಲ. ಇಂತಪ್ಪ ನಲ್ಲನು ಲೇಸು ಕಾಣೆಮಗೆ. ನಾವೆಲ್ಲ ಒಂದಾಗಿ ಹಿಡಿದು ಒಡಿದರೆ ಬಿಡಿಸುವರಿಲ್ಲ ಲೇಸು ಉರಿಲಿಂಗದೇವನಾ.

೨೫. ಕಾಮನ ಕೊಂದು, ಪಟ್ಟಕ್ಕೆ ನಿಂದ, ಕಾಮರಾಜ ರಾಜನು. ಗಂಡರೆಲ್ಲರ ಹೆಂಡಿರ ಮಾಡಿ ನೆರೆವ ವೈಶಿಕ ಕಾಮನು ಕೇಳಾ ಕೆಳದಿ. ಇಂತಪ್ಪ ಕಾಮಿಯನತಿಕಾಮಿಸಿ ನೆರೆದು ಕಾಮಸಿದ್ಧಿಯನೀವನು. ಕಾರ ತಾರೆಲಗೆ ಉರಿಲಿಂಗದೇವನ.

---

## ಪ್ರಸಾದಿ.

೨೬ ನಲ್ಲನ ರೂಪೆನ್ನ ನೇತ್ರ ತುಂಬಿತ್ತು. ನಲ್ಲನ ನುಡಿ ಎನ್ನ ಶ್ರೋತ್ರ ತುಂಬಿತ್ತು. ನಲ್ಲನ ಸುಗಂಧವೆನ್ನ ನಾಸಿಕ ತುಂಬಿತ್ತು. ನಲ್ಲನ ಚುಂಬನವೆನ್ನ ಜಿಹ್ವೆ ತುಂಬಿತ್ತು. ನಲ್ಲನ ಆಲಿಂಗನವೆನ್ನ ಸರ್ವಾಂಗ ತುಂಬಿತ್ತು. ನಲ್ಲನ ಪ್ರೇಮವೆನ್ನ ಮನ ತುಂಬಿತ್ತು. ನಲ್ಲನ ಅಂತರಂಗ ಬಹಿರಂಗದಲ್ಲಿ ನೆರೆದು ಸುಖಿಯಾದೆ ಉರಿಲಿಂಗದೇವನ.

೨೭. ಟಕ್ಕಿಪ ನಲ್ಲನ ಟಕ್ಕಿಪ ತೆರನ ಚದುರೆ ಚದುರಿಸದೆನಗೆ ನೀನು ಸುರಾ. ಸತ್ಯವ ಜಪಿಸಲು ಸಿಕ್ಕುವ ನಲ್ಲನು. ಸತ್ಯವು ಸತ್ಯವು ಕೇಳಾ ಕೆಳದಿ. ಆವನು ಉಂಬಲ್ಲಿ ಉಡುವಲ್ಲಿ ನೇಹ ಬೆಳಸಲು ಸಿಕ್ಕುವನು. ಬಿಡದಿರು ಉರಿಲಿಂಗದೇವನ.

೨೮. ನಲ್ಲನೊಲ್ಲನೆಂದು ಮುನಿದು ನಾನಡಗಲು, ಅಡಗುವ ಎಡೆ ಎಲ್ಲ ತಾನೇ ಕಾಣವ್ವ! ಅಡಗಲಿಕ್ಕೆ ತೆರಹಿಲ್ಲ. ಮುನಿದು ನಾನೇವೆ? ಶರಣು ಹೋಗುವೆ ನಾನು ಉರಿಲಿಂಗದೇವಗೆ.

೨೯. ಎಮ್ಮ ನಲ್ಲನೊಲ್ಲನೆಂದು ಕಳುಹಿದಡೆ, ಇಲ್ಲಿಯೇ ಹೋಹೆ ನಲ್ಲಾ! ಗಂಗೆಯು ನೋನೆನೇ? ಗೌರಿಯು ನೋನೆನೇ? ಇಲ್ಲಿಯೇ ಅರತು ಹೋಹೆನವ್ವಾ. ಎನ್ನಂತರಂಗದ ಆತ್ಮಜ್ಯೋತಿ ಉರಿಲಿಂಗದೇವಾ ಎಂದು ಇಲ್ಲಿಯೇ ಅರತು ಹೋಹೆನವ್ವಾ.

೩೦. ಇನಿಯ ನೀನೇ ಎನಗೆ. ಇನ್ನೇನನೊಂದನಾನರಿಯೆ. ನೀ ನುಡಿಸಲು ನುಡಿವೆನು. ನೀ ನಡಿಸಲು ನಡೆವೆನು. ನೀನಲ್ಲದನ್ಯವ ನಾನರಿಯೆನು. ನಲ್ಲ ಕೇಳಾ. ಎನಗೆ ನೀನೇ ಗತಿ, ನೀನೇ ಮತಿ. ನಿನ್ನಾಣೆ ಯಯ್ಯ ಉರಿಲಿಂಗದೇವಾ.

೩೧. ಉಂಡಿಹೆನೆಂಬಲ್ಲಿ ಅನ್ನವನಿಕ್ಕದೆ ಸತ್ತಮತ್ತೆ ಅಕ್ಕಿಯ ಮೊರ ಮಸ್ತಕದಲ್ಲಿರಿಸಿ ಗಟ್ಟಿದುಪ್ಪ ತುಯ್ಯಲನುಣ್ಣೆಂದು ಬಿಕ್ಕಿ ಬಿಕ್ಕಿ ಅಳುವನಂತೆ ಇವರಚ್ಚುಗದ ಭಕ್ತಿಯ ಕಂಡು ಮೆಚ್ಚನಯ್ಯ ಎನ್ನ ಉರಿಲಿಂಗತಂದೆ.

---

## ಪ್ರಾಣಲಿಂಗಿ ಸ್ಥಲ.

೩೨. ಕಾಯಕ್ಕೆ ಕಾಯವಾಗಿ, ಪ್ರಾಣಕ್ಕೆ ಪ್ರಾಣವಾಗಿ, ಮನಕ್ಕೆ ಮನವಾಗಿ, ನೆರೆದ ನೋಡೆಲಗವ್ವಾ! ನಲ್ಲನ ಬೇಟದ ಕೂಟದ ಸುಖ ವನೇನೆಂದು ಬಣ್ಣಿಪೆ ಕೇಳದಿ? ಮಹಾಸುಖವ ನಾನೇನೆಂಬೆನೆಲಗೆ? ನಲ್ಲನ ನೋಟದ ಕೂಟದನುವನೇನೆಂದುಪಮಿಸುವೆನವ್ವಾ? ಮಹಾಘನವ ನಾನು ತಾನೆಂದು ವಿವರಿಸಬಾರದಂತೆ ನೆರೆದನೆನ್ನನುರಿಲಿಂಗದೇವನು.

೩೩. ಅಂತರಂಗದಲ್ಲಿ ಆವರಿಸಿ, ಬಹಿರಂಗದಲ್ಲಿ ತೋರುವೆ. ಕಂಗಳ ಕೊನೆಯಲ್ಲಿ ಮೂರ್ತಿಯಾಗಿ, ಮನದ ಕೊನೆಯಲ್ಲಿ ತೊಳಲುವೆ. ಎನ್ನ ಬ್ರಹ್ಮರಂಧ್ರದಲ್ಲಿ ತೊಳತೊಳಗಿ ಬೆಳಗುತಿಪ್ಪ ಪರಂಜ್ಯೋತಿ ನೀನೇ ಉರಿ ಲಿಂಗದೇವಾ.

೩೪. ಅಷ್ಟವಿಧಾರ್ಚನೆ ಷೋಡಶೋಪಚಾರವೆಂಬುದು ಬಾಹ್ಯಕ್ರಿ ಎಂಬ ಭಾವ ಭ್ರಮಿತರ ಮಾತ ಕೇಳಲಾಗದು, ಕೇಳಲಾಗದು. ಧನ ವುಳ್ಳಾತ ಅಷ್ಟ ಸಂಪದೈಶ್ವರ್ಯ ಭೋಗವಭೋಗಿಪನಲ್ಲದೆ ಧನಹೀನ ದರಿದ್ರನೇನ ಭೋಗಿಸುವನೋ? ಲಿಂಗವು ಪ್ರಾಣವು ಅವಿರಳಾತ್ಮಕವಾಗಿ ಅಮಳ ಸೋಂಕು ತುಳುಕಿ ಬಾಹ್ಯ ಕ್ರಿಯಾಗಿ ಕರಸ್ಥಲಕ್ಕೆ ಬಂದುತ್ತರಿಸೆ ಇದು ಅಂತರಂಗವಲ್ಲ ಬಹಿರಂಗವಲ್ಲ ಉರಿಲಿಂಗದೇವ.

೩೫. ಕಾಯಕ್ಕೆ ಕಾಹ ಕೊಡುವರಲ್ಲದೆ, ಮನಕ್ಕೆ ಕಾಹ ಕೊಡು ವರೇ ಅವ್ವಾ? ಇಂತಪ್ಪ ಸೋಜಿಗವನೆಲ್ಲಿಯೂ ಕಾಣೆನು. ಸುದ್ಗುಣದ ಕಾಹ ಮನಕ್ಕೆ ಕೊಟ್ಟನು ಉರಿಲಿಂಗದೇವನು ಸೋಜಿಗವವ್ವಾ.

೩೬. ನಲ್ಲನ ಬೇಟದ ಕೂಟದ ಪರಿಯ ನಾನೇನೆಂದು ಹೇಳುವೆ? ವಿಪರೀತ ಕೇಳದಿ. ಪುರುಷ ಶಕ್ತಿಯಾಗಿ ಶಕ್ತಿ ಪುರುಷನಾಗಿ ನೆರೆದು ಸುಖಿಸುವನು ಕೇಳಾ ಕೆಳದಿ. ಅತಿ ಕಾಮಿಯುರಿಲಿಂಗದೇವನು ವಿಪರೀತದಿಂದ ನೆರೆಯಲು ನೆರೆವುದೆನ್ನ ಮನದಿಚ್ಛೆ ಕೆಳದಿ.

೩೭. ಎನ್ನ ನಲ್ಲನ ಕೂಡಿದ ಸುಖದ ಸುಗ್ಗಿಯನೇನೆಂಬೆ ಕೇಳಾ ಕೆಳದಿ ? ಸುಖದ ಸವಿಗೆ ಪ್ರವಿಸಿ ಹರಿಯಿತ್ತು. ಹೇಳಲು ನಾಚಿಕೆ. ಕೇಳಲು ನಾಚಿಕೆ. ಕೇಳು ಕೆಳದಿ. ಸುಖದ ರಸ ಮಡುಗಟ್ಟಿದಲ್ಲಿ ಉರಿಲಿಂಗದೇವನ ಕೂಡಿ ಸುಖಸಾಗರದಲ್ಲಿ ಕ್ರೀಡಿಸುತಿರ್ದೆ ಕೆಳದಿ.

೩೮. ಆರ ಪರಿಯಲ್ಲ ನಮ್ಮ ನಲ್ಲನು. ವಿಶ್ವವೆಲ್ಲ ಸತಿಯರು. ಸೋಜಿಗದ ಪುರುಷನು. ಅವರವರ ಪರಿಯಲ್ಲಿ ಅವರನೆ ನೆರೆವನು. ಅವರವರಿಗೆ ಅವರಂತೆ ಸುಖಮಯನು ಕೇಳಾ ಕೆಳದಿ. ಆರ ಪರಿಯಲ್ಲ. ಎನ್ನನಗಲದ ಪರಿಯ ಕೇಳಾ ಕೆಳದಿ. ನೀನೊಳ್ಳಿದಳಾದರೆ ಮಹಾಮಂತ್ರವ ಜಪಿಸು. ನಿನ್ನನಗಲ. ನಿನ್ನಾಣೆ. ಉರಿಲಿಂಗದೇವ ತನ್ನಾಣೆ ಕೆಳದಿ.

೩೯. ಗಾಡಿಗ ನಲ್ಲನು ಕಾಡಿಹನೆಲಗೆ. ಕೂಡಿಹನಗಲಿಹ ಕಾಡಿಹ ಕೆಳದಿ. ನೀನದ ಮಾಣಿಸು. ಅವನನಗಲಿದ ವಿರಹದಿ ಕೂಡುವ ಸುಖವನು ಉರಿಲಿಂಗದೇವ ತಾನೇ ಬಲ್ಲ ಕೆಳದಿ.

೪೦. ನಲ್ಲನ ಕೂಡಿಹೆನೆಂದು ಮೇಲುವಾಯಿವನ್ನಬರ ತವಕದಿಂದ ಮೇಲುವಾಯಿದ ನೋಡವ್ವಾ ! ಮನದೊಳಗೆ ಮನವಾಗಿ, ಪ್ರಾಣದೊಳಗೆ ಪ್ರಾಣವಾಗಿ, ಕಾಯದೊಳಗೆ ಕಾಯವಾಗಿ, ಕೂಡಿದ ನೋಡವ್ವಾ! ತವಕಕ್ಕೆ ತವಕ ಮಿಗೆ ಮೇಲುವರಿದು ಕೂಡಿದಂತೆ ಕೂಡುವೆ ಉರಿಲಿಂಗದೇವನ.

೪೧. ಹಾಡುವೆ ನಲ್ಲನ. ಬೇಡುವೆ ನಲ್ಲನ. ಕೂಡುವೆ ನಲ್ಲನ. ನಿಚ್ಚ ನಿಚ್ಚ ಕೇಳಾ ಕೆಳದಿ. ಅವನೇ ಸುಖನೆನಗೆ. ಅವನೇ ಸಖನೆನಗೆ. ಅವನೇ ಪ್ರಾಣವು ಕೇಳಾ ಕೆಳದಿ. ಉರಿಲಿಂಗದೇವನೆನಗೆ ಸಂಜೀವನ ಕೇಳಾ ಕೆಳದಿ.

---

## ಶರಣ.

೪೨. ಲೋಕದಂತೆ ಬಾರರು. ಲೋಕದಂತೆ ಇರರು. ಲೋಕದಂತೆ ಹೋಗರು ನೋಡಯ್ಯ. ಪುಣ್ಯದಂತೆ ಒಪ್ಪರು. ಜ್ಞಾನದಂತೆ ಇಪ್ಪರು. ಮುಕ್ತಿಯಂತೆ ಹೋಹರು ನೋಡಯ್ಯ. ಉರಿಲಿಂಗದೇವಾ ನಿಮ್ಮ ಶರಣರು ಉಪಮಾತೀತರಾಗಿ ಉಪಮಿಸಬಾರದು.

೪೩. ಅರಿದಡೆ ಶರಣ. ಮರೆದಡೆ ಮಾನವ. ಪಾತಕನು ಹೊಲೆಯ. ನಾನೇತಕ್ಕೆ ಬಾತೆ? ಹೊತ್ತಿಗೊಂದು ಪರಿಯ ಗೋಸುಂಬೆಯಂತೆ. ಈಶನ ಶರಣರ ಕಂಡು ಉದಾಸೀನವ ಮಾಡುವ, ದಾಸೋಹವನರಿಯದ ದೂಷಕನು ನಾನಯ್ಯ. ಈ ಬುದ್ಧಿಯ ಹೇಳಿ ಬೇಸತ್ತೆನೀ ಮನಕ್ಕೆ. ಈಶನೀ ಸಲಹಯ್ಯ ಉರಿಲಿಂಗತಂದೆ.

---

## ಐಕ್ಯ.

೪೪. ನೆನಹಿನ ನಲ್ಲನು ಮನೆಗೆ ಬಂದರೆ ನೆನವುದಿನ್ನಾರನು ಹೇಳವ್ವಾ! ನೆನೆವ ಕ್ರಿಯಲಿ ನೆರೆದು ಸುಖಿಯುಹುಲ್ಲದೆ, ನೆರೆವುದಿನ್ನಾರನು? ನೆನಹಿನ ನಲ್ಲ ಉರಿಲಿಂಗದೇವನ ಕಂಡ ಬಳಿಕ ನೆನೆವುದಿನ್ನಾರನು ಹೇಳವ್ವಾ?

೪೫. ನಲ್ಲನನೊಲ್ಲೆನೆಂದು ಮುನಿದು ನಾನಡಗಲು, ಅಡಗುವ ಠಾವೆಲ್ಲಾ ತಾನೇ ನೋಡೆಲಗವ್ವಾ! ನಲ್ಲನಿಲ್ಲದೆಡೆ ಇಲ್ಲ. ಅಗಲಲಿಕೆ ಇಂಬಿಲ್ಲ. ಮುನಿದು ನಾನೇಗುವೆನು? ಶರಣಾಗತಿ ಹೋಗುವೆನೆನ್ನ ಉರಿಲಿಂಗದೇವರಿಗೆ.

೪೬. ಇಂಬಿನ ಚುಂಬನವಮೃತಾಹಾರ. ಆಲಿಂಗನವೇ ಆಭರಣ. ಸೋಂಕೇ ಸುವಸ್ತ್ರ. ನೋಟವೇ ಕೂಟ. ಒಡನಾಟವೇ ಅಷ್ಟಭೋಗವೆನಗೆ ಉರಿಲಿಂಗದೇವನ ಕೂಟ ಪರಾತ್ಪರ ವಾಙ್ಮನಾತೀತ ಪರಮ ಸುಖವನೇನೆಂಬೆನವ್ವಾ!

# ಸ್ವತಂತ್ರ ಸಿದ್ಧಲಿಂಗೇಶ್ವರರು
## ನಿರೂಪಿಸಿದ
# ಮುಕ್ತ್ಯಾಂಗನಾಕಂಠಮಾಲೆ.



ವೇದಾಗಮ ಶಾಸ್ತ್ರವಿಶಾರದನಾದ ತಾರಕಾದ್ಯನೇಕೋಪದೇಶ ಕರ್ತೃವಾದ ಪಿಂಡ ಮಧ್ಯದಿ ನಾದ ಬಿಂದುಗಳ ತೋರುವಲ್ಲಿ ಕುಶಲನಾದ ಶಿವಯೋಗದಲ್ಲಿ ಸಂಪನ್ನನಾದ ಷಟ್‌ಸ್ಥಲ ಚಕ್ರೇಶ್ವರನಾದ ಸ್ವತಂತ್ರ ಸಿದ್ಧಲಿಂಗೇಶ್ವರನು ತಮ್ಮ ನಿಜಾನುಭಾವದ ವಚನಾಮೃತ ಶರಧಿಯೊಳಗೆ ಅನರ್ಘ್ಯ ರತ್ನಂಗಳನೆ ತೆಗೆದು ಸರಂಗೊಳಿಸಿ ಮುಕ್ತ್ಯಾಂಗನೆಯ ಕಂಠಮಾಲೆಯೊಳೊಪ್ಪುವ ವಚನಂಗಳೊಳಗೆ ಅತ್ಯಂತ ಗೌಪ್ಯವಾದ ವಚನಂಗಳನೆ ತೆಗೆದು ಮುಮುಕ್ಷುಗಳ ಹೃದಯಾಂತರಾಳವನೆ ತೊಳಗಿ ಬೆಳಗಲೆಂದು ಕನ್ನಡಿಸಿ ಪೇಳ್ವಿನದೆಂತೆಂದೊಡೆ:—

### ಪೀಠಿಕೆ.

ಏನೂ ಏನೂ ಇಲ್ಲದಂದು, ವಸ್ತುನಿರವಯುವಾಗಿದ್ದಿತ್ತು. ನಿರವಯ ಬ್ರಹ್ಮವು ತಾನೇ ವ್ಯಂಜನ ಹಕಾರವು. ಆ ನಿರವಯ ಬ್ರಹ್ಮದಿಂದೆ ನಿರಂಜನ ಬ್ರಹ್ಮವೆಂಬ ಹಕಾರ ಪ್ರಮಣವು ಉದಯವಾಯಿತ್ತು. ಮುಂದೆ ಶೂನ್ಯಪ್ರಣಮವೆಂಬ ಕ್ಷಕಾರ ಪ್ರಣಮವು ಸಂಜನ್ಯವಾದುದು. ಇಲ್ಲಿಂದ ಮುಂದೆ ನಿಃಕಲ ಬ್ರಹ್ಮವೆಂಬ ಪ್ರಣಮವು ಉದ್ಭವವಾಯಿತ್ತು.

ಆ ನಿಃಕಲ ಬ್ರಹ್ಮವು ತಾನೋರ್ವನೆಯಾಗಿ ಬೈಲಿಗನಾಗಿ ಧ್ಯಾನ ಪೂಜೆಗಳಿಲ್ಲದಿರಲಾಯಿತ್ತೆಂದು ತನ್ನ ಸರ್ವಕಲಾಭಿಜ್ಞತ್ವವನೊಳಕೊಂಡು ಇದಕ್ಕೆ ಜಗದ್ವೈಭವದ ಲೀಲಾವಿನೋದ ಮಾಡಿ ನಟಿಸಬೇಕೆಂದು ನೆನಹು ದೋರಲು ಆ ನೆನೆದ ನೆನಹೇ ನಿರ್ಧರಿಸಿ ಮೂಲ ಜ್ಞಾನ ಚಿತ್ತೋದ್ಭವವಾಯಿತ್ತು. ವಕಾರ ಬಕಾರ ಸಕಾರವೆಂಬ ಚಿನ್ನಾದ ಚಿದ್ಬಿಂದು ಚಿತ್ಕಳೆ ಪುಟ್ಟಿದವು. ಇವು ಮೂರು ಮೂಲಜ್ಞಾನ ಚಿತ್ತು ಇಂತೀ ಚತುರ್ವಿಧವು ಗಟ್ಟಿ

ಗೊಂಡು ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ಉದಯವಾಯಿತ್ತು. ಆ ಮಹಾಲಿಂಗದಿಂದೆ ಪರನಾದ ಪರಬಿಂದು ಪರಕಳೆ ಎಂಬ ತ್ರಿವಿಧವು ಗಟ್ಟಿಗೊಂಡು ಸಾಕಲ್ಯಪ್ರಣಮಸ್ವರೂಪವಾದ ಸದಾಶಿವ ತತ್ವಮೂರ್ತಿ ಸಂಜನ್ಯವಾಯಿತ್ತು. ಆ ಸದಾಶಿವ ಮೂರ್ತಿಯ ಪಂಚಮುಖಂಗಳಿಂದೆ ಪಂಚಭೂತಂಗಳು ಪುಟ್ಟಿದವು. ಗೊಪ್ಯಮುಖದಲ್ಲಿ ಆತ್ಮನು ಪುಟ್ಟಿದನು.

ಒಬ್ಬ ಸೂರ್ಯನು ಅನಂತ ಘಟದ ಮಧ್ಯ ಜಲದಲ್ಲಿ ಬಿಂಬಿಸಿ ತೋರುವಂತೆ, ಒಬ್ಬ ಆತ್ಮನು ಪರಚಿಂತನಾತ್ಮಕನಾಗಿ ದೇಹೋಹಂ ಮೆನಲು ಪರಮೇಶ್ವರನ ಐದುಮುಖದಿಂದೊಗೆದ ಪಂಚಭೂತ ಜಂಜಡ ಕಾಯ ಸಂಬಂಧವಾಯಿತ್ತು. ಆ ದೇಹದ ಮರವೆಯಿಂದ ಮಾಯೆಯ ಕಲ್ಪಿಸಿ ಮಾಯಾಮೋಹದಿಂದ ಪಾಶಬದ್ಧೋದ್ಭವವೇ ಜೀವ ಎಂದು ಜೀವನಾದನು.

ಇಂತಪ್ಪ ಜೀವನು ಪೃಥ್ವಿ ಅಪ್ಪು ತೇಜ ವಾಯು ಆಕಾಶಗಳಲ್ಲಿ ಉದ್ಭಿಜ, ಸ್ವೇದಜ, ಅಂಡಜ, ಜರಾಯುಜ ಇಂತು ಚೌರಾಸಿ ಲಕ್ಷ ಜೀವರುಗಳಾಗಿ ಭವವೆತ್ತಿ ರಾಟವಾಳದ ಗುಂಡಿಗೆಯಂತೆ ತುಂಬುತ್ತೆ ಕೆಡವುತ್ತೆ ಮರಳಿ ತುಂಬುತ್ತೆ ಹೀಗೆ ತಿರುತಿರುಗಿ ಬರುವಲ್ಲಿ ಲೆಕ್ಕವಿಲ್ಲದ ಶರೀರವ ತೊಟ್ಟು ತಿಟ್ಟನೆ ತಿರುಗಿ ತೊಳಲಿ ತೊಳಲಿ ಬರಲಾರೆ, ಸತ್ವಗುಂದಿ ಭವರೋಗ ವೈದ್ಯನಾದ ಗುರುದೇವನ ಸಾರ್ದು, ತನ್ನ ಸಲಹೆಂದು ಬಹುವಿಧ ಸ್ತೋತ್ರಂಗಳ ಮಾಡಿ ಕುಳಿತಿರಲು ಗುರುವು ಎಲೆ ಮಗನೆ ಕೇಳು, ನೀನು ತಿಳಿಯಬೇಕಾದರೆ ಮಹದಾದಿಯನರಿದಲ್ಲದೆ ಆಗದೆಂದೆನಲು ಎಲೆ ಸ್ವಾಮಿ ನೀವೇ ಕರುಣದಿಂದ ಹೇಳಿ ಎನ್ನ ಕೃತಾರ್ಥನ ಮಾಡೆನಲು ಜ್ಞಾನೋನ್ಮುಖನಾಗಿ ಜ್ಞಾನಕಲಾತ್ಮನೇ ಕೇಳು ಎಂದು ಪೇಳುತ್ತಿರ್ದನು. 'ಮಹಾಲಿಂಗಮಿದಂ ದೇವಿ ಮನೋತೀತಂ ಮೇ ಅಗೋಚರಂ॥ ನಿರ್ನಾಮಂ ನಿರ್ಗುಣಂ ನಿತ್ಯಂ ನಿರಂಜನ ನಿರಾಮಯಂ' ॥ ಎಂದು ದೇವಿಯರಿಗೆ, ಶಿವನು ಹೇಳಿಹನು ಕೇಳೆಂದು ಪೇಳುತ್ತಿರ್ದನು. ಮಹಾಲಿಂಗವೆಂಬುದು ಮನೋನೇತ್ರಂಗಳಿಗೆ ಗೋಚರಿಸದೆ ಇದ್ದಂಥಾದ್ದು ಮತ್ತೆ ನಿರ್ನಾಮ, ನಿರ್ಗುಣ, ನಿತ್ಯ, ನಿರಂಜನ ಇಂತೀ ಪಂಚವಾಯುವನುಳ್ಳುದೇ ಮಹದಾದಿ ಎನಿಸುವದು. ಸಕಲಬ್ರಹ್ಮ ಮೂಲಚಿತ್ತು ಚಿತ್ತನಂದ ಚಿದ್ಬಿಂದು ಚಿತ್ಕಳೆ ಕೂಡಿಕೊಂಡು ಲಿಂಗವೆನಿಸಿ ತದುವೇ

ನಿನ್ನ ಪ್ರಾಣಲಿಂಗವೆಂದು ಚೆನ್ನಾಗಿ ತಿಳಿದುನೋಡು ಎನಲು, ಹರಹರಾ ನಾನದೇಂ ಕೃತಾರ್ಥನು? ಇಂತಪ್ಪ ಘನಲಿಂಗ ಎನ್ನ ಪ್ರಾಣವೆಂದು ತಿಳುಹುವರಾರು? ನಿಮ್ಮ ಕೃಪಾಪ್ರಸಾದವ ಪಾಲಿಸಿದಿರಿ. ಮುಂದೆ ಮಹಾ ಲಿಂಗ ಹೇಗೆ ಇದ್ದಿತ್ತು ಎನಲು-

ಕೇಳಯ್ಯ ಎಲೆ ಮಗನೇ.

ಆ ಮಹಾಲಿಂಗದಿಂದ ಪರನಾದ ಪರಬಿಂದು ಪರಕಳೆಗಳಾದವು. ಅವೇ 'ಓಂ' ಎಂಬ ಪ್ರಣವು ಉದಯವಾಯಿತ್ತು. 'ಓಂ' ಎಂಬ ಊರ್ಧ್ವ ಸ್ವರವನುಳ್ಳ ಷಟ್‌ಕೃತಿಗಳು ಸಂಪೂರ್ಣವಾದ ಸಾಕಲ್ಯ ಪ್ರಣವುವು. ಷಟ್‌ಸ್ಥಲಂಗಳಿಗೆಯೂ ಸಪ್ತಕೋಟಿ ಮಹಾಮಂತ್ರಂಗಳಿಗೆಯೂ ವೇದಾ ಗಮಂಗಳಿಗೆಯೂ ಕ್ರಿಯಾದಿ ಪಂಚಶಕ್ತಿಗಳಿಗೆಯೂ ಅನಂತಕೋಟಿ ಬ್ರಹ್ಮಾಂಡ ಪಿಂಡಾಂಡದ ಒಳಗೊರಗೆಲ್ಲಿಯೂ ಕಿಷ್ಕಿಂಧವಾಗಿ ಅಗಣಿತ ಚಂದ್ರ ಸೂರ್ಯ ಕಲಾಗ್ನಿಗಳಿಗೆ ತಾನೇ ಪ್ರಕಾಶವೆನಿಸಿ ಜ್ಯೋತಿರೂಪ ವಾಗಿ ಬೆಳಗುತಿರ್ಕುಂ. ಬಳಿಕ ಸರ್ವಜ್ಞತ್ವ, ನಿತ್ಯ ತೃಪ್ತತ್ವ, ಅನಾದಿ ಬೋಧತ್ವ, ಸ್ವತಂತ್ರತ್ವ, ಅಲುಪ್ತತ್ವ, ಅನಂತಶಕ್ತಿತ್ವ, ಷಡಧ್ವಗಳನೊ ಳಕೊಂಡು ತಾನೇ ತೋರುವ ಚಿದ್ಬಿಂದುವನೇ ಎಲೆ ಮಗನೇ ವಚನ ದಲ್ಲಿ ಪೇಳುವೆವು. ನೀನು ಚನ್ನಾಗಿ ಕೇಳು.

## ವಚನಗಳು.

(೧) ಎಲೆ ಅಯ್ಯ, ನೀವು ನಿರಾಕಾರವಾಗಿದ್ದಿರಾಗಿ, ಆ ನಿರಾ ಕಾರ ಪಂಚಮುದಲ್ಲಿ ನಿಂದರೆ ನಾದ ತೋರಿತ್ತು. ಆ ನಾದ ಬಿಂದು ಗಳನೊಡೆದು ಮೂಡಿ ನಿರುಪಾಧಿಕ ಜ್ಯೋತಿಯಂತೆ ಸಕಲ ನಿಃಕಲ ರೂಪಾದಿರಯ್ಯ. ರವಿಕೋಟಿ ತೇಜಪರಿಪೂರ್ಣ ಮೂಲ ಚೈತನ್ಯ ರೂಪು ನೀವು ಕಂಡಿರಯ್ಯ. ಭೇದಿಸಬಾರದಭೇದ್ಯ ಸಾಧಿಸಬಾರದಸಾಧ್ಯ ನೀವು ಕಂಡಿರಯ್ಯ. ನಿಮ್ಮ ಸಹಜದ ನಿಲವನಾರು ಬಲ್ಲರು? ನಿಮ್ಮಿಂದ ನೀವೇ ರೂಪಾದಿರಯ್ಯ. ನಿಮ್ಮ ಪರಿಮಾಣ ಪಥದಲ್ಲಿ ಒಂದನಂತ ಕಾಲ ಇರ್ದಿರಯ್ಯ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ.

**ಟೀಕು:— ಸಚ್ಚಿದಾನಂದ ನಿತ್ಯ ಪರಿಪೂರ್ಣವೆಂಬ ಪಂಚಪದ ಲಕ್ಷಿತವಾದ, ನಿರವಯ ನಿರಂಜನ ಶೂನ್ಯ ನಿಃಕಲ ಮಹಾಘನವೆಂಬ**

ಕುರುಹುದೋರದೆ ತಾನೇ ಬಯಲಿಗನಾಗಿರ್ದಲ್ಲಿ ಆ ಬಯಲೇ ಪಂಚ ವಿಧವಾದ 'ಓಂ' ಇತಿ ಸುನಾದವೇ ತಾ ಮೊದಲು ಸಂಜನ್ಯವಾಯಿತ್ತಾಗಿ, ಆದೀಗ ಎಲೆ ಅಯ್ಯಾ ನೀವು ನಿರಾಕಾರವಾಗಿದ್ದಿರಾಗಿ ಆ ನಿರಾಕಾರವೇ ಪಂಚಮುದಲ್ಲಿ ನಿಂದರೆ ನಾದ ತೋರಿತ್ತು ಎಂಬ ಶಬ್ದಕ್ಕರ್ಥ. ಆ ಪಂಚ ಲಕ್ಷಣವನುಳ್ಳ 'ಓಂ' ಇತಿ ಸುನಾದದಿಂದ ಚಿದ್ಬಿಂದು ಉದಯವಾಗಿ ಆ ಚಿದ್ಬಿಂದುವಿನ ಕ್ಷುಧಾಬ್ಧಿ ಮಧ್ಯಂಗಳಲ್ಲಿ ಮಾರುತ ದಂಡಾವರ್ತ ಕಾಣಲ್ಪಡುವ ಹಾಗೆ ಆ ಚಿದ್ಭೂಮಿ ಚಿದಾಕಾಶ ಮಧ್ಯದಲ್ಲಿ ನಾದ ಬಿಂದು ಕಳೆ ಕೂಡಿ ಸ್ವಯಂಜ್ಯೋತಿ, ತನಗೆ ತಾನೇ ಎಂಬ ಶಬ್ದಕ್ಕರ್ಥ. ಅಖಂಡ ಜ್ಯೋತಿ ಎಂಬುದು ಹಿಂದೆ ಹೇಳಿದ ಪಂಚಲಕ್ಷಣವನೊಳಕೊಂಡು ಮುಂದೆ ಜಗದುತ್ಪತ್ತಿಮಾಡಲುಳ್ಳುದಾಗಿ ಅನಂತ ಸೂರ್ಯ ಪ್ರಕಾಶದಿಂ ಪಿಂಡಬ್ರಹ್ಮಾಂಡಂಗಳಿಗೆ ಮೂಲ ಚೈತನ್ಯದಿಂ ವ್ಯಾಪಕವಾಗಿ ಇಂತಪ್ಪ ಬ್ರಹ್ಮವು ಷಟ್‌ಸಮಯ ವ್ರತಗಳ ಸಾಮಾನ ವ್ರತಗಳ ಸಾಮಾನ್ಯ ದೃಷ್ಟಿಗೆ ಗೋಚರವಾಗದಾಗಿ ಎಂಬುದೀಗ ಸಕಲ ನಿಃಕಲರೂಪಾದಿರಯ್ಯಾ, ರವಿಕೋಟಿತೇಜಸಂಪೂರ್ಣಮೂಲಚೈತನ್ಯ ರೂಪ ಕಂಡಯ್ಯಾ ಭೇದಿಸಬಾರದಭೇದ್ಯ ಸಾಧಿಸಬಾರದಸಾಧ್ಯ ಕಂಡಯ್ಯಾ ಎಂಬುದಕ್ಕರ್ಥ. ಅಂತಪ್ಪ ಪರಬ್ರಹ್ಮವು ತಾನು ತಾನೇ ಹುಟ್ಟಿ ತನ್ನ ಲೀಲಾ ಮಾತ್ರದಿಂದ ಜಗದ್ವೈಭವ ನಟಿಸಿ ತನಗೆ ತಾನೇ ಸಾಕಾರ್ಯ ಲೀಲೆಯ ಮಾಡಿ ಲೀಲೆಯಾದಡೆ ಉಮಾಪತಿಯಾಗುತ್ತ, ಲೀಲೆ ತಪ್ಪಿದಡೆ, ಸ್ವಯಂಭುವಾಗುತ್ತ ಮರಳಿ ಎಚ್ಚತ್ತು, ಆನಂದವನೈದುವನೆಂಬುದೀಗ ನಿಮ್ಮ ನಿಜದ ನಿಲವನಾರು ಬಲ್ಲರು? ನಿಮ್ಮಿಂದ ನೀವೇ ರೂಪಾದಿರಯ್ಯಾ. ನಿಮ್ಮ ಪರಿಣಾಮದ ಪಥದಲ್ಲಿ ಒಂದನಂತ ಕಾಲವಿರ್ದಿರಯ್ಯ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ಎಂಬುದರ್ಥ.

(೨) ಅಜ್ಞಾನ ಕಲಾತ್ಮಂಗೆ ಮಹದಾದಿಯ ಪೇಳುವೆ. ಆ ಮಹದಾದಿ ಎಂಬುದು ನಿನ್ನ ದಿವ್ಯ ಶರೀರವೆಂದು ಪೇಳುತ್ತಿರ್ದನು. ಚಂದ್ರಕಾಂತದ ಶಿಲೆಯಲ್ಲಿ ಉದಕ ಒಸರದಿಪ್ಪಂತೆ ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿ ಸ್ಫುರಿಸದಿಪ್ಪಂತೆ, ಬೀಜದೊಳಗಣ ವೃಕ್ಷ ಅಂಕುರಿಸದಿಪ್ಪಂತೆ ಇಪ್ಪನಯ್ಯಾ ಶಿವನು ಪಿಂಡದೊಳಗೆ ಪಿಂಡರೂಪಾಗಿ ಈ ಪರಿಯಲ್ಲಿ ಗೋಪ್ಯವಾಗಿರ್ದು, ಎನ್ನಲ್ಲಿ ಕಾಣಿಸಿಕೊಳ್ಳದಿರ್ದರಿ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಟೀಕು. — ಚಂದ್ರಕಾಂತದ ಶಿಲೆಯಲ್ಲಿ ಉದಕ ಒಸರದೆ ಇರುವ ಹಾಗೆ ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿ ಸ್ಫುರಿಸದೆ ಇರುವ ಹಾಗೆ ಬೀಜ ದೊಳಗಣ ವೃಕ್ಷ ಅಂಕುರಿಸದಿಪ್ಪಂತೆ ಚಿದ್ಬಿಂದು ಎಂಬುದು ಸಪ್ತಧಾತು ಪಿಂಡದಲ್ಲಿ ಗೋಪ್ಯವಾಗಿಹುದು. ಅದು ಹೇಗೆಂದೊಡೆ ಗೋಪ್ಯ ಮುಖ ದಲ್ಲಿ ಪುಟ್ಟಿದಾತ್ಮನು ತನ್ನ ನಿಜಮಂ ಮರೆದು ಪುಟ್ಟುವಲ್ಲಿ ಪೃಥ್ವಿ ಯಲ್ಲಿ ತತ್ತಿ ಒಡೆದು ಹುಟ್ಟುವ ಅಂಡ ಪ್ರಾಣಿ ೨೧ ಲಕ್ಷ, ಅಪ್ಪುವಿನಲ್ಲಿ ಬೆವರಿ ಪುಟ್ಟುವ ಪಿಪೀಲಿಕಾದಿ ಸ್ವೇದಜ ಪ್ರಾಣಿ ೨೧ ಲಕ್ಷ, ವಾಯುವಿ ನಲ್ಲಿ ಮನಸಿನ ಬಳಿವಿಡಿದು ಪುಟ್ಟುವ ಮನುಷ್ಯಾದಿ ಜರಾಯುಜಪ್ರಾಣಿ ೨೧ ಲಕ್ಷ, ಆಕಾಶದಲ್ಲಿ ಪರಮಾಣು ಪುಂಜವೇ ಬೀಜಂಗಳಾಗಿ ಪುಟ್ಟುವ ತೃಣಗುಲ್ಮಲತೆ ವೃಕ್ಷ ಮುಂತಾದ ಅನೇಕ ಉದ್ಭಿಜ ಪ್ರಾಣಿ ೨೧ ಲಕ್ಷ, ಇಂತೀ ೮೪ ಲಕ್ಷ ಜಾತಿ ಭೇದಾಕಾರವಾಗಿ ಜೀವನು ಪುಟ್ಟಿದ ಯೋನಿ ೮೪ ಲಕ್ಷ, ಅದಲ್ಲದೆ ಮತ್ತೆ ಅಲ್ಲಿ ಆದರಿಂದ ಪೃಥ್ವಿ ಅಪ್ಪು ಆಕಾಶ ಎಂಬ ಯೋನಿಗಳಲ್ಲಿ ಆತ್ಮನು ತಿರುತಿರುಗಿ ಬರುವಲ್ಲಿ ಅಗ್ನಿ ಎಂಬ ತತ್ವವು ಮಧ್ಯಸ್ಥವಾಗಿಹುದು. ಆ ಅಗ್ನಿಯಲ್ಲಿ ಪುಟ್ಟಿದ ಕಾರಣ ಅದೇ ಸುಷುಮ್ನ ನಾಡಿ ಎನಿಸುವುದು. ಅದು ಹೇಗೆಂದಡೆ ಆ ಸುಷುಮ್ನ ನಾಡಿಗೆ ಅಗ್ನಿ ನಾಳವೆಂದು ಎಲ್ಲ ಶಾಸ್ತ್ರಂಗಳೊಳಗೆ ಪ್ರಸಿದ್ಧನಾಗಿಹುದು. ಅಗ್ನಿ ಇಲ್ಲದ ಬಳಿಯಲ್ಲಿ ಜೀವವಿಲ್ಲದ ಕಾರಣ ಜೀವಂಗೆ ಚೈತನ್ಯವಾಗಿ ಜೀವನು ೨೫ ತತ್ವಗಳ ವ್ಯವಹಾರಕ್ಕೆ ತನ್ನೊಳಗೆ ಅವಕಾಶವ ಕೊಟ್ಟು ಚಿದ್ಬಿಂದು ವಿಗೆ ತಾನೇ ಆಶ್ರಯವಾಗಿ ಇಪ್ಪುದು. ಸಪ್ತಧಾತು ಸಮ್ಮೇಳದಿಂದ ಸುಷು ಮ್ನನಾಡಿಯು ಒಳಗೆ ಚಿದ್ಬಿಂದು ಗೋಪ್ಯವಾಗಿ ಶಿವಶರಣನೊಳಗೆ ಕಾಣಿ ಸದೆ ಇದ್ದಿರಿ ಎಂಬುದೇ ಈ ವಚನದ ತಾತ್ಪರ್ಯಾರ್ಥ.

(೩) ತನುಪಿಂಡ, ವಾಯುಪಿಂಡ, ಪಿಂಡವು ಅಲ್ಲ. ಆದಿಪಿಂಡವಿಡಿದು ಬಂದ ಜ್ಞಾನ ಪಿಂಡವೇ ಪಿಂಡ. ಅದನರಿಯಲಿಲ್ಲ. ಅದೆಂತೆಂದೊಡೆ ಕ್ಷೀರ ದೊಳಗಣ ಆಜ್ಯದಂತೆ, ಪಾಷಾಣದೊಳಗಣ ಪಾವಕನಂತೆ, ಆಗಿರ್ಪು ದಾಗಿ ಅಂತಪ್ಪ ನಿರ್ಮಲ ಪಿಂಡ ನಿಮ್ಮ ಶರಣಂಗಾಯಿತ್ತು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಟೀಕು:— ಪಿಂಡ ಶಬ್ದ ನಾಮವು ಬಹು ವಿಧವಾಗಿಪ್ಪ ಕಾರಣ ಪಿಂಡ ಪಿಂಡ ಎಂಬುದೇನು ಎಂಬರ್ಥ. 'ಸಪ್ತಧಾತು ಸಮಂ ಪಿಂಡಂ' ಎಂದು ಸ್ಥೂಲಶರೀರವೇ ಪಿಂಡವೆಂದು ನಂಬಿಕೊಂಡಿರುವದು ಲೌಕಿ

ಕರು. ಸೂಕ್ಷ್ಮಶರೀರ ಸ್ವರೂಪ ಮನವಾದ ಕಾರಣ ಆ ಮನವೇ ಪಿಂಡ ವೆಂದು ನಂಬುವದು ಆತ್ಮಯೋಗಿಗಳು. ಪಂಚ ಪ್ರಾಣವಾಯುವೇ ಪಿಂಡ ವೆಂಬರು ಹಠಯೋಗಿಗಳು. ಇವು ಶಿವಶರಣನ ಶರೀರವಲ್ಲವೆಂಬುದೀಗ ತನುಪಿಂಡವೇ ವಾಯುಪಿಂಡವೇ ಪಿಂಡವಲ್ಲವೆಂಬುದರ್ಥ. ಆ ಶರಣನ ಪಿಂಡವು ಆವುದು ಎಂದರೆ ಹಿಂದೆ ಪೀಠಿಕೆಯಲ್ಲಿ ಹೇಳಿದ ನಿಃಕಲ ಲಿಂಗದಲ್ಲಿ ಒಗೆದ ಮೂಲ ಜ್ಞಾನ ಚಿತ್ತುವೇ ಶಿವಶರಣನಂಗವೆಂಬು ದೀಗ ಆದಿವಿಡಿದು ಬಂದ ಜ್ಞಾನವೇ ಪಿಂಡವೆಂಬುದರ್ಥ. ಅಂತಪ್ಪ ಮೂಲ ಚಿತ್ತುವನು ತಿಳಿದಿಹೆನೆಂಬವರಲ್ಲಿ ಷಟ್‌ಸಮಯ ವ್ರತಿಗಳ ಸಾಮಾನ್ಯ ದೃಷ್ಟಿ ಎಂಬ ವಾಙ್ಮನಸ್ಸಿಗೆ ಗೋಚರಿಸದು. ಅದೇನು ಕಾರ ಣವೆಂದೊಡೆ ಕ್ಷೀರದೊಳಗಣ ಘೃತದಂತೆ ಪಾಷಾಣದೊಳಗಣ ಪಾವ ಕನಂತೆ ಶಿವಶರಣನೊಳಗಿಪ್ಪುದು. ಅದೆಂತೆಂದೊಡೆ ಮೂಲ ಚಿತ್ತು ಎಂದಡೂ, ಶರಣ ಎಂದಡೂ, ಒಂದೇ ಪರಿಯಾಯ. ಅದು ಸ್ವಯಂ ಜ್ಯೋತಿ ಎಂಬ ಶಬ್ದವು. ಸ್ವಯಂ ಎಂಬ ಶಬ್ದ ಜ್ಯೋತಿ ಎಂಬ ಶಬ್ದದ ಹಾಗೆ ಬೇಧವಲ್ಲದ ರೂಪಾಂತರಕ್ಕೆ ಭೇದವಿಲ್ಲದಂತೆ ಮೂಲ ಚಿತ್ತುವೇ ಶರಣನ ನಾದವೆಂಬುದೀಗ ಅದನರಿಯಲಿಲ್ಲ. ಅದು ಕ್ಷೀರದೊಳಗಣ ಆಜ್ಯ ದಂತೆ ಪಾಷಾಣದೊಳಗಣ ಪಾವಕನಂತೆ ಅಡಗಿರ್ಪುದಾಗಿ ಅಂತಪ್ಪ ನಿರ್ಮಲ ಪಿಂಡ ನಿಮ್ಮ ಶರಣಂಗಿತ್ತು ನಿಜಗುರು ಸ್ವತಂತ್ರ ಸಿದ್ಧಲಿಂಗೇ ಶ್ವರನೇ ಸ್ಥಿರವೆಂಬುದರ್ಥ.

(೪) ಹಿಂದಣದನಾದಿ ಕರಣದ ಕಿಲ್ಬಿಷ ಹರಿಯಿತ್ತು. ನಿರ್ಮಲ ತನುವಾಯಿತ್ತು. ಆ ನಿರ್ಮಲ ತನುವಿನಲ್ಲಿ ಶಿವಪ್ರಸಾದವೆಡೆಗೊಂಡಿ ತ್ತಾಗಿ ಭಕ್ತಿಪಿಂಡವಾಯಿತ್ತು. ಆ ಭಕ್ತಿ ಪಿಂಡದಲ್ಲಿ ನೀವಿಪ್ಪರಾಗಿ ಶರ ಣಂಗೆ ಪಿಂಡನಾಮವಾಯಿತ್ತು. ಅದು ಕಾರಣ ನಮಗೂ ನಿಮಗೂ ಒಂದೇ ಭಕ್ತಿಪಿಂಡವಾಯಿತ್ತು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಟೀಕ :— ಆವನೊಬ್ಬಾತ್ಮನು ಅನಂತ ಜನ್ಮದಲ್ಲಿ ಮಾಡಿದ ಪುಣ್ಯವು ಮನುಷ್ಯ ಜನ್ಮದಲ್ಲಿ ಲಂಬಿಸಲು ಮನ ವಾಚಿಕ ಕಾಯಿಕವೆಂಬ ತ್ರಿಕ ರಣಂಗಳ ಕಳಂಕ ಹರಿದು ಮಲತ್ರಯ ಪರಿಪಾಕವಾಗಲು ಅದೀಗ ಕಾರಣದ ಕಿಲ್ಬಿಷ ಹರಿಯುತ್ತಾನೆ. ನಿರ್ಮಲತನುವಾಯಿತ್ತೆಂಬುದರ್ಥ. ಮಲತ್ರಯದ ಪರಿಪಾಕಕ್ಕೆ ಅನುಗ್ರಹ ಶಕ್ತಿಯೇ ಕಾರಣ. ಆ ಅನು

ಬಗೆದು) ನಡೆಯುವಂತೆ ಮಾಡಬೇಕು. ಇದರಿಂದ ಕ್ರಿಮಿಕೀಟಕ ಮೊದಲ್ಗೊಂಡು ಮನುಷ್ಯ ಕಡೆಯಾಗಿ, ಎಲ್ಲ ಜೀವಿಗಳೂ ತನ್ನ ಸ್ವರೂಪವೇ ಎಂದು ಅರಿಕೆಯಾಗುವದು. ಮುಂಚಿನ ಭೇದಭಾವನೆಯು (ಮಾಯಾಮಲವು) ಅಳಿಯುವದು. ಹಿಂಸಾ ವೃತ್ತಿಯು ನಿಂತು ಹೋಗಿ, ಭೂತದಯೆಯು ನೆಲಿಸುವದು. ಅಹಂಕಾರ ಮಮಕಾರಗಳಿಗೆ ಸ್ಥಾನವೇ ಉಳಿಯುವದಿಲ್ಲ. ಹೀಗಾದರೆ ಮನವನ್ನು ಲಿಂಗಾರ್ಪಿತ ಮಾಡಿದಂತಾಯಿತು.

ಜಂಗಮಕ್ಕೆ ಧನವನೊಪ್ಪಿಸುವದು— ಮಾನವ ಬಳಗವನ್ನಷ್ಟೇ ಅಲ್ಲ, ಪ್ರಾಣಿಕೋಟಿಯನ್ನಷ್ಟೇ ಅಲ್ಲ, ವನಸ್ಪತಿ ವರ್ಗವನ್ನೂ ಖನಿಜ ಸಮೂಹವನ್ನೂ ಸಹ ಪರಮಾವಧಿಗೆ ಮುಟ್ಟಿದ ಜ್ಞಾನದ ಬಲದಿಂದ ಸತ್ (ಆತ್ಮ) ಸ್ವರೂಪವಾಗಿಯೇ ಕಾಣುವ ಅತ್ಯುಚ್ಚಭಾವನೆಯು ಗಟ್ಟಿಗೊಳ್ಳುವದೇ ಜಂಗಮ ಸ್ವರೂಪವು. ಇದರಿಂದ ಭಕ್ತನ ಸ್ವತಂತ್ರ ಅಸ್ತಿತ್ವವೇ ನಷ್ಟವಾಗಿ, ಉರಿಯುಂಡ ಕಪ್ಪುರದಂತೆ, ಜಗದ್ವಿಲೀನನಾಗಿ (ಮಹಾಲಿಂಗೈಕ್ಯನಾಗಿ) ಹೋಗುವನು. ಯಾವ ವಿಷಯದಾಸೆಯನ್ನೂ ಮಾಡದೆ ಸಹಜ ವೃತ್ತಿಯುಳ್ಳವನಾಗಿ, ಸರ್ವವನ್ನೂ ಲಿಂಗರೂಪದಲ್ಲೇ ಕಾಣುವನು. ಪೂರ್ಣ ತ್ಯಾಗವೃತ್ತಿಯು (ವೈರಾಗ್ಯವು) ಪ್ರಕಟವಾಗುವದು. ಆಗ ಧನವನ್ನು (ಸರ್ವ ವಿಷಯಪದಾರ್ಥಗಳನ್ನು) ಜಂಗಮಕ್ಕೆ ನೀಡಿದಂತಾಗುವದು. ಇದರಿಂದ ಕಾರ್ಮಿಕ ಮಲವು (ಪಾಪಪುಣ್ಯಾದಿಗಳ ಕಲ್ಪನೆಯು) ಹೇಳ ಹೆಸರಿಲ್ಲದಂತಾಗಿ ಹೋಗುವದು. ಮಾಡುವವನೂ ಮಾಡಿಸಿಕೊಳ್ಳುವವನೂ ಮಾಡುವ ಸಾಧನವೂ ಅಭೇದರೂಪವಾಗಿ ಬಿಟ್ಟಿರುವದು, ಮಹಾಲಿಂಗತ್ವದ ಅಖಂಡ ಸ್ಥಿತಿಯು ಪ್ರಾಪ್ತವಾಗಿರುವದು.

ಹೀಗೆ ಗುರುಲಿಂಗ ಜಂಗಮತ್ರಯಕ್ಕೆ ತನುಮನಧನಗಳನ್ನರ್ಪಿಸಿದರೆ, ಅದು ಪ್ರಸನ್ನವಾಗಿ ಅದರ ಪ್ರಸಾದವು (ಆ ಜ್ಞಾನದ ಸುಪರಿಣಾಮವು) ಪ್ರಾಪ್ತವಾಗುವದು. ಅದರಿಂದ ಭಕ್ತನು ಲಿಂಗರೂಪನಾಗಿ ಅದರಲ್ಲಿ ಸಮರಸ ಹೊಂದುವನು.

ತ್ರಿವಿಧ ದಾಸೋಹದ ಸತ್ಯ ಸ್ವರೂಪವು ಸಂಕ್ಷೇಪತಃ ಮೇಲೆ ವರ್ಣಿಸಿದಂತೆ ಇರುವದು. "ನಾವು ದಾಸೋಹಿಗಳು, ನಮ್ಮದು ದಾಸೋಹಮಠ" ಎಂದು ಹೇಳಿಕೊಳ್ಳುವವರು, ನಮ್ಮಲ್ಲಿ ಅಲ್ಪಸ್ವಲ್ಪ ಕಂಡುಬರುವರು. ಆದರೆ ಅವರ ವರ್ತನವು, ಈ ಒರೆಗಲ್ಲಿಗೆ ಹಚ್ಚಿ ನೋಡಿ

ದರೆ, ಅದೆಷ್ಟು ಮಟ್ಟಿಗೆ ಸರಿಬರುವದು ? ತಿಲಮಾತ್ರವೂ ಇಲ್ಲವೆಂದು ಅತಿ ಕಷ್ಟದಿಂದ ಹೇಳಬೇಕಾಗುವದಲ್ಲವೆ !

ಏನೊಂದರ ಅಪೇಕ್ಷೆಯೂ ಇಲ್ಲದೆ, ಕೇವಲ ನಿರಿಚ್ಛೆಯಿಂದ ಪರಮಾತ್ಮನು ಜಗದ್ಧಿತಾರ್ಥವಾಗಿಯೇ ಲೀಲೆಯನ್ನು ಧರಿಸಿದ್ದಾನೆಂಬದು ಸ್ಪಷ್ಟವು ! ಪ್ರಾಣಿಗಳ ರಕ್ಷಣೆಗಾಗಿಯೇ ಹವೆ, ಬೆಳಕು, ಅನ್ನ, ನೀರು. ಗಿಡಬಳ್ಳಿ, ಹಣ್ಣುಹಂಪಲ, ಹೂಕಾಯಿ, ಇತ್ಯಾದಿಗಳನ್ನೆಲ್ಲ ಸೃಷ್ಟಿಸಿರುವನು. ಪರಹಿತಾರ್ಥವಾಗಿಯೇ ನದಿಗಳು ಹರಿಯುತ್ತವೆ. ಹಸುಗಳು ಹಾಲು ಕರೆಯುತ್ತವೆ. ಮರಗಳು ಫಲಿಸುತ್ತವೆ. ಸೂರ್ಯಚಂದ್ರರು ಬೆಳಗುತ್ತಾರೆ. ಮಳೆ ಸುರಿಯುತ್ತದೆ. ಭೂಮಿ ಬೆಳೆ ಕೊಡುತ್ತದೆ. ಇದನ್ನೆಲ್ಲ ಕಂಡು ಜ್ಞಾನಿಯಾದ ಮನುಷ್ಯನು ತನ್ನ ಬಾಳಾದರೂ ಪರ (ಸಚ್ಚಿದಾನಂದ ಪರಮಾತ್ಮ) ಸೇವೆಗಾಗಿಯೇ-ದಾಸೋಹಕ್ಕಾಗಿಯೇ-ಇರುವದೆಂದು ನಿಶ್ಚಯಿಸಿ ಹಾಗೆ ನಡೆಯುವದು, ಸ್ವಾಭಾವಿಕವೂ ಯೋಗ್ಯವೂ ಅಲ್ಲವೇ ! ಆದುದರಿಂದ ಮನುಷ್ಯನು ಸ್ವತಃ ದೇಹ ಶ್ರಮ ಮಾಡಿ ದುಡಿದು ಸಾತ್ವಿಕತನದಿಂದ ಧನ ಸಂಪಾದಿಸಿ, ಅದರಿಂದ ತನ್ನ ರಕ್ಷಣೆ ಮಾಡಿಕೊಳ್ಳುವದಲ್ಲದೆ, ಪರಹಿತವನ್ನೂ ಕೂಡ ಸಹಜ ದೃಷ್ಟಿಯಿಂದ ಸಾಧಿಸುವದು ಕ್ಷೇಮಕರವಾದುದು. ನಮ್ಮ ಪಂಚಾಚಾರಾಂತರ್ಗತ ಸದಾಚಾರವು ಇವನ್ನೇ ಹೇಳುತ್ತದೆ. ಇದೇ ನಿಜವಾದ ದಾಸೋಹವೃತ್ತಿಯು. ಊರೂರು ಮನೆ ಮನೆ ತಿರುಗಾಡಿ, ಭಿಕ್ಷೆ ಬೇಡಿ ತಂದು, ತಾವು ದಾಸೋಹವನ್ನು ಸಾಗಿಸುತ್ತೇವೆಂದು ತಿಳಿಯುವದು ದೊಡ್ಡದೊಂದು ಭ್ರಮೆಯಲ್ಲದೆ, ಅದರಿಂದ ಅವರಿಗಾವ ಶ್ರೇಯಸ್ಸೂ ಇಲ್ಲವೆಂಬದು ಕೆಳಗಿನ ಉಕ್ತಿಯಿಂದ ಗೊತ್ತಾಗುವದು. "ಕೆರೆಯ ನೀರು ಹರಗೆರೆದರೆ ವರವದೆಂತು ದೊರೆವುದಯ್ಯಾ ? ಅದರೊಳಗೆ ಅವನದೇನಿರುವದಯ್ಯಾ ? ತದುಪರಿ ಪರರ ಮರುಗಿಸಿ ಅವರೊಡವೆ ತಿರಿತಂದು, ತಾನುಂಡು, ಮಿಕ್ಕಿದುದ ಮನವಿಲ್ಲದೆ ಹೆಸರಿಂಗಾಗಿ ಹೆರವರಿಗೆ ಇಕ್ಕಿದೊಡೆ, ಅದರೊಳಿಹ ಪೌರುಷವಾವುದಯ್ಯಾ ? ಹಾವು ಹಣಿದು ಹದ್ದಿಂಗಿತ್ತ ತೆರನಾಯಿತ್ತವರ ಬಾಳುವೆ ! ಧಿಕ್‌ಧಿಕ್ ! ಇಂತಹ ಭಂಡರ ಮುಖವನೊಮ್ಮೆಯಾದರೂ ತೋರದಿರಾ, ಮನದೊಡೆಯ ಮಹಾದೇವಾ.

ಈ ದಾಸೋಹ ಮಠಗಳ ಆದಿ ಪ್ರವರ್ತಕರು ಅಸಾಧಾರಣ ಮಹಿಮಾ ಪುರುಷರೇ ಆಗಿದ್ದರೆಂದೂ, ಅವರ ಅದ್ವಿತೀಯ ಪವಾಡಗಳಿಗೂ ಅಪ್ರತಿಮ ವೈರಾಗ್ಯಕ್ಕೂ ಬೆರಗಾಗಿ ಮನಸೋತು ಭಕ್ತಿ ಪರವಶರಾಗಿ, ಆಗಿನ ಜನರು ತಾವಾಗಿಯೇ ತಂದು, ಹೇರಳ ಧನ ಧಾನ್ಯಾದಿಗಳನ್ನು ಅವರ ಪಾದಕ್ಕೆ ಸಲ್ಲಿಸಿ, ಮಠದಲ್ಲಿ ದಾಸೋಹ ನಡಿಸುತ್ತಿದ್ದರೆಂದೂ, ಈಗಳೂ ಜನತೆಯಲ್ಲಿ ಪ್ರವಾದಗಳಿರುತ್ತವೆ. ಇದು ಸ್ವಾಭಾವಿಕ ದಾಸೋಹವು! ಆ ಸ್ವಾಮಿ ಮಹಾನುಭಾವರು ಯಾರನ್ನೂ ಕೇಳಲಿಲ್ಲ, ಬೇಡಲಿಲ್ಲ. ತಾನಾಗಿ ನಡೆದು ಬಂದುದುದನ್ನು ನಿಃಸ್ವಾರ್ಥತೆ ನಿರುದ್ದೇಶಗಳಿಂದ ಗುರುಲಿಂಗ ಜಂಗಮ ಸೇವೆಗೆ ಸಮರ್ಪಿಸಿ ಕೃತಾರ್ಥರಾದರು. ಅವರ ಈ ಚಿತ್ರವನ್ನು ನೋಡಿರಿ. ಈಗಿನ ದಾಸೋಹ ಮಠಗಳ ವೈಚಿತ್ರ್ಯವನ್ನು ನೋಡಿರಿ!

ಹೀಗೆ ದೊಡ್ಡ ಪ್ರಮಾಣದಿಂದ ದಾಸೋಹ ಜರಗಿಸುವದು ಎಲ್ಲರಿಗೂ ಯಾವಾಗಲೂ ಸಾಧ್ಯವಿಲ್ಲ. ಆದರೂ ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ, ಹಡಪದ ಅಪ್ಪಣ್ಣ, ಮಡಿವಾಳ ಮಾಚಿದೇವರು, ಆಯ್ದಕ್ಕಿಯ ಮಾರಯ್ಯಗಳು, ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ ಗಾಣದ ಕನ್ನಪ್ಪಯ್ಯ, ಅಂಬಿಗರ ಚೌಡಯ್ಯ, ಮೇದಾರ ಕೇತಯ್ಯ, ಮೊದಲಾದ ಶಿವಶರಣರು ಸತ್ಕಾಯಕವನ್ನು ಸ್ವೀಕರಿಸಿ, ತಮಗೆ ಶಿವಾನುಗ್ರಹದಿಂದ ದೊರೆತುದರಲ್ಲಿಯೇ ಗುರುಲಿಂಗ ಜಂಗಮ ಸೇವೆಯನ್ನು ಮಾಡಿ, ಆನಂದದಿಂದ ಜೀವನ ಯಾತ್ರೆಯನ್ನು ಸಾಗಿಸಿ, ಜಗದಲ್ಲಿ ಧನ್ಯರೂ ಆದರ್ಶ ಸದ್ಭಕ್ತರೂ ಆಗಲಿಲ್ಲವೇ! ಇಂತಹ ತ್ರಿವಿಧ ದಾಸೋಹವನ್ನು ವೀರಶೈವರೆಲ್ಲರೂ ಆಚರಿಸುವದು ಯುಕ್ತವಲ್ಲವೇ!

---

# ದತ್ತಾತ್ರೇಯ.

(ಲೇಖಕ— ವೇ. ಮೂ. ಬುದ್ದಯ್ಯಾ ಪುರಾಣಿಕ ಧಾರವಾಡ.)

ಈ "ದೇವರ ವಿಷಯವಾಗಿ ಮಹಾಭಾರತದಲ್ಲಿ ಎರಡು ಸಂದರ್ಭಗಳಲ್ಲಿ ಉಲ್ಲೇಖವಿದೆ. ಒಂದನೆಯದು ವನಪರ್ವದ ೧೧೫ನೆಯ ಅಧ್ಯಾಯದಲ್ಲಿ— ಸಹಸ್ರಾರ್ಜುನನಿಗೆ ದತ್ತಾತ್ರೇಯನ ಪ್ರಸಾದದಿಂದ ಒಂದು ವಿಮಾನವು ದೊರೆತಿದ್ದರ ವರ್ಣನೆಯು ಹೇಳಲ್ಪಟ್ಟಿದೆ. ಇದನ್ನೇ ಶಾಂತಿ ಪರ್ವದ ೪೯ನೆಯ ಅಧ್ಯಾಯದಲ್ಲಿ ಪುನಃ ಹೇಳಲಾಗಿದೆ. ಇವುಗಳಲ್ಲದೆ ಅನುಶಾಸನ ಪರ್ವದ ೯೧ನೆಯ ಅಧ್ಯಾಯದಲ್ಲಿ ದತ್ತಾತ್ರೇಯನು ಅತ್ರಿಯ ಪುತ್ರನೆಂದು ವರ್ಣನೆಯಿದೆ. ೧

## ಜನ್ಮ

"ಮಹಾಭಾರತದಲ್ಲಿ ದತ್ತಾತ್ರೇಯನ ಜನನದ ವಿಚಾರವಾಗಿ ಏನೂ ಹೇಳಿಲ್ಲ." ೨ ಮಹಾರೋಗದಿಂದ ಪೀಡಿತನಾದ ಕೌಶಿಕ ಋಷಿಗೆ ಮಾಂಡವ್ಯನು "ಸೂರ್ಯೋದಯವಾಗುವದರೊಳಗಾಗಿ ಮರಣ ಹೊಂದು" ಎಂದು ಶಾಪವನ್ನು ಕೊಡಲು— ಕೌಶಿಕನು ತನ್ನ ಸತಿಯ ಪಾತಿವ್ರತ್ಯ ಧರ್ಮದ ಪ್ರಭಾವದಿಂದ ಸಾಯಲೇ ಇಲ್ಲ; ಮತ್ತು ಸೂರ್ಯೋದಯವಾಗದಿದ್ದುದರಿಂದ ಸಚರಾಚರ ಪ್ರಾಣಿಗಳೂ ದೇವತೆಗಳೂ ಭೀತಿಗ್ರಸ್ತರಾದರು. ಆದ್ದರಿಂದ ಆ ಸತಿಯನ್ನು ಪ್ರಸನ್ನೀಕರಿಸುವ ಸಲುವಾಗಿ ಬ್ರಹ್ಮ, ವಿಷ್ಣು, ಮಹೇಶರು ಅತ್ರಿಪತ್ನಿ ಅನುಸೂಯೆಯ ಆರಾಧನೆಯನ್ನು ಕೈಕೊಂಡರು. ಅನುಸೂಯೆಯು ತನ್ನ ಪ್ರಭಾವದಿಂದ ಕೌಶಿಕನನ್ನು ಜೀವಂತವಾಗಿರಿಸಿ, ಕೌಶಿಕ ಪತ್ನಿಗೆ ಸಂತೋಷಗೊಳಿಸಿ ಸೂರ್ಯೋದಯವನ್ನುಂಟು ಮಾಡಿದಳು. ಇದಕ್ಕೆ ದೇವತೆಗಳು ಪ್ರಸನ್ನರಾಗಿ ಅನುಸೂಯೆಯ ಇಚ್ಛೆಯಂತೆ ಬ್ರಹ್ಮೇಶಜನಾರ್ದನರು ಅವಳ ಉದರದಲ್ಲಿ ದತ್ತರೂಪದಿಂದ ಜನ್ಮತಾಳಿದರು." ಈ ಕತೆಯು ಮಾರ್ಕಂಡೇಯ ಪುರಾಣದ ಅಧ್ಯಾಯ ೧೬ ೧೮ ರಲ್ಲಿ ಇದೆ ಯೆಂದು ಶ್ರೀ ಗಣೇಶ ಹರಿಖರೆ, ಕ್ಯೂರೇಟರ, ಭಾರತ

---

೧. ಮಹಾರಾಷ್ಟ್ರ ಜ್ಞಾನಕೋಶ ಭಾಗ ೧೪, ೧೫, ದ ಅಕ್ಷರ ೧೫

೨.

ಇತಿಹಾಸ ಸಂಶೋಧಕ ಮಂಡಲ, ಪುಣೆ ಇವರು ಹೇಳಿರುವರು. ೧ ಇದನ್ನೇ ಶ್ರೀ ಖರೆಯವರು "ಅತ್ರಿ ಋಷಿಗಳು ಪುತ್ರ ಪ್ರಾಪ್ತಿಗೋಸುಗ ಉಗ್ರ ತಪಸ್ಸನ್ನು ಮಾಡಿದುದರಿಂದ ಅವನ ಮಸ್ತಕದಿಂದ ತ್ರೈಲೋಕ ದಾಹಕ ಜ್ವಾಲೆಗಳು ಉತ್ಪನ್ನವಾದುವು. ಇದರ ಶಾಂತಿಗಾಗಿ ದೇವ ತ್ರಯಿಗಳು ಅನುಸೂಯೆಯ ಉದರದಲ್ಲಿ ಜನ್ಮ ತಾಳಬೇಕಾಯಿತು" ಎಂದು ಅದೇ ಪುಸ್ತಕದಲ್ಲಿ ಹೇಳಿರುವರು. ೨ ಇವನ ಜನ್ಮವನ್ನು ಗುರು ಚರಿತ್ರೆಕಾರನು "ಅಂಬಋಷಿಗಳಿಗೆ ದೂರ್ವಾಸನು ಶಾಪ ಕೊಟ್ಟದ್ದರಿಂದ ಮಹಾ ತಪಸ್ವಿಗಳಾದ ಅತ್ರಿಋಷಿ ಹಾಗೂ ಅವನ ಪತ್ನಿ ಅನುಸೂಯೆ ಇವರ ಗರ್ಭದಲ್ಲಿ ಪರಮೇಶ್ವರನು ಜನ್ಮ ತಾಳಬೇಕಾಯಿತು" ಎಂದು ಇನ್ನೊಂದು ರೀತಿಯಿಂದ ಹೇಳಿರುವನು. ೩

ಡಾ. ಶ್ರೀಧರ ವೆಂಕಟೇಶ ಕೇತಕರ ಇವರು "ಸಾವಿತ್ರಿ-ಲಕ್ಷ್ಮಿ ಹಾಗು ಪಾರ್ವತಿಯರು ನಮ್ಮಂಥ ಪತಿವ್ರತೆಯರು ಭೂಲೋಕದಲ್ಲಿ ಯಾರಾದರೂ ಉಂಟೇ? ಎಂದು ನಾರದನಿಗೆ ಪ್ರಶ್ನಿಸಲು—ನಾರದನು ಅತ್ರಿಪತ್ನಿ ಅನುಸೂಯೆಯ ಹೆಸರನ್ನು ಸೂಚಿಸಲು—ಅವಳ ಸತ್ವ ಪರೀಕ್ಷೆಗಾಗಿ ಆ ಶಕ್ತಿತ್ರಯರು ತಂತಮ್ಮ ಪತಿಯರನ್ನು ಕಳುಹಿಸಿದರು. ಈ ತ್ರಿಮೂರ್ತಿಗಳು ಅತ್ರಿಋಷಿಯು ಸ್ನಾನಕ್ಕೆ ಹೋದಾಗ್ಗೆ ಅವನ ಆಶ್ರಮಕ್ಕೆ ಹೋಗಿ ಊಟದ ಭಿಕ್ಷೆಗಾಗಿ ಅನುಸೂಯೆಯನ್ನು ಬೇಡಿದರು. ಅನುಸೂಯೆಯು ಒಪ್ಪಿ ತನ್ನ ಪತಿಯ ಪಾದೋದಕವನ್ನು ಅವರ ಮೇಲೆ ಚಿಮುಕಿಸಲು ಅವರು ಶಿಶುರೂಪವನ್ನು ತಾಳಿದರು. ಆಗ ಅನುಸೂಯೆಯು ಆ ಶಿಶುಗಳನ್ನು ತೊಟ್ಟಿಲಲ್ಲಿ ಹಾಕಿ ಜೋಗುಳ ಪಾಡುತ್ತಿರಲು ಅತ್ರಿ ಋಷಿಯು ಬಂದು ನೋಡಿದನು. ಇತ್ತ ನಾರದನು ಈ ವಿಚಾರವನ್ನು ಕೈಲಾಸದಲ್ಲಿ ಶಕ್ತಿತ್ರಯರಿಗೆ ನಿರೂಪಿಸಲು—ಅವರು ತಮ್ಮ ಪತಿಗಳ ವಿವೇಚನೆಗಾಗಿ ಅನುಸೂಯೆಯ ಬಳಿಗೆ ಬಂದು ಯಾಚಿಸತೊಡಗಿದರು. ಆಗ್ಗೆ ಅನುಸೂಯೆಯು ಆ ಮೂರೂ ಶಿಶುಗಳನ್ನು ಮುಂದೆ ಮಾಡಲು—ಅದರಲ್ಲಿ ತಂತಮ್ಮ ಪತಿಯರನ್ನು ಶಕ್ತಿತ್ರಯರು ಗುರುತಿಸಲಾರದೆ ಹತಾಶರಾಗಲು— ಅನುಸೂಯೆಯು ಇದನ್ನು ತಿಳಿದು ತನ್ನ ಹಸ್ತ ಸ್ಪರ್ಶ

೧. ಗ ಹ. ಖರೆಕೃತ 'ಮೂರ್ತಿವಿಜ್ಞಾನ' ಪುಟ ೩೮
೨. ,, ,, ,,
೩. ಗುರು ಚರಿತ್ರೆ ಅಧ್ಯಾಯ ೩ ಓವಿ ೩೫.

ಮಾಡಲು- ಆ ಶಿಶುಗಳು ತಮ್ಮ ನಿಜಸ್ವರೂಪವನ್ನು ತಾಳಿದುವು. ಆಗ್ಗೆ ತ್ರಿಮೂರ್ತಿಗಳು ಅನುಸೂಯೆಗೆ ಪ್ರಸನ್ನರಾಗಿ ನಿನ್ನ ಅಭೀಷ್ಟವನು ಬೇಡೆಂದು ಹೇಳಲು-ಅದಕ್ಕೆ ಅನುಸೂಯೆಯು ನಿಮ್ಮಂಥ ಒಬ್ಬ ಪುತ್ರನು ಬೇಕೆಂದು ಯಾಚಿಸಲು— ತ್ರಿಮೂರ್ತಿಗಳು ಅದಕ್ಕೆ ಒಪ್ಪಿ- ಅವಳ ಗರ್ಭದಲ್ಲಿ ದತ್ತ ರೂಪದಿಂದ ಅವತರಿಸಿದರು" ಎಂದು ದತ್ತಾತ್ರೇಯನ ವಿಷಯವಾಗಿ ಈ ರೀತಿಯಲ್ಲಿ ಪ್ರಚಾರದಲ್ಲಿದ್ದ ಕತೆಯು ಭಾಗವತ ಸ್ಕಂದ ೪ ಅಧ್ಯಾಯ ೧ ರಲ್ಲಿ ಇದೆ" ಎಂದು ತಮ್ಮ ಮಹಾರಾಷ್ಟ್ರ ಜ್ಞಾನ ಕೋಶದಲ್ಲಿ ಹೇಳಿರುವರು. ೧

ಇದನ್ನು ನೋಡಲಾಗಿ ದತ್ತನ ಜನ್ಮ ವಿಚಾರವು ಇನ್ನೂ ಚರ್ಚಾಸ್ಪದವಾದ ವಿಚಾರವಾಗಿಯೇ ಉಳಿದಿರುವದೆಂದು ಗೋಚರಿಸುವುದು.

## ದತ್ತಾಂಶ ಮತ್ತು ಲಗ್ನ

ಮೂರ್ತಿ ವಿಜ್ಞಾನ ಪುಸ್ತಕದೊಳಗಿದ ಎರಡೂ ಕಥೆಗಳಲ್ಲಿ ವಿಷ್ಣುವಿನ ಅಂಶದ ಪುತ್ರನೇ ದತ್ತಾತ್ರೆಯನೆಂದು ವರ್ಣನೆ ಇದೆ. ೨ ಮತ್ತು ಭಾಗವತ ಸ್ಕಂದ ೪ ಅಧ್ಯಾಯ ೧ ರಲ್ಲಿಯೂ ದತ್ತಾತ್ರೆಯನು ವಿಷ್ಣುವಿನ ಅಂಶವೆಂದೇ ಹೇಳಲ್ಪಟ್ಟಿದೆ. ೩ ಮಾರ್ಕಂಡೇಯ ಪುರಾಣದ ೧೭-೧೯ ನೆಯ ಅಧ್ಯಾಯಗಳಲ್ಲಿ ದತ್ತಾತ್ರೆಯನು ಸಪತ್ನಿಕನೆಂದು ಹೇಳಿದೆ ೪ ಇದೇ ವಿಷಯವನ್ನು ಶ್ರೀ ಖರೆಯವರು "ದೇವದಾನವರ ಯುದ್ಧ ನಡೆದಾಗ್ಗೆ ದೇವತೆಗಳು ಓಡಿ ಹೋಗಿ ದತ್ತಾತ್ರೆಯನನ್ನು ಆಶ್ರಯಿಸಲು— ದೈತ್ಯರು ಕೂಡಾ ಅವರನ್ನು ಬೆನ್ನಟ್ಟಿ ದತ್ತನ ಆಶ್ರಮವನ್ನು ಹೊಕ್ಕರು. ಅಲ್ಲಿ ದಾನವರು ದತ್ತನ ಸುಂದರ ಪತ್ನಿ ಲಕ್ಷ್ಮಿಯನ್ನು ನೋಡಿದೊಡನೆಯೇ ದೇವತೆಗಳನ್ನು ಬಿಟ್ಟು ಲಕ್ಷ್ಮಿಯನ್ನು ತಲೆಯ ಮೇಲಿಟ್ಟುಕೊಂಡು ಹಿಂತಿರುಗಿದರು. ಆಗ್ಗೆ ದೇವತೆಗಳೆಲ್ಲ ದತ್ತನ ಸಹಾಯದಿಂದ ದಾನವರ ಕೂಡ ಹೋರಾಡಿ ವಿಜಯವನ್ನು ಸಂಪಾದಿಸಿ ಲಕ್ಷ್ಮಿಯನ್ನು ತಿರುಗಿ

---

೧. ಮ. ಜ್ಞಾ. ಕೋಶ ಭಾಗ ೧೪, ೧೫ ದ. ಅಕ್ಷರ ೧೫

೨. ಗ. ಹ. ಖರೆ ಕೃತ'ಮೂರ್ತಿ ವಿಜ್ಞಾನ' ಪುಟ ೩೪

೩. ಮ. ಜ್ಞಾ. ಕೋಶ ಭಾಗ ೧೪—೧೫ ದ. ಅಕ್ಷರ ೧೫

೪. ,,

ತಂದರು" ಎಂದು ಮಾರ್ಕಂಡೇಯ ಪುರಾಣದ ಅಧ್ಯಾಯ ೧೬-೧೮ ರಲ್ಲಿ ವರ್ಣನೆಯಿದೆ ಎಂದು- ಈ ರೀತಿಯಾಗಿ ಹೇಳಿರುವರು [೧]

ದತ್ತಾಂಶ ವಿಷಯವಾಗಿ ತ್ರಿಮೂರ್ತಿಗಳ ಕಲ್ಪನೆಯು ಅಳಿದು ಇಲ್ಲಿ ವಿಷ್ಣುವಿನ ಅಂಶಕ್ಕೆ ಬಂದಿದೆ. ಇನ್ನು, ದತ್ತನು ಬ್ರಹ್ಮಚಾರಿಯಾಗಿರದೆ ಸಪತ್ನಿಕನೆಂದು ನಿಃಸಂಶಯವಾಗಿ ಮೇಲಿಂದ ಸಿದ್ಧವಾಗುತ್ತಿದೆ.

## ದತ್ತ ಸ್ವರೂಪ

ದತ್ತಾತ್ರೇಯನು ಒಂದು ಮುಖದವನೆಂದು ಭಾಗವತ ಸ್ಕಂದ ೪ ಅಧ್ಯಾಯ ೧ ರಲ್ಲಿ ವರ್ಣನೆ ಇದೆ. [೨] ಇದರಂತೆಯೇ ಗುರುಚರಿತ್ರೆಯಲ್ಲಾದರೂ ಅವನ ಸ್ವರೂಪವನ್ನು ನಿರೂಪಿಸಿರುವುದು ಕಂಡು ಬರುವುದು. [೩] ಶ್ರೀ ಗ. ಹ. ಖರೆ ಇವರು "ಬ್ರಹ್ಮ- ವಿಷ್ಣು ಮಹೇಶರನ್ನು ಒಂದುಗೂಡಿಸಿ ದತ್ತನ ಸ್ವರೂಪವನ್ನು ತೋರಿಸುವುದು ಒಂದು ಪ್ರಕಾರ— ಎರಡನೆಯದಾಗಿ ವಿಷ್ಣುವನ್ನು ಯೋಗಿಯಾಗಿ ಕಲ್ಪಿಸಿ ಅವನ ಆಸನದ ಕೆಳಗೆ ಹಂಸ-ಗರುಡ ಮತ್ತು ನಂದಿ ಈ ಮೂರು ವಾಹನಗಳನ್ನು ತೋರಿಸುವುದು— ಮೂರನೆಯದಾಗಿ ಬ್ರಹ್ಮ-ವಿಷ್ಣು-ಮಹೇಶ್ವರನ್ನು ಸಂಯುಕ್ತ ರೂಪದಿಂದ ಚಿತ್ರಿಸಿ ತೋರಿಸುವುದು."—ಎಂದು ಕೈ. ವಾ. ಗೋಪಿನಾಥರವರ ಅಭಿಪ್ರಾಯವನ್ನು ತಮ್ಮ ಪುಸ್ತಕದಲ್ಲಿ [೪] ವ್ಯಕ್ತಗೊಳಿಸಿರುವರು. ಇನ್ನು ಶ್ರೀ ಖರೆಯವರು ಕಲ್ಪಿಸಿರುವ— ಯೋಗಾಸನದಲ್ಲಿ ಕುಳಿತಿರುವ - ಮೇಲಿನ ಎರಡು ಕೈಗಳಲ್ಲಿ ಶಂಖ, ಚಕ್ರಗಳಿರುವ ಕೆಳಗಿನ ಎರಡು ಕೈಗಳ ಅಂಗೈಗಳನ್ನು ತೊಡೆಯ ಮೇಲೆ ಎಡದ ಕೈ ಕೆಳಗೂ ಬಲದ ಕೈ ಮೇಲಾಗಿಯೂ- ವ್ಯಾಖ್ಯಾನ ಮುದ್ರೆಯಿಂದಿರುವ ಆಸನದಲ್ಲಿ ಅನುಕ್ರಮವಾಗಿ ಗರುಡ, ನಂದಿ, ಹಂಸ, ಈ ಪ್ರಕಾರವಾಗಿ ಮೂರು ವಾಹನಗಳಿಂದ ಚಿತ್ರಿಸಿರುವ ಮೂರ್ತಿಯೊಂದನ್ನು ಬದಾಮಿಯಲ್ಲಿ ತಾವು ನೋಡಿರುವೆವು ಎಂದೂ— ಇದೇ ರೀತಿ ದತ್ತನ ಸ್ವರೂಪವಿದ್ದರೆ ಒಳಿತಾಗುವದೆಂದೂ ಮತ್ತು ತ್ರಿಮೂರ್ತಿಗಳನ್ನು ಒಟ್ಟುಗೂಡಿಸಿ

---

೧. ಶ್ರೀ. ಗ. ಹ. ಖರೆ ಕೃತ 'ಮೂರ್ತಿವಿಜ್ಞಾನ' ಪುಟ ೩೮.

೨. ಮ. ಜ್ಞಾ. ಕೋಶ ಭಾಗ ೧೪—೧೫ ದ. ಅಕ್ಷರ ೧೫

೩. ಗುರು ಚರಿತ್ರೆ ಅ. ೪. ಓವಿ ೬೮.

೪. ಗ. ಹ. ಖರೆ ಕೃತ 'ಮೂರ್ತಿ ವಿಜ್ಞಾನ' ಪುಟ ೩೯

ಚಿತ್ರಿಸಿದರೆ ದತ್ತನ ಸ್ವರೂಪವು ಹೊರಹೊಮ್ಮದೆಂದೂ ಅಭಿಪ್ರಾಯ ಪಡುತ್ತಾರೆ ೧.

ಇದನ್ನು ವಿಚಾರಿಸಲಾಗಿ ದತ್ತನ ಸ್ವರೂಪವು ಹೀಗೆಯೇ ಎಂದು ಇನ್ನೂ ನಿರ್ದಿಷ್ಟವಾಗಿ ಹೇಳಲು ಬರುವಂತಿಲ್ಲ. ಅಂದ ಮೇಲೆ ದತ್ತ ಸ್ವರೂಪವೂ ಚರ್ಚಾಸ್ಪದವಾಗಿರುವುದು.

## ದತ್ತನ ವೈದಿಕತ್ವ

ಡಾ. ಶ್ರೀಧರ ವೆಂಕಟೇಶ ಕೇತಕರ ಇವರು ದತ್ತಾತ್ರೆಯ ಈ ದೇವರು ವೈದಿಕ ಇರದಿದ್ದರೂ ಬ್ರಹ್ಮ-ವಿಷ್ಣು-ಮಹೇಶ ಈ ಮೂರು ವೈದಿಕ ದೇವತೆಗಳದ್ದೇ ಆಗಿರುವದೆಂದು ಹೇಳಿರುವರು. ೨ ಇತ್ತಿಚೆಗೆ ಗೌಡ ಸಾರಸ್ವತ ವೈಷ್ಣವ ಬ್ರಾಹ್ಮಣನಾದ ಶ್ರೀ ನಾರಾಯಣಚಾರ್ಯ ಕುಮಠ ಎಂಬವರು ತಾವು ಪ್ರಸಿದ್ಧ ಮಾಡಿದ 'ಗುರು ಪರಂಪರಾಮೃತ' ವೆಂಬ ಗ್ರಂಥದಲ್ಲಿ ದತ್ತನ ತ್ರಿಮೂರ್ತಿ ಮತ್ತು ಷಡ್ಭುಜ ಮೂರ್ತಿಯು ವೈದಿಕ ಧರ್ಮದ ವಿರುದ್ಧವಿದ್ದು ತ್ರಿಮುಖಿ ದತ್ತನ ಉಪಾಸಕರು ಈಶ್ವರದ್ರೋಹಿ ಗಳೆಂದು ಟೀಕಿಸಿ ಇಂಥ ಮೂರ್ತಿಗಳ ಉತ್ಸವಗಳಲ್ಲಿ ಭಾಗಿಗಳಾಗ ಕೂಡದೆಂದು" ತಾ॥ ೭-೧೧-೧೯೦೫ ರ 'ಧರ್ಮ' ಮಾಸಿಕದಲ್ಲಿ ಕೊಟ್ಟಿ ದ್ದನ್ನು ಎತ್ತಿ ಹೇಳಿರುವರು. ೩

ಇದನ್ನು ಪರಿಶೀಲಿಸಲಾಗಿ ದತ್ತಾತ್ರೆಯನು ವೈದಿಕನಲ್ಲವೆಂಬುದು ಸಹಜ ಸಿದ್ಧವಾಗುವದು.

## ದತ್ತನ ಸಂಪ್ರದಾಯ

ಡಾ. ಶ್ರೀಧರ ವೆಂಕಟೇಶ ಕೇತಕರ ಇವರು "ದತ್ತಾತ್ರೇಯನು ನಿರಂತರವಾಗಿ ವಾಮಮಾರ್ಗಿಯಾಗಿದ್ದನೆಂದು ಮಾರ್ಕಂಡೇಯ ಪುರಾಣ ಅಧ್ಯಾಯ ೧೭, ೧೯ ರಲ್ಲಿ ವರ್ಣನೆ ಇದೆ" ಎಂದು ಹೇಳಿರುವರು. ೪ ಇನ್ನು ಶ್ರೀ ಖರೆಯವರು—ದತ್ತಾತ್ರೆಯನ ಚರಿತ್ರೆಯ ವಿಷಯವಾಗಿ

---

೧. ಗ. ಹ. ಖರೆ ಕೃತ 'ಮೂರ್ತಿವಿಜ್ಞಾನ' ಪುಟ ೩೯.
೨. ಮ. ಜ್ಞಾ. ಕೋಶ ಭಾಗ ೧೪, ೧೪ ದ. ಅಕ್ಷರ ೧೫.
೩. ,,
೪. ,,

ಯಾವ ಯಾವ ಸಂಗತಿಗಳು ಉಪಲಬ್ಧವಿರುವವೋ ಅವುಗಳನ್ನು ನೋಡ ಲಾಗಿ "ಇವನು ಒಂದು ಗುಪ್ತ ಪಂಥದ ಚಾಲಕನಿರಬಹುದೆಂದು ತೋರು ತ್ತದೆ; ಶೈವರಲ್ಲಿ ಯಾವ ಪ್ರಕಾರವಾಗಿ ಲಾಕುಲೀಶ, ಕಾಪಾಲಿಕ, ಅಘೋರ, ನಾಥ ಮೊದಲಾದ ಹೆಚ್ಚುಕಡಿಮೆ ಪ್ರಮಾಣದೊಳಗೆ ಗುಪ್ತಮಾರ್ಗಾನು ಯಾಯಿ, ಘೋರ ಮತ್ತು ಲೌಕಿಕ ದೃಷ್ಟಿಯಿಂದ ಅನಾಚಾರವುಳ್ಳದ್ದೂ ತಾಂತ್ರಿಕ ಕ್ರಿಯಾಮಯವಾದದ್ದೂ ಹಾಗ ಹಠಯೋಗ ಪ್ರಧಾನವುಳ್ಳ ಪಂಥಗಳಿರುವವೋ ಅವುಗಳಂತೆ ಇಲ್ಲವೆ ಶಾಕ್ತರವಾಮಚಾರಿ ಮಾರ್ಗದಂತೆ ಈ ಪಂಥದ ಸ್ವರೂಪವಿರಬಹುದು. ಅರ್ಥಾತ ಇದು ವೈಷ್ಣವ ಪಂಥವು. ಇತರ ಧರ್ಮಗಳಂತೆ ಇದರ ಧ್ಯೇಯವಾದರೂ ಆತ್ಮಜ್ಞಾನದ ಅನುಭವವೇ ಇರಬಹುದು. ಏಕನಾಥನ ಗುರುವಾದ ಜನಾರ್ದನ ಸ್ವಾಮಿಯು ಇದೇ ಮಾರ್ಗದ ಅನುಯಾಯಿ ಇದ್ದಂತೆ ತೋರುತ್ತದೆ" ಎಂದು ಹೇಳು ತ್ತಾರೆ. ೧ ದತ್ತಾತ್ರೇಯನ ಚರಿತ್ರೆಯ ವಿಷಯವಾಗಿ ಯಾವ ಬೇರೆಬೇರೆ ಕಥೆಗಳಿರುವವೋ ಅವುಗಳಲ್ಲಿಯದೊಂದು ಭಾಗವತ ಪುರಾಣದಲ್ಲಿ ಹೇಳ ಲ್ಪಟ್ಟಿದೆ. ಆದ್ದರಿಂದ ಇಲ್ಲಿ ಭಾಗವತ ಪುರಾಣದ ವಿಷಯವಾಗಿ ಹೆಚ್ಚು ಚರ್ಚಿಸಬೇಕಾಗಿದೆ.

## ಭಾಗವತ ಪುರಾಣ

"ಈ ಪುರಾಣದ ಕೈಬರೆಹದ ಹಾಗು ಮುದ್ರಿತವಾದ ನೂರಾರು ಪ್ರತಿ ಗಳು ದೊರೆಯುತ್ತಿವೆ. ಇದಲ್ಲದೆ ಇದರ ಸಂಪೂರ್ಣ ಟೀಕಾ ಗ್ರಂಥ ಗಳೂ ಮತ್ತು ಅದರೊಳಗಿನ ಕೆಲವು ಭಾಗಗಳ ಸ್ಪಷ್ಟೀಕರಣಾರ್ಥವಾಗಿ ಬಹಳ ಲೇಖನಗಳೂ ಪ್ರಸಿದ್ಧವಾಗಿವೆ. ಪಾಶ್ಚಾತ್ಯ ಭಾಷೆಗಳಲ್ಲಿಯೂ ಕೂಡ ಇದರ ಭಾಷಾಂತರವು ಮಾಡಲ್ಪಟ್ಟಿದೆ. (Paris 1840–1847) ಇದರಲ್ಲಿಯ ವಿಷಯ ಪ್ರತಿಪಾದನೆಯೂ ಅನೇಕ ಶಬ್ದಗಳ ಹೋಲಿಕೆಯೂ ವಿಷ್ಣು ಪುರಾಣದಂತೆಯೆ ಇರುವುದು. ಇದನ್ನು ನೋಡಲಾಗಿ ವಿಷ್ಣು ಪುರಾಣವನ್ನೇ ಆಧಾರವಾಗಿಟ್ಟುಕೊಂಡು ಬರೆದಂತೆ ತೋರುತ್ತದೆಂದು ಶ್ರೀ ವಿಂಟರ ನಿಡ್ಜ ಇವರು ತರ್ಕಿಸುತ್ತಾರೆ. ವ್ಯಾಸ ಕೃತ ೧೮ ಪುರಾಣ ದೊಳಗಿನ ವಿಷಯವು ಇದು ಅಹುದೋ ಅಲ್ಲೋ ಎಂಬ ಸಂಶಯ ವನ್ನು ವ್ಯಕ್ತಮಾಡುತ್ತಾರೆ. ಮತ್ತು ಮಹಾ ಭಾರತದೊಳಗಿನ ವಿಷಯ ಸಾಮ್ಯತೆಯೂ ಇದರ ಬಹು ಭಾಗದಲ್ಲಿ ಕಂಡುಬರುತ್ತದೆ. ಭಾಗವತ

---

೧. ಶ್ರೀ. ಗ. ಹ. ಖರೆ ಕೃತ 'ಮೂರ್ತಿವಿಜ್ಞಾನ' ಪುಟ ೩೮

ಪುರಾಣದ ಕರ್ತೃವು ವೈಯಾಕರಣಿ ಬೊಪ್ಪದೇವನೆಂದು ಮೊಸರ್ಸ ಕೋಲ ಬ್ರುಕ್ ಬನಾಕ ಮತ್ತು ವಿಲ್‍ಸನ್ ಇವರು ಸಿದ್ಧಮಾಡಿರುವರು. ಹಾಗು ಇದು ೧೩ನೆಯ ಶತಮಾನದಲ್ಲಿ ರಚಿಸಲ್ಪಟ್ಟಿರಬೇಕೆಂದು ತರ್ಕಿಸುವರು. ರಾಮಾನುಜಾಚಾರ್ಯರಾದರೂ ತಮ್ಮ ಗ್ರಂಥಗಳಲ್ಲಿ ಭಾಗವತ ಪುರಾಣದ ಯಾವ ಆಧಾರವನ್ನೂ ತೆಗೆದುಕೊಳ್ಳದೇ ಕೇವಲ ವಿಷ್ಣು ಪುರಾಣದ ಉತಾರಗಳನ್ನೇ ಕೊಟ್ಟಿರುವದರಿಂದ ಈ ಭಾಗವತ ಪುರಾಣವು ರಾಮಾನುಜಾಚಾರ್ಯರ ನಂತರ ರಚಿಸಲ್ಪಟ್ಟಿರಬಹುದೆಂದೂ ಕೆಲವರು ತರ್ಕಿಸುವರು. ಇನ್ನು ಕೆಲವರು ಕ್ರಿ. ಶ. ಕ್ಕಿಂತಲೂ ಪೂರ್ವದ್ದೆಂದು ವಾದಿಸುವರು. ಇದರಲ್ಲಿ ೧೨ ಸ್ಕಂದಗಳೂ ೧೮,೦೦೦ ಶ್ಲೋಕಗಳೂ ಇರುವುವು. ೧೦ನೆಯ ಸ್ಕಂದದಲ್ಲಿ ಕೃಷ್ಣನ ವರ್ಣನೆಯು ಇದ್ದರೂ ಕೃಷ್ಣನ ಪ್ರೌಢಾವಸ್ಥೆಯ ವರ್ಣನೆಯೂ ಹಾಗೂ ರಾಧೆಯ ಇರವೂ ಕಾಣುವುದಿಲ್ಲ. ೧೧ನೆಯ ಸ್ಕಂದದಲ್ಲಿ ಕೃಷ್ಣನ ಮರಣದ ವರ್ಣನೆಯು ಇರುವುದು' ಎಂದು ಡಾ. ಶ್ರೀಧರ ವೆಂಕಟೇಶ ಕೇತಕರ ಇವರು ಅಭಿಪ್ರಾಯಪಟ್ಟಿರುವರು [೧]. ಈ ಭಾಗವತ ಪುರಾಣದ ಮರಾಠಿ ಭಾಷಾಂತರವನ್ನು ಕ್ರಿ. ಶ. ೧೭೫೩ ರಲ್ಲಿ ಏಕನಾಥರು ಮಾಡಿರುವರು [೨]. ಈ ಏಕನಾಥನ ಗುರುವು ಜನಾರ್ಧನ ಸ್ವಾಮಿಯೆಂದು ಶ್ರೀ ಗಣೇಶ ಹರಿಖರೆ ಅಂದಿರುವರು [೩].

## ದತ್ತನ ಪ್ರಥಮ ಅವತಾರ.

ಶ್ರೀಪಾದ ಶ್ರೀವಲ್ಲಭನೇ ದತ್ತನ ಪ್ರಥಮ ಅವತಾರವೆಂದು ಜನರು ಯಾವನನ್ನು ತಿಳಿಯುವರೋ ಅದೇ ದತ್ತನು ನರಸೋಬವಾಡಿ (ಕರವೀರ) ಯಲ್ಲಿ ಆದವನೆಂದು ಮಹಾರಾಷ್ಟ್ರ ಜ್ಞಾನ ಕೋಶಕಾರರು ಅಭಿಪ್ರಾಯಪಡುತ್ತಾರೆ. ಕೊಲ್ಹಾಪುರ ಸಂಸ್ಥಾನದ ನರಸೋಬವಾಡಿಯು ಪಂಚಗಂಗ-ಕೃಷ್ಣ ಈ ಎರಡು ನದಿಗಳ ಸಂಗಮದಲ್ಲಿರುವುದು. ಪೂರ್ವದೇಶದ ಪೀಠಾಪುರ ಗ್ರಾಮದಲ್ಲಿ ಆಪಸ್ತಂಭ ಶಾಖೆಯ ಆ ಪಳರಾಜ ಈ ಹೆಸರಿನ ಒಬ್ಬ ಬ್ರಾಹ್ಮಣನಿಗೆ ಸುಮತಿ ಎಂಬ ಒಬ್ಬ ಹೆಂಡತಿ ಇದ್ದಳು.

---

೧. ಮ. ಜ್ಞಾ. ಕೋಶ ಭಾಗ ೧೮ ಭ. ಅಕ್ಷರ ೨೦

೨. ಶ್ರೀ. ಲ. ರಾ. ಪಾಂಗರಕರ ಕೃತ 'ತುಕಾರಾಮ ಚರಿತ್ರ' ಪುಟ ೭೧

೩. ಶ್ರೀ. ಗ. ಹ. ಖರೆ ಕೃತ 'ಮೂರ್ತಿ ವಿಜ್ಞಾನ' ಪುಟ ೩೮.

ಅವರ ಉದರದಿಂದ ವಿಷ್ಣುವು ದತ್ತಾವತಾರ ತಾಳಿದನು[೧]. ದತ್ತನ ಸ್ಥಾನವು ಕರವೀರ ಕ್ಷೇತ್ರದ ಮುಹೂರ ಎಂಬುದು[೨] ಅವನಿಗೆ ಶ್ರೀಪಾದ ಶ್ರೀವಲ್ಲಭನೆಂಬ ಹೆಸರನ್ನಿಟ್ಟರು[೩]. ಇವನ ಅವಸಾನವು ಅಶ್ವೀನ ವದ್ಯ ದ್ವಾದಶಿ ಮೃಗಶಿರ ನಕ್ಷತ್ರದಲ್ಲಿ ಗಂಗೆಯಲ್ಲಿ ಆಯಿತು[೪]. ಇವನ ಕಾಲವು ಸುಮಾರು ಕ್ರಿ. ಶ. ೧೩೯೦ ಇಲ್ಲವೆ ೧೪೦೦ ಆಗಬಹುದು.

## ನರಸಿಂಹ ಸರಸ್ವತಿ ಅವತಾರ

ಉತ್ತರದೇಶದ ಕರಂಜಿಗ್ರಾಮದ ಅಂಬಾಭವಾನಿ ಎಂಬವಳು ವಾಜಿಸೇನೆ ಶಾಖೆಯ ವಿಪ್ರ ಕುಲದಲ್ಲಿ ಜನ್ಮತಾಳಿದಳು. ಇವಳು ಅದೇ ಗ್ರಾಮದ ಮಾಧವನೆಂಬ ಒಬ್ಬ ಬ್ರಾಹ್ಮಣನನ್ನು ಮದುವೆಯಾದಳು[೫]. ತನ್ನ ವಯಸ್ಸಿನ ೧೬ ನೆಯ ವರ್ಷದ ಮಂಗಳವಾರ ತ್ರಯೋದಶಿ ದಿವಸ ಗರ್ಭತೊಟ್ಟಳು[೬]. ಇವಳು ಪ್ರತಿ ಶನಿವಾರ ಪ್ರದೋಷ ಪೂಜೆಯೆಂದು ಶ್ರೀ ಶಂಕರನನ್ನು ಆರಾಧಿಸುತ್ತಿರಲು ಅದರ ಪ್ರತಿಫಲವೆಂಬಂತೆ ಓರ್ವ ಪುತ್ರನು ಜನಿಸಿದನು. ಅವನ ಜನ್ಮ ನಾಮವನ್ನು ಸಾಲಿಗ್ರಾಮನೆಂದೂ ಮತ್ತು ಕರೆಯುವ ಹೆಸರು ನರಹರಿ ಎಂದೂ ಇಟ್ಟರು[೭]. ಬ್ರಾಹ್ಮಣರು ಇವನ ಉಪನಯನವನ್ನು ಮಾಡಬೇಕೆಂದು ಯೋಚಿಸಿದರು[೮]. ತನಗೆ ಈ ಮುಂಜಿಯೇ ಉಪನಯನವಾದಂತೆ ಯಜ್ಞೋಪವೀತವನ್ನು ತೋರಿಸಿದನು[೯]. ಬ್ರಾಹ್ಮಣರು ಇದಕ್ಕೊಪ್ಪದೆ ಔಪಚಾರಿಕ ರೀತಿಯಿಂದ ಉಪನಯನವನ್ನು ಮಾಡಿದ ಕೂಡಲೆ ನರಹರಿಯು ಸನ್ಯಾಸಿ ಮಾರ್ಗವನ್ನು ಸ್ಥಾಪಿಸಲೋಸುಗ ಹೊರಹೊರಟು ಕಾಶೀ ಕ್ಷೇತ್ರಕ್ಕೆ ಬಂದು

---

೧. ಗುರುಚರಿತ್ರೆ ಅಧ್ಯಾಯ ೫ ಓವಿ ೯—೧೦.
೨. ೩೫.
೩. ,, ೫೫—೫೬
೪. ೯ ೪೭—೪೮.
೫. ೧೧ ೩ರಿಂದ ೭.
೬. ೧೦.
೭. ೩೦.
೮. ೪೬.
೯. ೬೦—೬೧

ಅಲ್ಲಿಯ ಕೃಷ್ಣ ಸರಸ್ವತಿಯ ಕಡೆಯಿಂದ ಸನ್ಯಾಸಿ ಆಶ್ರಮವನ್ನು ತೆಗೆದು ಕೊಂಡನು ೧.

## ಗುರುಪರಂಪರೆ

"೧. ಪೂರ್ವಪೀಠ : ಶಂಕರ ೨. ವಿಷ್ಣು ೩. ಬ್ರಹ್ಮ ೪. ವಸಿಷ್ಠ ೫. ಪರಾಶರ ೬. ವ್ಯಾಸ ೭. ಶುಕ ೮. ಗೌಡಪಾದ ೯. ಗೋವಿಂದ ೧೦. ಶಂಕರಾಚಾರ್ಯ ೧೧. ವಿಶ್ವರೂಪ ೧೨. ಜ್ಞಾನಬೋಧನ ಗಿರಿಯು ೧೩. ಸಿದ್ಧಗಿರಿಯು ೧೪. ಈಶ್ವರತೀರ್ಥ ೧೫. ನರಸಿಂಹತೀರ್ಥ ೧೬. ವಿದ್ಯಾತೀರ್ಥ ೧೭. ಶಿವತೀರ್ಥ ೧೮. ಭಾರತೀ ತೀರ್ಥ ೧೯. ವಿದ್ಯಾರಣ್ಯ ೨೦. ಶ್ರೀಪಾದ ೨೧. ವಿದ್ಯಾತೀರ್ಥ ೨೨. ಮಲೆಯಾನಂದ ೨೩ ದೇವತೀರ್ಥ ೨೪. ಸರಸ್ವತಿ ವೃದ್ಧ ೨೫. ಸರಸ್ವತಿಯಾದವೇಂದ್ರ ೨೬. ಕೃಷ್ಣಸರಸ್ವತಿ ೨೭. ನೃಸಿಂಹ ಸರಸ್ವತಿ" ಎಂದು ಇರುವದು ೨. ಈ ನರಸಿಂಹ ಸರಸ್ವತಿಯು ನಿಜಾಮ ಇಲಾಖೆಯ ಅಮರಜ ಮತ್ತು ಕೃಷ್ಣಾನದಿಗಳ ಸಂಗಮದಲ್ಲಿರುವ ಗಾಣಿಗಾಪುರ ಎಂಬಲ್ಲಿ ವಾಸಿಸುತ್ತಿದ್ದನು ೩. ಇವನು ಕ್ರಿ. ಶ. ೧೩೮೦ ರ ಸುಮಾರಕ್ಕೆ ಧರ್ಮ ಜಾಗ್ರತೆಯ ಕೆಲಸವನ್ನು ಕೈಕೊಂಡಿದ್ದನೆಂದು ಶ್ರೀ ಪಾಂಡರಕರರವರು ಅಭಿಪ್ರಾಯ ಪಡುತ್ತಾರೆ ೪. ಇವನು ಬಹುಧಾನ್ಯ ನಾಮಸಂವತ್ಸರದ ಮಾಘಮಾಸ ಅಸಿತ ಪಕ್ಷ ಶುಕ್ರವಾರದ ದಿವಸ ಸಮಾಧಿಸ್ತನಾದನು ೫. ಈ ಕಾಲವು ಕ್ರಿ. ಶ. ೧೪೫೮ ಆಗುತ್ತದೆ ಎಂದು ಶ್ರೀ ಪಾಂಗಾರಕರರವರು ಸಿದ್ಧಮಾಡಿರುತ್ತಾರೆ ೬. ಇವನಿಗೆ ಅನುಕ್ರಮವಾಗಿ ೭ ಜನ ಶಿಷ್ಯರಿದ್ದರು. ೧ ಮಾಧವ ಸರಸ್ವತಿ ೨ ಬಾಳ ಸರಸ್ವತಿ ೩ ಕೃಷ್ಣ ಸರಸ್ವತಿ ೪ ಉಪೇಂದ್ರ ಮಾಧವ ಸರಸ್ವತಿ ೫ ಸದಾನಂದ ಸರಸ್ವತಿ ೬ ಜ್ಞಾನಜ್ಯೋತಿ ಸರಸ್ವತಿ ೭ ಸಿದ್ಧ ಸರಸ್ವತಿ ೭. ಕೌಂಡಿಣ್ಯ ಗೋತ್ರದ ಸಾಖರೆ ಉಪನಾಮದ ಗಂಗಾಧರನೆಂಬ ಬ್ರಾಹ್ಮಣನಿದ್ದನು. ಅವನಿಗೆ ಚಂಪಾ ಎಂಬ ಒಬ್ಬ ಹೆಂಡತಿ ಇದ್ದಳು. ಇವರ ಹೊಟ್ಟೆ

---

೧. ಗುರು ಚರಿತ್ರೆ ಅಧ್ಯಾಯ ೧೧ ಓವಿ ೯೯

೨. ೧೨ ೧೦೮ ರಿಂದ ೧೧೬.

೩. ,, ,, ೧ ,, ೬೭

೪. ಶ್ರೀ ಪಾಂಗಾರಕರ ಕೃತ 'ತುಕಾರಾಮ ಚರಿತ್ರೆ' ಪುಟ ೭೦.

೫. ಗುರು ಚರಿತ್ರೆ ಅಧ್ಯಾಯ ೫೧ ಓವಿ ೩೬–೩೭.

೬. ಶ್ರೀ ಪಾಂಗಾರಕರ ಕೃತ 'ತುಕಾರಾಮ ಚರಿತ್ರೆ' ಪುಟ ೭೦.

೭. ಗುರು ಚರಿತ್ರೆ ಅ. ೧೩. ಓವಿ ೨೦–೨೧.

ಅವರ ಉದರದಿಂದ ವಿಷ್ಣುವು ದತ್ತಾವತಾರ ತಾಳಿದನು೧. ದತ್ತನ ಸ್ಥಾನವು ಕರವೀರ ಕ್ಷೇತ್ರದ ಮುಹೂರ ಎಂಬುದು ೨ ಅವನಿಗೆ ಶ್ರೀಪಾದ ಶ್ರೀವಲ್ಲಭನೆಂಬ ಹೆಸರನ್ನಿಟ್ಟರು ೩. ಇವನ ಅವಸಾನವು ಆಶ್ವೀನ ವದ್ಯ ದ್ವಾದಶಿ ಮೃಗಶಿರ ನಕ್ಷತ್ರದಲ್ಲಿ ಗಂಗೆಯಲ್ಲಿ ಆಯಿತು ೪. ಇವನ ಕಾಲವು ಸುಮಾರು ಕ್ರಿ. ಶ. ೧೩೯೦ ಇಲ್ಲವೆ ೧೪೦೦ ಆಗಬಹುದು.

## ನರಸಿಂಹ ಸರಸ್ವತಿ ಅವತಾರ

ಉತ್ತರದೇಶದ ಕರಂಜಿಗ್ರಾಮದ ಅಂಬಾಭವಾನಿ ಎಂಬವಳು ವಾಜಿ ಸೇನೆ ಶಾಖೆಯ ವಿಪ್ರ ಕುಲದಲ್ಲಿ ಜನ್ಮ ತಾಳಿದಳು. ಇವಳು ಅದೇ ಗ್ರಾಮದ ಮಾಧವನೆಂಬ ಒಬ್ಬ ಬ್ರಾಹ್ಮಣನನ್ನು ಮದುವೆಯಾದಳು ೫. ತನ್ನ ವಯಸ್ಸಿನ ೧೬ನೆಯ ವರ್ಷದ ಮಂಗಳವಾರ ತ್ರಯೋದಶಿ ದಿವಸ ಗರ್ಭತೊಟ್ಟಳು ೬. ಇವಳು ಪ್ರತಿ ಶನಿವಾರ ಪ್ರದೋಷ ಪೂಜೆಯೆಂದು ಶ್ರೀ ಶಂಕರನನ್ನು ಆರಾಧಿಸುತ್ತಿರಲು ಅದರ ಪ್ರತಿಫಲವೆಂಬಂತೆ ಓರ್ವ ಪುತ್ರನು ಜನಿಸಿದನು. ಅವನ ಜನ್ಮ ನಾಮವನ್ನು ಸಾಲಿಗ್ರಾಮನೆಂದೂ ಮತ್ತು ಕರೆಯುವ ಹೆಸರು ನರಹರಿ ಎಂದೂ ಇಟ್ಟರು ೭. ಬ್ರಾಹ್ಮಣರು ಇವನ ಉಪನಯನವನ್ನು ಮಾಡಬೇಕೆಂದು ಯೋಚಿಸಿದರು ೮. ತನಗೆ ಈ ಮುಂಚೆಯೇ ಉಪನಯನವಾದಂತೆ ಯಜ್ಞೋಪವೀತವನ್ನು ತೋರಿಸಿದನು ೯. ಬ್ರಾಹ್ಮಣರು ಇದಕ್ಕೊಪ್ಪದೆ ಔಪಚಾರಿಕ ರೀತಿಯಿಂದ ಉಪನಯನವನ್ನು ಮಾಡಿದ ಕೂಡಲೆ ನರಹರಿಯು ಸನ್ಯಾಸಿ ಮಾರ್ಗವನ್ನು ಸ್ಥಾಪಿಸಲೋಸುಗ ಹೊರಹೊರಟು ಕಾಶೀ ಕ್ಷೇತ್ರಕ್ಕೆ ಬಂದು

---

೧. ಗುರುಚರಿತ್ರೆ ಅಧ್ಯಾಯ ೫ ಓವಿ ೯—೧೨.
೨. ,, ೩೫.
೩. ,, ೫೫—೫೬
೪. ೯ ೪೭—೪೮.
೫. ೧೧ ೩೦ರಿಂದ ೭.
೬. ೧೦.
೭. ೩೦.
೮. ೪೬.
೯. ೬೦—೬೧

ಅಲ್ಲಿಯ ಕೃಷ್ಣ ಸರಸ್ವತಿಯ ಕಡೆಯಿಂದ ಸನ್ಯಾಸಿ ಆಶ್ರಮವನ್ನು ತೆಗೆದು ಕೊಂಡನು ೧.

## ಗುರುಪರಂಪರೆ

"೧. ಪೂರ್ವಪೀಠ : ಶಂಕರ ೨. ವಿಷ್ಣು ೩. ಬ್ರಹ್ಮ ೪. ವಸಿಷ್ಠ ೫. ಪರಾಶರ ೬. ವ್ಯಾಸ ೭. ಶುಕ ೮. ಗೌಡಪಾದ ೯. ಗೋವಿಂದ ೧೦. ಶಂಕರಾಚಾರ್ಯ ೧೧. ವಿಶ್ವರೂಪ ೧೨. ಜ್ಞಾನಬೋಧನ ಗಿರಿಯ ೧೩. ಸಿದ್ಧಗಿರಿಯ ೧೪. ಈಶ್ವರತೀರ್ಥ ೧೫. ನರಸಿಂಹತೀರ್ಥ ೧೬. ವಿದ್ಯಾತೀರ್ಥ ೧೭. ಶಿವತೀರ್ಥ ೧೮. ಭಾರತೀ ತೀರ್ಥ ೧೯. ವಿದ್ಯಾರಣ್ಯ ೨೦. ಶ್ರೀಪಾದ ೨೧. ವಿದ್ಯಾತೀರ್ಥ ೨೨. ಮಲೆಯಾನಂದ ೨೩ ದೇವತೀರ್ಥ ೨೪. ಸರಸ್ವತಿ ವೃದ್ಧ ೨೫. ಸರಸ್ವತಿಯಾದವೇಂದ್ರ ೨೬. ಕೃಷ್ಣಸರಸ್ವತಿ ೨೭. ನೃಸಿಂಹ ಸರಸ್ವತಿ" ಎಂದು ಇರುವದು ೨. ಈ ನರಸಿಂಹ ಸರಸ್ವತಿಯು ನಿಜಾಮ ಇಲಾಖೆಯ ಅಮರಜ ಮತ್ತು ಕೃಷ್ಣಾನದಿಗಳ ಸಂಗಮದಲ್ಲಿರುವ ಗಾಣಿಗಾಪುರ ಎಂಬಲ್ಲಿ ವಾಸಿಸುತ್ತಿದ್ದನು ೩. ಇವನು ಕ್ರಿ. ಶ. ೧೩೮೦ ರ ಸುಮಾರಕ್ಕೆ ಧರ್ಮ ಜಾಗ್ರತೆಯ ಕೆಲಸವನ್ನು ಕೈಕೊಂಡಿದ್ದನೆಂದು ಶ್ರೀ ಪಾಂಡರಕರರವರು ಅಭಿಪ್ರಾಯ ಪಡುತ್ತಾರೆ ೪. ಇವನು ಬಹುಧಾನ್ಯ ನಾಮಸಂವತ್ಸರದ ಮಾಘಮಾಸ ಅಸಿತ ಪಕ್ಷ ಶುಕ್ರವಾರದ ದಿವಸ ಸಮಾಧಿಸ್ತನಾದನು ೫. ಈ ಕಾಲವು ಕ್ರಿ. ಶ. ೧೪೫೮ ಆಗುತ್ತದೆ ಎಂದು ಶ್ರೀ ಪಾಂಗಾರಕರರವರು ಸಿದ್ಧಮಾಡಿರುತ್ತಾರೆ ೬. ಇವನಿಗೆ ಅನುಕ್ರಮವಾಗಿ ೭ ಜನ ಶಿಷ್ಯರಿದ್ದರು. ೧ ಮಾಧವ ಸರಸ್ವತಿ ೨ ಬಾಳ ಸರಸ್ವತಿ ೩ ಕೃಷ್ಣ ಸರಸ್ವತಿ ೪ ಉಪೇಂದ್ರ ಮಾಧವ ಸರಸ್ವತಿ ೫ ಸದಾನಂದ ಸರಸ್ವತಿ ೬. ಜ್ಞಾನಜ್ಯೋತಿ ಸರಸ್ವತಿ ೭ ಸಿದ್ಧ ಸರಸ್ವತಿ ೭. ಕೌಂಡಿಣ್ಯ ಗೋತ್ರದ ಸಾಖರೆ ಉಪನಾಮದ ಗಂಗಾಧರನೆಂಬ ಬ್ರಾಹ್ಮಣನಿದ್ದನು. ಅವನಿಗೆ ಚಂಪಾ ಎಂಬ ಒಬ್ಬ ಹೆಂಡತಿ ಇದ್ದಳು. ಇವರ ಹೊಟ್ಟೆ

---

೧. ಗುರು ಚರಿತ್ರೆ ಅಧ್ಯಾಯ ೯೧ ಓವಿ ೯೯

೨. ೧೨ ೧೦೮ ರಿಂದ ೧೧೬.

೩. ,, ,, ೧ ,, ೬೭

೪. ಶ್ರೀ ಪಾಂಗಾರಕರ ಕೃತ 'ತುಕಾರಾಮ ಚರಿತ್ರೆ' ಪುಟ ೭೦.

೫. ಗುರು ಚರಿತ್ರೆ ಅಧ್ಯಾಯ ೫೧ ಓವಿ ೩೬–೩೭.

೬. ಶ್ರೀ ಪಾಂಗಾರಕರ ಕೃತ 'ತುಕಾರಾಮ ಚರಿತ್ರೆ' ಪುಟ ೭೦.

೭. ಗುರು ಚರಿತ್ರೆ ಅ. ೧೩. ಓವಿ ೨೦–೨೧.

ಯಲ್ಲಿ ಗುರುಚರಿತ್ರೆಕಾರನಾದ ಸರಸ್ವತಿ ಗಂಗಾಧರನೆಂಬವನು ಹುಟ್ಟಿದನು ೧. ಇವನು ೫೩ ಅಧ್ಯಾಯ ೭೩೦೦ ಓವಿಯುಳ್ಳ ಗುರು ಚರಿತ್ರೆಯನ್ನು ರಚಿಸಿದನು ೨. ಇವನು ಕ್ರಿ. ಶ. ೧೫೪೮ರ ಸುಮಾರಿನಲ್ಲಿ ಈ ಗ್ರಂಥವನ್ನು ಬರೆದನೆಂದು ಶ್ರೀ ಪಾಂಗರಕರವರ ಅಭಿಪ್ರಾಯವಿದೆ ೩. ಕ್ರಿ. ಶ. ೧೫ನೆಯ ಶತಮಾನದ ಅಂತ್ಯಕ್ಕೆ ನರಸಿಂಹ ಸರಸ್ವತಿಯು ಆಗಿಹೋದನೆಂದು ಡಾ. ಕೇತಕರರವರು ಅಭಿಪ್ರಾಯಪಡುತ್ತಾರೆ ೪. ೧೬ನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿಹೋದಂಥ ನರಸಿಂಹ ಸರಸ್ವತಿಯು ದತ್ತನ ಅವತಾರವೆಂದು ತಿಳಿವಳಿಕೆ ಇದ್ದು ಔದುಂಬರ ಗಾಣಗಾಪುರ, ನರಸೋಬನವಾಡಿ ಮುಂತಾದ ಸ್ಥಳಗಳಲ್ಲಿ ಅವನು ಇದ್ದುದರಿಂದ ಆ ಸ್ಥಾನಗಳಿಗೆ ಗುರುದತ್ತನ ಪವಿತ್ರ ಕ್ಷೇತ್ರಗಳೆಂದು ಬಹಳ ಮಹತ್ತ್ವ ಬಂದಿತೆಂದು ಸಹ ಅದೇ ಡಾ. ಕೇತಕರರವರು ಅಭಿಪ್ರಾಯಪಟ್ಟಿರುವರು ೫. ಇದನ್ನು ನೋಡಲಾಗಿ ಇವೆರಡರಲ್ಲಿಯೂ ಸಾಮ್ಯವಿಲ್ಲವೆಂದು ಗೊತ್ತಾದರೂ-ಅದರ ಅಗತ್ಯವು ನಮಗೆ ಸದ್ಯಕ್ಕೆ ಇರುವದಿಲ್ಲ. ಆದರೆ ಈ ಭಿನ್ನಾಭಿಪ್ರಾಯವು ಹೇಗಾಯಿತೆಂಬುದರ ಬಗ್ಗೆ ಸ್ವಲ್ಪ ಹೇಳಬೇಕಾಗಿದೆ. ಒಬ್ಬ ಅಗಸನಿಗೆ ನೀನು ಮುಂದಿನ ಜನ್ಮದಲ್ಲಿ ವೇದುರಾನಗರದಲ್ಲಿ ಮ್ಲೇಂಛ ಕುಲದೊಳಗೆ ಬಾದಶಹನಾಗಿ ಹುಟ್ಟುವಿಯೆಂದು ವರಕೊಟ್ಟವನು ಶ್ರೀಪಾದನೋ ಅಥವಾ ನರಸಿಂಹ ಸರಸ್ವತಿಯೋ ಎಂಬುದರಲ್ಲಿ ಮತಭೇದವಿದೆ. ವೇ. ಸಿದ್ಧೇಶ್ವರ ಶಾಸ್ತ್ರಿ ಚಿತ್ರಾವ ೬. ಶ್ರೀ ಚಿಂತಾಮಣಿ ವಿನಾಯಕ ವೈದ್ಯ ೭, ಶ್ರೀ ಸರಸ್ವತಿ ಗಂಗಾಧರ ೮, ಶ್ರೀ ಸರದೇಸಾಯಿ ೯, ಸಾಧುಸಮುಚ್ಚಯ ಗ್ರಂಥ ಕರ್ತೃ ೧೦. ಮುಂತಾದವರು ಅಗಸನಿಗೆ ವರ ಕೊಟ್ಟವನು ನರಸಿಂಹ ಸರಸ್ವತಿಯೆಂದು ಗುರುಚರಿತ್ರೆಯ

---

೧. ಗುರುಚರಿತ್ರೆ ಅ. ೧ ಓವಿ ೩೬-೪೩
೨. ,, ,, ,, ೫೩ ,, ೧೦೪
೩. ತುಕಾರಾಮ ಚರಿತ್ರೆ ಪುಟ ೭೦
೪. ಮ. ಜ್ಞಾ. ಕೋಶ ಭಾಗ ೧೨-೧೩ ಗ. ಅಕ್ಷರ೫.
೫. ,, ,, ,, ೧೪—೧೫ ದ ಅಕ್ಷರ ೧೫
೬. ಮಧ್ಯಯುಗದ ಚರಿತ್ರೆ ಕೋಶ ಪುಟ ೬೦—೬೧
೭. ವಿವಿಧ ಜ್ಞಾನ ವಿಸ್ತಾರ ಮಾಸಿಕ ಅಗಸ್ಟ ಸಂಚಿಕೆ ೧೯೦೮
೮. ಗುರು ಚರಿತ್ರೆ ಅ. ೫೧-೫೨
೯. ಮುಸಲ್ಮಾನೀ ರಿಸಾಯತ ಭಾಗ ೧ ಪುಟ ೨೧೩
೧೦. ಸಾಧು ಸಮುಚ್ಚಯ ಗ್ರಂಥ ಪುಟ ೬೭೫

ಆಧಾರದಿಂದ ವಾದಿಸುವರು. ಇದೇ ಗುರು ಚರಿತ್ರೆ ಆಧಾರದಿಂದ ವರ ದಾತನು ಶ್ರೀಪಾದ ವಲ್ಲಭನೆಂದು ಹೇಳಿ ಅರಸನು ತಾನು ಪೂರ್ವದಲ್ಲಿ ಅಗಸ ಕುಲದವನೆಂಬುದನ್ನು ನೆನಪುಮಾಡಿ ಕೊಟ್ಟವನು ಗಾಣಿಗಾಪು ರದ ನಸಿಂಹ ಸರಸ್ವತಿಯೆಂದು ಎರಡನೆಯ ಪಕ್ಷದವರು ಪ್ರತಿಪಾದಿಸು ವರು. ಈ ಮತಭೇದದಿಂದ ಡಾ. ಕೇತಕರರವರು ಮೇಲೆ ಹೇಳಿ ದಂತೆ ಅಭಿಪ್ರಾಯಪಟ್ಟಿರುವರು.

ವಿಜಾಪುರದ ಕಲೆಕ್ಟರ ಕಚೇರಿಯ ಅಂಗಳದಲ್ಲಿ ಕಂದಕದ ದಂಡೆ ಯಮೇಲೆ ನರಸಿಂಹ ಸರಸ್ವತಿಯ ಒಂದು ಪುರಾತನ ಸ್ಥಾನವಿದೆ. ಪ್ರತಿ ಮೆಂಗೆ ಹಳ್ಳಿಗರು ಹಿರೋಡ್ಯಾ=ಹಿರೇ ಒಡೆಯ = ಮಹಾದೇವನೆಂದೆನ್ನು ವರು. ಇದಕ್ಕೆ ವಿಜಾಪುರ ಜಿಲ್ಲೆಯೊಳಗಿನ ಹಲವು ಐತಿಹಾಸಿಕ ವತನದಾರ ಮನೆತನದವರಿಂದ ನೇಮಣಕಗಳಿವೆ. ಇದರ ಉಪಾಸಕರು ಬಹುವಾಗಿ ಬ್ರಾಹ್ಮಣರಿದ್ದು ಪೂಜಾರಿ ಮಾತ್ರ ವತನದಾರ ಲಿಂಗವಂತನಿರುವನು. ಇದರ ಮೇಲಿಂದ ಈ ನರಸಿಂಹ ಸರಸ್ವತಿಯು ಬ್ರಾಹ್ಮಣೇತರನಿರಬಹು ದೆಂದು ಊಹಿಸಲಾಸ್ಪದವಿದೆ. ಸಂಶೋಧಕರು ಕಾಲನಿರ್ಣಯದೊಂದಿಗೆ ಈ ಮಾತನ್ನೂ ಸಹ ವಿಚಾರಿಸಬೇಕೆಂದು ನಮ್ಮ ಸೂಚನೆಯಿದೆ.

ಕ್ರಿ. ಶ. ೧೩೭೮ ರ ಸುಮಾರಕ್ಕೆ ನರಸಿಂಹ ಸರಸ್ವತಿಯು ಧರ್ಮ ಜಾಗ್ರತೆಯ ಕೆಲಸವನ್ನು ಮಾಡುತ್ತಿದ್ದನೆಂದು ಶ್ರೀ. ಪಾಂಗರಕರವರು ಹೇಳಿದ್ದನ್ನು ಮೇಲೆ ಉದಾಹರಿಸಿದೆ. ನರಸಿಂಹ ಸರಸ್ವತಿಯ ಧರ್ಮ ಜಾಗ್ರತೆಯ ಕಾರ್ಯದ ಕಾಲಕ್ಕೂ ಹಾಗು ಗುರು ಚರಿತ್ರೆ ಗ್ರಂಥ ನಿರ್ಮಾಣ ಕಾಲಕ್ಕೂ ೧೭೦ ವರ್ಷಗಳ ಅಂತರವಿದೆ. ನರಸಿಂಹ ಸರಸ್ವ ತಿಯ ಅವಸಾನ ಕಾಲಕ್ಕೂ ಗುರುಚರಿತ್ರೆಯ ನಿರ್ಮಾಣ ಕಾಲಕ್ಕೂ ೯೦ ವರ್ಷಗಳ ಅಂತರವಿದೆ. ಒಟ್ಟಿನಲ್ಲಿ ಗುರುಚರಿತ್ರೆ ಗ್ರಂಥಕರ್ತೃವು ನರಸಿಂಹ ಸರಸ್ವತಿ ಸಮಕಾಲೀನನಲ್ಲವೆಂದು ತಿಳಿದುಬರುವುದರಿಂದ ಈ ಗ್ರಂಥವು ಐತಿಹಾಸಿಕ ದೃಷ್ಟಿಯಿಂದ ಎಷ್ಟರಮಟ್ಟಿಗೆ ಗ್ರಾಹ್ಯವೆಂಬು ದನ್ನು ಸಂಶೋಧಕರು ವಿಚಾರಿಸತಕ್ಕದ್ದು. ಗುರುಚರಿತ್ರೆಯ ಭಾಷೆಯು ಅಷ್ಟು ಚೆನ್ನಾಗಿಲ್ಲ. ದತ್ತ ಸಂಪ್ರದಾಯವನ್ನು ಕುರಿತು ಬೇರೆ ಗ್ರಂಥ

ಗಳು ಇಲ್ಲವಾದುದರಿಂದ ದತ್ತೋಪಾಸಕರಿಗೆ ಇದು ಪರಮ ಪೂಜ್ಯವಾಗಿದೆ. ಇತ್ತೀಚೆಗೆ ವಾಸುದೇವಾನಂದ (ಟೇಂಬೆ) ಎಂಬವರು ಇದರ ಸಂಸ್ಕೃತ ಭಾಷಾಂತರ ಮಾಡಿರುವರು [೧]. ಗುರು ಪರಂಪರೆಯೊಳಗಿನ 'ಗಿರಿ 'ಪುರಿ ತೀರ್ಥ, ಭಾರತಿ, ಅರಣ್ಯ, ಸರಸ್ವತಿ' ಇತ್ಯಾದಿಗಳ ಮೇಲಿಂದ ಹಾಗೂ ಸರಸ್ವತಿಯ ಶಿಷ್ಯರು ತಮ್ಮ ಹೆಸರಿನ ಮುಂದೆ 'ಸರಸ್ವತಿ' ಈ ಶಬ್ದವನ್ನು ಹಚ್ಚುವದರಿಂದ ಈ ಜನರು 'ದಸನಾಮಿ ಗೋಸಾವಿ' ಜಾತಿಯವರಿರಬಹುದೆಂದು ತರ್ಕ ಮಾಡಲಿಕ್ಕೆ ಬಲವತ್ತರವಾದ ಸಾಧನೆಗಳು ಕಂಡುಬರುತ್ತವೆ. ಇದರ ಸ್ಪಷ್ಟೀಕರಣಾರ್ಥವಾಗಿ ದಸನಾಮಿ ಗೋಸಾವಿಗಳ ಪರಿಚಯವನ್ನು ಈ ಕೆಳಗೆ ಕೊಡುತ್ತೇವೆ.

## ದಸನಾಮಿ ಗೋಸಾವಿ.

"ಗೋಸಾಯಿ, ಗುಸಾಯಿ ಗೋಸ್ವಾವಿ." ಮುಂತಾದ ಅನೇಕ ಹೆಸರುಗಳಿಂದ ಇವರನ್ನು ಸಂಬೋಧಿಸುತ್ತಾರೆ. ಗೋಸಾವಿ ಇದು ಒಂದು ಹಿಂದು ಯತಿಗಳ ವರ್ಗವಿದ್ದು ಅವರಲ್ಲಿ ಶೈವ, ವೈಷ್ಣವ ಎಂಬ ಎರಡು ಭೇದಗಳು ಇರುವವು. ವರ್‍ಹಾಡ ಮತ್ತು ಮಹಾರಾಷ್ಟ್ರ ಪ್ರಾಂತಗಳಲ್ಲಿ ವಿಶೇಷಿತ ಶೈವರೇ ಇರುವರು. ಗೋಸಾವಿಗಳಲ್ಲಿ ಭಿಕ್ಷೆ ಬೇಡುವವರು ಹಾಗೂ ಗೃಹಸ್ಥರು ಎಂದು ಎರಡು ಭಾಗ ಮಾಡಬಹುದು. ವಟುಗಳನ್ನು ಮಾಡುವುದರ ಸಲುವಾಗಿ ಅವರು ಕೆಲವು ಹುಡುಗರನ್ನು ಕೊಳ್ಳುವರು ಅಥವಾ ಸಾಕುವರು. ಗೋಸಾವಿಗಳು ಒಂದು ಸಾರೆ ಶಸ್ತ್ರಧಾರಿಗಳಾದರೆ ಅವರನ್ನು ಸಂತೈಸುವುದು ಬಹಳ ಕಷ್ಟಕರವೆಂಬುದು ಅನುಭವದ ಮಾತಾಗಿದೆ. ಪ್ರಾಚೀನ ಕಾಲದಲ್ಲಿ ವಿವಿಧ ಗೊಸಾವಿಗಳ ನಡುವೆ ಘೋರ ಯುದ್ಧಗಳಾಗಿವೆ. ಇವರು ಗುಂಪು ಗುಂಪಾಗಿ ತಿರುಗುತ್ತ ಒಂದು ಪ್ರಕಾರದ ತೆರಿಗೆಯಂತೆ ಬಿಕ್ಷವನ್ನು ಎತ್ತುತ್ತಾರೆ. ಹಿಂದಕ್ಕೆ ಗೋಸಾಯಿಗಳು ಸೈನ್ಯದಲ್ಲಿಯೂ ಸೇರುತ್ತಿದ್ದರು. (ಡಫನ ಇತಿಹಾಸ). ಇಲ್ಲಿಯವರಗೆ ಸಾಮಾನ್ಯ ಗೊಸಾವಿಗಳ ವಿವೇಚನೆಯಾಯಿತು. ಇನ್ನು ಮೇಲೆ ಗೃಹಸ್ಥ ಗೋಸಾಯಿಗಳ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳಬೇಕಾಗಿದೆ. ಗೋಸಾವಿಗಳು ಮರಾಠಿ ಜಾತಿಯವರೆಂದು ಸಾಮಾನ್ಯವಾಗಿ ಎಣಿಸಲ್ಪಡುತ್ತಾರೆ. ಅಖಿಲಭಾರತದಲ್ಲಿ ಇವರ ಜನಸಂಖ್ಯೆಯು ೨॥ ಲಕ್ಷದ ಮೇಲಿದೆ. ಇವರು ಶಂಕರಾಚಾರ್ಯರ ಅದ್ವೈತಮತಾನುಯಾ

---

೧. ಮಾ. ಜ್ಞಾ. ಕೋಶ.

ಯಿಗಳಿರುವರು. ಗಿರಿ, ಪುರಿ, ಭಾರತಿ, ಮುಂತಾದ ೧೦ ಅಡ್ಡ ಹೆಸರು ಗಳು ಇವರಲ್ಲಿ ಬಳಿಕೆಯಲ್ಲಿರುವವು. ಇವರಲ್ಲಿ 'ಘರ ಭಾರಿ, ಮಠದಾರಿ ಸನ್ಯಾಸಿ ಎಂದು ಎರಡು ಭೇದಗಳಿರುತ್ತವೆ. ಆದರೆ ಪ್ರತಿಯೊಬ್ಬನಿಗೂ ಯಾವದೇ ತರಹದ ಸನ್ಯಾಸತ್ವವನ್ನೂ ಸ್ವೀಕರಿಸಲು ಬರುವುದು. ಇತ್ತೀ ಚಿಗೆ ಎಷ್ಟೋ ಮಠಧಾರಿಗಳು ಲಗ್ನ ಮಾಡಿಕೊಳ್ಳಲು ಪ್ರಾರಂಭಿಸಿರು ವರು. ವಹಾಡದೊಳಗಿನ ವ್ರಜೇಶ್ವರಿ ಸಂಸ್ಥಾನದ ಅಧಿಪತಿಗಳು ಗೃಹ ಸ್ಥಾಶ್ರಮಿಗಳಾಗಿರುವರು. ಮಠದಾರಿ ಗೋಸಾಯಿಗಳಲ್ಲಿ 'ಮಹಂತ, ಪರ ಮಹಂಸ' ಎಂದು ಎರಡು ವಿಧ. ಆದರೆ ಅವರ ಎಲ್ಲ ವ್ಯವಹಾರಗಳು 'ಘರ ಭಾರಿ' ಯವರಂತೆಯೇ ಇರುವವು. ಈ ಮಠಧಾರಿಗಳಲ್ಲಿ ಎಷ್ಟೋ ಗೋಸಾಯಿಗಳು ನವಕೋಟಿ ನಾರಾಯಣರಿರುವರು. ಬುದ್ಧಗಯೆ, ಹೈದರಾಬಾದ ಮೊದಲಾದ ಸಂಸ್ಥಾನಗಳಲ್ಲಿ ಗೋಸಾಯಿಗಳು 'ರಾಜ, ಮಹಾರಾಜ' ಎಂಬ ಬಿರುದುಗಳನ್ನು ಪಡೆದವರಿರುವರು. ಈ ಜಾತಿಯ ವಂಶಾವಳಿಯು ಭಾಟ ಜನರಲ್ಲಿರುವದು. ಅದರ ಮೇಲಿಂದಲೂ ಮತ್ತು ಇನ್ನಿತರ ಐತಿಹಾಸಿಕ ಆಧಾರಗಳ ಮೇಲಿಂದ ಈ ಜಾತಿಯಲ್ಲಿ ಬ್ರಾಹ್ಮ ಣರ ಸೇರ್ಪಡೆ ಇದ್ದಂತೆ ಕಂಡು ಬರುತ್ತದೆ. ಎಷ್ಟೋ ಧರ್ಮಗುರುಗಳಿರು ವರು. ಇನ್ನೂ ಕೆಲವು ಜನರಿಗೆ ದೊಡ್ಡ ದೊಡ್ಡ ಜಹಗೀರುಗಳಿರುವುವು. ಮುಖ್ಯವಾಗಿ ಗೋಸಾಯಿಗಳು ಶಂಕರನ ಉಪಾಸಕರಿರುವರು. ಇವರಲ್ಲಿ 'ಖುಕ್' ಸಂಧ್ಯಾ ಮಾಡುವವರು ಬಹಳ ಜನರಿರುವರು. ಹಲವರು ಗಾಯತ್ರಿ ಪಠನ ಮಾಡುವರು. ವೈದಿಕ ಸಂಸ್ಕಾರದ ಸನ್ಯಾಸದ ಅವಶೇಷ ವಾದ 'ವಿರಜ ಹೋಮ' ಎಂಬುದು ಮಾತ್ರ ಇನ್ನೂ ಉಳಿದಿರುತ್ತದೆ. ಇನ್ನುಳಿದುದೆಲ್ಲವೂ ಪುರಾಣೋಕ್ತವಾಗಿದೆ. ಗೋಸಾಯಿಗಳಲ್ಲಿ ಒಳಪಂಗ ಡಗಳಿಲ್ಲ. ಗೃಹಸ್ಥರನ್ನು ಸನ್ಯಾಸಿಗಳಂತೆಯೇ ಹುಗಿಯುತ್ತಾರೆ. ಶ್ರಾದ್ಧದ ಬದಲು ಪುಣ್ಯತಿಥಿ ಮಾಡುತ್ತಾರೆ. ಇವರ ವಿವಾಹ ಪದ್ಧತಿಯು ವೇದ ಮತ್ತು ಪುರಾಣವನ್ನನುಸರಿಸಿ ನಡೆಯುತ್ತದೆ. 'ಗಿರಿ, ಪುರಿ, ಪರ್ವತ, ಸಾಗರ, ಬನ, ತೀರ್ಥ, ಭಾರತಿ, ಸರಸ್ವತಿ, ಅರಣ್ಯ ವ ಆಶ್ರಮ' ಹೀಗೆ ಮುಖ್ಯವಾಗಿ ಹತ್ತು ಅಡ್ಡ ಹೆಸರುಗಳಿಂದ ಕರೆಯಲ್ಪಡುವರು. ಶರೀರ ಸಂಬಂಧವು ಒಂದೇ ಮಠದವರಲ್ಲಿ ಆಗುವುದಿಲ್ಲ. ಈ ಮಠಗಳು ೫೨-೫೩ ಇರುವವು. ಹಿಂದಿನ ಗೋತ್ರ ಪ್ರವರಗಳ ಮರವೆಯಾದದ್ದರಿಂದ ಸದ್ಯಕ್ಕೆ ಇವರು ಮಠಗಳನ್ನೇ ಗೋತ್ರವಾಗಿ ತಿಳಿಯುವರು. ಇವುಗ ಳಿಲ್ಲಿ ಶಾರದಾಮಠ, ಜ್ಯೋತಿರ್ಮಠ (ಜೋಷಿಮಠ) ಗೋವರ್ಧನಮಠ,

ಶೃಂಗರಿಮಠ ಹೀಗೆ ಮುಖ್ಯವಾಗಿ ನಾಲ್ಕು ಮಠಗಳಿರುವವು. ತಮ್ಮ ಸ್ಥಾನವು ದ್ವಿಜರಂತಿರುವುದೆಂದು ಸುಶಿಕ್ಷಿತ ಗೋಸಾಯಿಗಳು ತಿಳಿಯು ವರು. ಪೇಶವಿಗಳ ಕಾಲದಲ್ಲಿ ಮಹಾನುಭಾವಿ ಹಾಗೂ ಗೋಸಾವಿ ಇವರ ನಡುವೆ ಸಾಮಾಜಿಕ ಸ್ಥಾನದ ಬಗ್ಗೆ ತಂಟೆಗಳಾಗಿ— ಅದರಲ್ಲಿ ಗೋಸಾವಿಗಳು ಸನಾತನೀ ಧರ್ಮದ ಅನುಯಾಯಿಗಳೆಂದು ನಿರ್ಣಯಿ ಸಲ್ಪಟ್ಟಿರುವರು. ಮುಂಬೈ ಹಾಗೂ ಮಧ್ಯಪ್ರಾಂತ ಹಾಯಕೋರ್ಟುಗಳಲ್ಲಿ ಯಾಜ್ಞವಲ್ಕ್ಯ ಸ್ಮೃತಿ ಹಾಗು ದಾಯ ಭಾಗಗಳು ಅನ್ವಯಿಸುವುವೆಂದು ನಿರ್ಣಯವಾಗಿದೆ” (ಯವತಮಾಳದ ಶ್ರೀ. ಪೃಷ್ಠಿಗ್ ಹರಿಹರ ಇವರ ಕಡೆಯಿಂದ ಬಂದ ಸಂಗತಿಯನ್ನೇ ಸಂಕ್ಷಿಪ್ತವಾಗಿ ಮೇಲೆ ಉದಾಹರಿ ಸಲಾಗಿದೆ. ಇತರ ಸಂದರ್ಭ ಗ್ರಂಥಗಳು. ವಿಲ್ಸನ್ನರ ರಿಲಿಜಿಯಸ್ ಟೆಕ್ಸ್ಟ ಆಫ್ ಹಿಂದೂಸ್, ಸೆನ್ಸಸ್ ರಿಪೋರ್ಟ ೧೮೮೧-೧೯೧೧, ಕ್ರುಕ್, ರಸೆಲ್, ಹೀರಾಲಾಲ್, ಎಂಥೋವೆನ್, ಜೋಗೇಂದ್ರನಾಥಭಟ್ಟಾಚಾರ್ಯ ಇವರ ಹಿಂದೂ ಕಾಸ್ಟ ಆ್ಯಂಡ್‌ಸೆಲ್ಸ) ಎಂದು ಮಹಾರಾಷ್ಟ್ರ ಜ್ಞಾನಕೋಶ ದಲ್ಲಿ ಹೇಳಿದೆ [೧].

ಈ ನರಸಿಂಹ ಸರಸ್ವತಿಯ ಏಳು ಶಿಷ್ಯರ ಪೈಕಿ ಕೃಷ್ಣ ಸರಸ್ವತಿ ಎಂಬುವನೊಬ್ಬನಿದ್ದನು. ಇವನ ಶಿಷ್ಯನಾದ ಬ್ರಹ್ಮದಾಸನು ಚಾಮರ ಸನ ಪ್ರಭುಲಿಂಗ ಲೀಲೆಯ ಭಾಷಾಂತರವನ್ನು ಮರಾಠಿ ಭಾಷೆಯಲ್ಲಿ ೩೮೫೭ ಓವಿಗಳಿಂದ ಮಾಡಿದ್ದಾನೆ [೨]. ಈ ಮರಾಠಿ ಗ್ರಂಥದ ಕಡೆಯಲ್ಲಿ ಈ ಕೆಳಗಿನ ಓವಿಗಳಿರುತ್ತವೆ.—

ಏಕಾದಶ ಶತೇ ಏಕಾದಶ। ಪದೇ ವದಲಾ ಮುನಿ ಚಾಮರಸ॥
ಪಂಪಾಪತಿ ವಿರೂಪಾಕ್ಷ ಈಶ। ವರವಿಶೇಷ ಲಾವುನೀ ॥೬೬॥
ಲೀಲಾ ವಿಶ್ವಂಭರಾಚೀ ಚರಿತ್ರ। ಸರೋವರ ರಚಿಲೆ ಪವಿತ್ರ॥
ಮೋಕ್ಷಲಾಭೇ ಸ್ನಾನೇ ಮಾತ್ರ। ಜೀವಸ್ವತಂತ್ರೇ ಪರಬ್ರಹ್ಮ॥೬೭॥
ಶೃಂಗರೀ ಮಠ ಭೋಗದಾರ। ಸಂಪ್ರದಾಯಪದ ಮನೋಹರ॥
ಸರಸ್ವತೀ ದಶನಾಮೀ ಥೋರ। ಕೀರ್ತಿ ವಸುಂಧರೀ ವಿಸ್ತಾರಿಲೀ ॥೬೮॥
ಸನ್ಯಾಸಿ ಧರ್ಮ ಪರಿಷ್ಕಮೂರ್ತಿ। ನಾಮೆ ನರಸಿಂಹ ಸರಸ್ವತೀ॥
ಗಣಗನೂರೀ ವಿಖ್ಯಾತ ಕೀರ್ತಿ। ಯೋಗೀ ವರ್ಣಿತೀ ಸರ್ವದಾ ॥೬೯॥

---

೧. ಮ. ಜ್ಞಾ. ಕೋಶ ಭಾಗ ೧೨-೧೩ ಗ. ಅಕ್ಷರ ೭೪೫, ೨೪೬.

೨. ಧಾರವಾಡ ಲಿಂ. ವಿ. ಸಂ. ವಾಙ್ಮಯ ಶಾಖೆಯ ಪ್ರಭುಲಿಂಗಲೀಲೆ ಪು. ೨,೨೦

ತೋಚ ಆತ್ಮಾ ಮೂಲಪುರುಷ । ಶ್ರೀಕೃಷ್ಣ ಸ್ವಾಮಿ ಸದ್ಗುರು ಈಶ ॥
ತೇಣೇ ತಾರಿಲ ಬ್ರಹ್ಮದಾಸ । ಸ್ವಕೀಯಧ್ಯಾನ ಲಾವುನೀ ॥೭೦॥

## ಉಪಸಂಹಾರ.

ಮೇಲಿನ ಎಲ್ಲ ಸಂಗತಿಗಳ ಆಧಾರದಿಂದ ಸೂಕ್ಷ್ಮ ಬುದ್ಧಿಗಳು ನಿಷ್ಪಕ್ಷಪಾತ ದೃಷ್ಟಿಯಿಂದ ವಿಚಾರ ಮಾಡಿದರೆ ಸತ್ಯೈಕ ಶೋಧಕ ಬುದ್ಧಿಯುಳ್ಳ ವಾಚಕ ವೃಂದಕ್ಕೆ ಈ ಕೆಳಗೆ ವಿಮರ್ಶಿಸಿದಂತೆ ಒಪ್ಪಿಗೆಯಾಗಬಹುದೆಂದು ನಮ್ಮ ಬಲವಾದ ನಂಬುಗೆಯಿದೆ. ಅದು ಹೇಗಂದರೆ— ಗಾಣಿಗಾಪುರದ ನರಸಿಂಹ ಸರಸ್ವತಿಯು ಶುದ್ಧ ಅದ್ವೈತ ಸಾಂಪ್ರದಾಯದ, ವಿಪ್ರ ಸರಿಸಮಾನತೆಯು, ಮರಾಠರ ಜಾತಿಯ ಶೃಂಗರಿ ಮಠದ ಸರಸ್ವತಿ ಎಂಬ ಉಪನಾಮದ ದಸನಾಮಿ ಗೋಸಾಯಿ ಜಾತಿಯವನಿರಬಹುದೆಂಬುದಕ್ಕೆ ಎಳ್ಳಷ್ಟೂ ಸಂಶಯವಿಲ್ಲ. ಇವನಿಗೇ ಸಾಮಾನ್ಯ ಜನತೆಯು ವಾಡಿಯ ನರಸೋಬ (ನರಸಪ್ಪ) ಎಂದು ಕರೆಯುವ ರೂಢಿಯಿದೆ. ಪ್ರಯಾಗ ಕ್ಷೇತ್ರದಲ್ಲಿ ಮಾಧವ ಎಂಬ ಹೆಸರಿನ ಒಬ್ಬ ದ್ವಿಜಶ್ರೇಷ್ಠನು ಈ ನರಸಿಂಹ ಸರಸ್ವತಿಗೆ ಬಂದು ಭೆಟ್ಟಿಯಾದನು. ನರಸಿಂಹ ಸರಸ್ವತಿಯು ಮಾಧವನಿಗೆ ಬ್ರಹ್ಮಜ್ಞಾನವನ್ನು ಹೇಳಿ ಚತುರ್ಥಾಶ್ರಮವಾದ ಸನ್ಯಾಸಾಶ್ರಮವನ್ನು ಕೊಟ್ಟನೆಂದು ವರ್ಣನೆ ಇದೆ[೧]. ಈ ಮಾಧವ ಸರಸ್ವತಿಯು ಇವನಿಗೆ ಪ್ರಥಮ ಶಿಷ್ಯನು. ಗುರುಚರಿತ್ರೆಯಲ್ಲಿ ಇವನು ಬ್ರಾಹ್ಮಣನೆಂದು ಹೇಳಿದೆ.

ಇದರ ಹೊರ್ತಾಗಿ ಈ ದಸನಾಮಿ ಗೋಸಾಯಿಗಳಲ್ಲಿ 'ಅರಣ್ಯ' ಎಂಬ ಒಂದು ಶಾಖೆಯು ಇರುವುದು. ಗೌತಮಿ ತಟಾಕದ ಮಂಜರಿಕ ಗ್ರಾಮದಲ್ಲಿ ಅರಣ್ಯಶಾಖೆಯ ಮಾಧವಾರಣ್ಯನೆಂಬೊಬ್ಬ ವಿಖ್ಯಾತ ಮುನಿಯು ಆಗಿಹೋದನು [೨]. ಈ ಅರಣ್ಯ ಶಾಖೆಯ ಮುನಿಗಳಲ್ಲಿ ವಿದ್ಯಾರಣ್ಯನೆಂಬೊಬ್ಬನು ಬಹಳ ಪ್ರಖ್ಯಾತನಾಗಿದ್ದನು [೩]. ಇವನ ಹೆಸರು ಗುರುಚರಿತ್ರೆಯೊಳಗಿನ ಗುರುಪರಂಪರೆಯಲ್ಲಿದೆ. ಹಿಂದಕ್ಕೆ ರೇವಣಸಿದ್ಧೇಶ್ವರನ ಸಾಂಪ್ರದಾಯದವರಲ್ಲಿ ಒಬ್ಬನು ವಿದ್ಯಾರಣ್ಯ ಎಂಬ

೧. ಗುರುಚರಿತ್ರೆ ಅಧ್ಯಾಯ ೧೨ ಓವಿ ೧೨೫, ೧೨೬, ೧೨೭

೨. ಗುರುಚರಿತ್ರೆ ಅಧ್ಯಾಯ ೧೩ ಓವಿ ೭೯-೮೦

೩. ಗುರು ಚರಿತ್ರೆ ಅಧ್ಯಾಯ ೧೨. ಓವಿ ೧೧೪

ಹೆಸರಿನವನಿದ್ದನು ೧. ಇಂತಹ ಅನೇಕ ಅರಣ್ಯಯತಿಗಳಿಗೆ ರೇವಣ ಸಿದ್ಧೇಶ್ವರನು ಗುರುವಾದದ್ದರಿಂದ ಅವನಿಗೆ ಅರಣ್ಯ (ಆರ್ಯಾಣ) ಸಿದ್ಧ ಎಂಬ ರೂಢ ನಾಮವು ವಾಡಿಕೆಯಲ್ಲಿ ಬಂದಿತು. ಈ ಹೆಸರಿನ ಅನೇಕ ಪುಣ್ಯಕ್ಷೇತ್ರಗಳು ಕೊಲ್ಹಾಪೂರ ಸಾತಾರೆ ಮುಂತಾದ ಬೇರೆ ಬೇರೆ ಪ್ರಾಂತಗಳಲ್ಲಿ ಈಗಲೂ ಇರುತ್ತವೆ. ಈ ಪವಿತ್ರಸ್ಥಾನಗಳ ಭಕ್ತರು ಎಲ್ಲ ಮತೀಯರಿದ್ದರೂ ಅವರಲ್ಲಿ ವಿಶೇಷಿತಃ ಕುರುಬರು ಹೆಚ್ಚಾಗಿರುವರು. ಈ ಕುರುಬರಲ್ಲಿ ಲಿಂಗಧಾರಿಗಳಾದ ಹಂಡೇಕುರುಬರ ಸಮಾವೇಶವೂ ಆಗುವುದು. ಈ ರೇವಣಸಿದ್ಧನ ಸಾಂಪ್ರದಾಯಿಕರಲ್ಲೊಬ್ಬನು ೧೮ ನೆಯ ಶತಮಾನದಲ್ಲಿ ಕಾಡಸಿದ್ಧೇಶ್ವರನೆಂದು ಬಹಳ ಪ್ರಖ್ಯಾತನಾದ ವೀರ ಶೈವ ಯತಿಯಾಗಿದ್ದನು. ಇವನ ಹೆಸರಿನ ಪವಿತ್ರಸ್ಥಾನಗಳು ಕೊಲ್ಹಾ ಪೂರದ ಹತ್ತರ ಸಿದ್ಧಗಿರಿ ಮುಂತಾದವು ಇರುವವು. ಇವನು ಕನ್ನಡ ದಲ್ಲಿ ಅನೇಕ ವಚನಗಳನ್ನು ಬರೆದಿರುವನು. ೧೯ ನೆಯ ಶತಮಾನ ದಲ್ಲಿ ಅಡವಿಸ್ವಾಮಿ ಎಂಬೊಬ್ಬ ಪ್ರಸಿದ್ಧ ವೀರಶೈವ ಯತಿಯು ಆಗಿ ಹೋದನು. ಇದಕ್ಕೆ ಹೋಲಿಕೆಯಾಗಿ ಅಡವೆಪ್ಪ, ಅಡವೆವ್ವ ಎಂಬ ಹೆಸರುಗಳಾದರೂ ಲಿಂಗವಂತರಲ್ಲಿ ಇಂದಿಗೂ ಕಂಗೊಳಿಸುತ್ತಲಿರುವುವು. ಇದರ ಮೇಲಿಂದ ಈ ದಸನಾಮಿ ಗೋಸಾಯಿಗಳ ಮೇಲೆ ವೀರಶೈವರ ವರ್ಚಸ್ಸು ಬಹಳಿತ್ತೆಂಬುದು ಸಹಜವಾಗಿ ಸಿದ್ಧವಾಗುತ್ತಿದೆ.

ನರಸಿಂಹ ಸರಸ್ವತಿಯು ಭಿಲವಡಿ (ತಾಸಗಾಂವ ತಾಲೂಕ)ಯ ಭುವನೇಶ್ವರೀ ದೇವಾಲಯದಲ್ಲಿ ಇದ್ದನೆಂದು ವರ್ಣನೆ ಇದೆ. ೨ ಒಟ್ಟಿ ನಲ್ಲಿ ದಸನಾಮಿ ಗೋಸಾವಿಗಳಲ್ಲಿ ವೀರವೃತ್ತಿ, ಅವರ ಅಂತ್ಯಕಾಲದ ಸಮಾಧಿ ಪದ್ಧತಿ, ಮತ್ತು ಶ್ರಾದ್ಧದ ಬದಲು ಪುಣ್ಯತಿಥಿ, ನರಸಿಂಹ ಸರಸ್ವ ತಿಯ ಗುರು ಪಂಪರೆಯೊಳಗಿನ ವಿದ್ಯಾರಣ್ಯಯತಿ, ನರಸಿಂಹ ಸರಸ್ವತಿಯ ಭಿಲವಡಿ ಗ್ರಾಮದ ಭುವನೇಶ್ವರಿಯ ಮೇಲಿನ ಅಪಾರಭಕ್ತಿ, ಮುಂತಾ ದವುಗಳನ್ನು ಲಕ್ಷದಲ್ಲಿ ತಂದರೆ ಈ ದಸನಾಮಿ ಗೋಸಾಯಿಯೊಳಗಿನ ವಿದ್ಯಾರಣ್ಯಯತಿಯೇ ವಿಜಯನಗರದ ಹಂಡೇಕುರಬ ಸಂಗಮನ ಮಕ್ಕಳಾದ ಹುಕ್ಕ-ಬುಕ್ಕರಾಜರಿಗೆ ೩ ಸಹಾಯಕನಾಗಿರಬಹುದೆಂದು

೧. ಕೆಳದಿ ಬಸವರಾಜ ಕೃತ 'ಶಿವತತ್ವ ರತ್ನಾಕರ'

೨. ಗುರು ಚರಿತ್ರೆ ಅಧ್ಯಾಯ ೧೬ ಓವಿ ೬೩

೩. ವಿಜಯನಗರ ಷಟ ಸಾಂವತ್ಸರಿಕೋತ್ಸವದ ಸ್ಮಾರಗ ಗ್ರಂಥ (ಇಂಗ್ಲಿಷ) ಪುಟ ೧೬೩

ಊಹಿಸಲು ಅವಕಾಶವಿದೆ. ಇದಲ್ಲದೆ ವಿದ್ಯಾರಣ್ಯ (ಮಾಧವ) ನು ಬಿಲ್ವಾರಣ್ಯ ಗ್ರಾಮದಿಂದ ಬಂದವನೆಂದು ಗೊತ್ತಾಗುತ್ತದೆ. [೧] ಈ ಬಿಲ್ವಾರಣ್ಯ ಎಂಬುದೇ ಬರಬರುತ್ತ ಬಿಲ್ವಡವಿ, ಭಿಲವಡಿ ಎಂದಾಗಿರ ಬೇಕು ಎಂದು ತಿಳಿಯಲೂ ಶಕ್ಯವಿದೆ. ಕ್ರಿ. ಶ. ೧೪೫೮ ರಲ್ಲಿ ಸಮಾಧಿ ಸ್ಥನಾದ ನರಸಿಂಹ ಸರಸ್ವತಿಯು ಹಿಂದೆ ೫-೬ ತಲೆಗಳು ಅಂದರೆ ಸುಮಾರು ೧೪ ನೆಯ ಶತಮಾನದ ಪ್ರಾರಂಭವು ವಿದ್ಯಾರಣ್ಯರ ಕಾಲವಾಗುತ್ತದೆ. ಅಂದಮೇಲೆ ಇದಕ್ಕೂ ಮತ್ತು ವಿಜಯನಗರದ ರಾಜ್ಯ ಸ್ಥಾಪನೆಯ ಕಾಲಕ್ಕೂ ಸರಿ ಹೋಗುತ್ತದೆ. ಈ ಸಂಗತಿಗಳಿಗೂ ಮತ್ತು ಶಿವತತ್ವ ರತ್ನಾ ಕರದಲ್ಲಿ ಹೇಳಿದ ವಿದ್ಯಾರಣ್ಯರ ವಿಷಯವಾಗಿ ಹೇಳಿದ ಸಂಗತಿಗಳಿಗೂ ಸರಿ ಹೋಗುವುದರಿಂದ ವಿಜಯನಗರಕ್ಕೆ ಸಂಬಂಧಿಸಿದ ವಿದ್ಯಾರಣ್ಯನು ದಶ ನಾಮಿ ಗೋಸಾಯಿಯಾಗಿದ್ದು ರೇವಣಸಿದ್ಧೇಶ್ವರನ ಸಾಂಪ್ರದಾಯಿಕ ನಿದ್ದುದು ಸಿದ್ಧವಾಗುತ್ತದೆ. ಅಂದ ಮೇಲೆ ಇದೇ ವಿದ್ಯಾರಣ್ಯನಿಗೆ ಇತ್ತೀ ಚಿನ ಬರಹಗಾರರು ಶೃಂಗೇರಿಮಠದ ಸಂಪ್ರದಾಯಕ ಬ್ರಾಹ್ಮಣನೆಂದು ಸಾಧಿಸುತ್ತ ಬಂದಿರುವುದು ಸಂಶಯಾಸ್ಪದವಾದುದಲ್ಲದೆ ಚರ್ಚಾಸ್ಪದವಾ ಗಿಯೂ ತೋರುತ್ತದೆ [೨].

ದಸನಾಮಿ ಗೋಸಾಯಿಗಳು ೧೩ನೆಯ ಇಲ್ಲವೆ ೧೪ನೆಯ ಶತಮಾ ನದ ಪ್ರಾರಂಭಕ್ಕೆ ಚತುರ್ವಣ ಜಾತಿಯ ಪ್ರಾಬಲ್ಯವನ್ನು ಕಡಿಮೆ ಮಾಡುವದಕ್ಕೋಸ್ಕರ ಈ ದತ್ತಾತ್ರೇಯನ ಅವಧೂತ ಮಾರ್ಗವನ್ನು ಸ್ಥಾಪಿಸಿರಬಹುದು. ಈ ಪಂಥಕ್ಕೆ ಶೋಭಿಸುವಂಥ— ಹರಿಹರರಲ್ಲಿ ಭೇದ ವಿಲ್ಲವೆಂದು ತೋರಿಸಲಿಕ್ಕೆ ಬರುವಂತೆ ಹರಿ ಮತ್ತು ಹರನನ್ನು ಕೂಡಿಸಿ ಒಂದೇ ವಿಗ್ರಹದಲ್ಲಿ ಮೂರ್ತಿಯನ್ನು ಮಾಡಿಕೊಂಡಂತೆ ತ್ರಿಮೂರ್ತಿಗಳ ಭೇದವನ್ನು ದೂರಿಕರಿಸಲು- ಮಾರ್ಕಂಡೇಯ ಪುರಾಣದಲ್ಲಿ ಹೇಳಿದಂತೆ ಅತ್ರಿಕುಮಾರನಾದ, ಮನಸೋಕ್ತ ಆಚರಣೆ ಮಾಡುವಂಥ ದತ್ತಾತ್ರೇಯ ನನ್ನು ಈ ಅವಧೂತ ಮಾರ್ಗಿಗಳು ಕಲ್ಪಿಸಿಕೊಂಡಿರಬಹುದು. ಮುಂದೆ ನಾಮದೇವಾದಿಗಳು ಮಹಾರಾಷ್ಟ್ರದೊಳಗೆ ಭಾಗವತ ಮಾರ್ಗವನ್ನು ಸ್ಥಾಪಿಸಲು, ಜ್ಞಾನ ಮಾರ್ಗಾವಲಂಬಿಯಾದ ಜ್ಞಾನದೇವನು ಈ ಭಕ್ತಿ

---

೧. ಫಾದರ ಹೆರಾಸ, ಪುಟ ೧೦

೨. ಫಾದರ ಹೆರಾಸ, ಪುಟ ೧೫, ೩೫.

ಪಂಥಕ್ಕೆ ಕೂಡಿದಂತೆ, ಏಕನಾಥನ ಗುರುವಾದ ಜನಾರ್ದನ ಸ್ವಾಮಿಯೂದರೂ ಈ ಅವಧೂತ ಮಾರ್ಗಾವಲಂಬಿಯಾಗಿರಬೇಕು. ಮುಂದೆ ಅಲ್ಲಲ್ಲಿಗೆ ದತ್ತ ಮಂದಿರಗಳನ್ನು ಸ್ಥಾಪಿಸಿ ಅವುಗಳ ಪೂಜೆಗಳನ್ನು ಆ ಸಾಂಪ್ರದಾಯಕರು ಕೈಕೊಂಡಿರಬಹುದು. ತ್ರಿಮೂರ್ತಿಗಳ ಒಂದು ಮುಖನಾದ ದತ್ತನು ಕಾಲಕ್ರಮೇಣ ಮೂರು ಮುಖಗಳನ್ನು ಧರಿಸುವವನಾದನು. ಭಾರತದಲ್ಲಿ ಪೂರ್ವದಿಂದಲೂ ಏಕಮುಖಿ, ದ್ವಿಮುಖಿ, ಚತುರ್ಮುಖಿ, ಪಂಚಮುಖಿ, ಷಣ್ಮುಖಿ, ದಶಮುಖಿ, ಶತಮುಖಿ, ಸಹಸ್ರಮುಖಿ ಎಂಬ ದೇವತೆಗಳ ಸುಕಾಲವೇ ಇತ್ತು. ಆದರೆ ಮೂರು ಮುಖದ ದೇವರ ಕೊರತೆ ಇದ್ದುದರಿಂದ ಈ ಕೊರತೆಯನ್ನು ಅವಧೂತ ಮಾರ್ಗಿಗಳು ದತ್ತನ ತ್ರಿಮೂರ್ತಿ ಸ್ವರೂಪವನ್ನು ಮಾಡಿ ಪೂರ್ಣ ಮಾಡಿದರು. ಭಾರತದಲ್ಲಿ ವೇದ, ಉಪನಿಷತ್, ಪೌರಾಣಿಕ ಕಾಲಗಳಲ್ಲಿ ಅನೇಕ ಪ್ರಖ್ಯಾತ ಋಷಿಗಳೂ,' ಋಷಿಪುತ್ರರೂ, ಆಗಿಹೋಗಿರುವರು. ಆದರೆ ಇಂದಿನ ವರೆಗೆ ಒಬ್ಬ ಋಷಿಯನ್ನು ಇಲ್ಲವೆ ಒಬ್ಬ ಋಷಿ ಕುಮಾರನನ್ನು ದೇವರೆಂದು ಮನ್ನಿಸಿ ಪೂಜಿಸುವದನ್ನು ನಾವು ಎಲ್ಲಿಯೂ ಕಾಣಲಾರೆವು. ಆದರೆ ಈ ಅತ್ರಿಪುತ್ರ ದತ್ತನೆಂಬ ಅವೈದಿಕ ಮೂರ್ತಿಯು ಇದಕ್ಕೆ ಅಪವಾದವಾಗಿದೆ. ಇತ್ತೀಚೆಗೆ ಈ ದತ್ತ ಸಂಪ್ರದಾಯಿಗಳು ಪುನಃ ಚತುರಾಶ್ರಮದೊಳಗಿನ ಸನ್ಯಾಸಿ ಮಾರ್ಗಾವಲಂಬಿಗಳಂತೆ ತೋರುತ್ತಾರೆ. ಜನಾರ್ದನ ಸ್ವಾಮಿಯಿಂದ ವಾಸುದೇವಾನಂದ ಸರಸ್ವತಿ (ಟೇಂಬೆ) ಯ ವರೆಗೆ ಅನೇಕ ಜಾತಿಯ ಹಲವು ಜನರು ದತ್ತನ ಭಜನ ಪೂಜಾದಿಗಳನ್ನು ಮಾಡುವರು. ಸಧ್ಯಕ್ಕೆ ಸುಶಿಕ್ಷಿತ ಬ್ರಾಹ್ಮಣರಲ್ಲಿಯೂ ಕೂಡ ದತ್ತನ ಭಜನ-ಪೂಜಾದಿಗಳು ವಿಶೇಷವಾಗಿ ನಡೆಯುಹತ್ತಿವೆ.

ಕೊನೆಯದಾಗಿ ಒಂದು ಮಾತು. ನನ್ನ ಅಭ್ಯಾಸದ ಚಟದಲ್ಲಿ ಸಾಗಿರುವಾಗ ಕಂಡು ಬಂದ ಕೆಲವು ಸಂಶಯಗಳನ್ನು ಸಂಗ್ರಹಿಸಿ, ಅವಕ್ಕೆ ಆಧಾರ ಯುಕ್ತ ತಳಹದಿಯನ್ನು ಇಟ್ಟು ಬರೆದ ಲೇಖವಿದು. ಇದು ಸಿದ್ಧಾಂತವೆಂದೇ ನನ್ನ ಅಭಿಪ್ರಾಯವಲ್ಲ. ಸಂಶೋಧಕರು ಸರಿಯಾದ ಮಾರ್ಗವನ್ನು ಸೂಚಿಸಿದರೆ ಅದನ್ನು ಒಪ್ಪಿಕೊಳ್ಳಲೂ ಸಿದ್ಧನಿರುವೆನು. ಒಟ್ಟಿನಲ್ಲಿ ಸತ್ಯಾಂಶವು ಹೊರಬಿದ್ದರೆ ನೆಟ್ಟಗೆ.

---

# ಶೂನ್ಯ ಸಂಪಾದನೆಯ ರಹಸ್ಯ

(ಶರಣರವಸಾನ ಪರಾಮರಿಕೆ ಸಂಪಾದನೆ.)

(ಲೇಖಕ— ಕಲ್ಯಾಣಪ್ಪಾ ಬ್ಯಾಳಿ, ಬಿ. ಎ. ವಿಜಾಪುರ.)

ಸಂಗನಬಸವಣ್ಣಗೆ ಘನ-
ಲಿಂಗದೊಳವಿರಳ ನಿಜೈಕ್ಯವುಂ ಶರಣಸ್ತೋ ।
ತ್ರಂಗಳ ನವಸಾನವಪ್ರಭು-
ಲಿಂಗಂ ಪೇಳಿದ ಸುಬೋಧೆಯಂತೆನೆಪೇಳ್ವೆಂ ॥

ಹಿಂದಿನ ಪ್ರಕರಣದಲ್ಲಿ ಸರ್ವ ಗಣಂಗಳು ಬಂದು ಪ್ರಭುದೇವರಿಗೆ ಪೊಡವುಟ್ಟು ಸ್ತೋತ್ರ ಮಾಡಲಾಗಿ ಆ ಪ್ರಭುದೇವರು ಅವರಿಗೆ ಅಪ್ಪಣೆ ಕೊಡಿಸಿದ್ದೇನಂದರೆ "ನೀವು ಬರಿಯ ಸ್ತೋತ್ರ ಮಾಡಿ ಫಲವಿಲ್ಲ. ನಿಃಶಬ್ದ ಬ್ರಹ್ಮವು ನುಡಿಗಡಣಕ್ಕೆ ಸಾಧ್ಯವಪ್ಪುದೇ? ನೀವುಗಳೆಲ್ಲ ಪರಶಿವನ ಸ್ವರೂಪಿಗಳಿದ್ದು ಶ್ರೀ ಬಸವಣ್ಣನು ಸಹಿತವಾಗಿ ಮರ್ತ್ಯಕ್ಕೆ ಬಂದು ರುದ್ರಗಣ ಪ್ರಮಥಗಣಗಳೆಂಬ ಹೆಸರಿನಿಂದ ಕಲ್ಯಾಣವೆಂಬ ಕಟಕವ ಶಿವಪುರವ ಮಾಡಿ ಶಿವಾಚಾರ ಧ್ವಜವನೆತ್ತಿ ಭಕ್ತಿಯ ಸ್ಥಳಕುಳಂಗಳ ಧರೆಗೆ ತೋರಿ ಮರ್ತ್ಯವ ಪಾವನ ಮಾಡಿದ ಬಳಿಕ ಇನ್ನು ಮರ್ತ್ಯದ ಹಂಗೇತಕ್ಕೆ? ತನಿರಸವು ತುಂಬಿದ ಬಳಿಕ ಫಲವು ಒಮ್ಮಿಗೇ ತೊಟ್ಟು ಬಿಟ್ಟು ಕಳಚಿ ಬೀಳುವಂತೆ ನಿಮ್ಮ ನೀವೆ ತಿಳಿದು ನಿರಾಳದಲ್ಲಿ ನಿಜವನ್ನೈದಬೇಕು. ಸಾವನ್ನಕ್ಕರ ಸಾಧನೆಯ ಕಲಿತರೆ ಕಾದುವದಿನವಿನ್ನಾವುದು? ಅದು ಕಾರಣ ಬಸವಣ್ಣ, ಚೆನ್ನಬಸವಣ್ಣ ಮೊದಲಾದ ಪ್ರಮಥರು ಗುಹೇಶ್ವರ ಲಿಂಗದಲ್ಲಿ ನಿಜವನ್ನೈದಿ ನಿಶ್ಚಿಂತರಾಗಿರಯ್ಯಾ?

ಅದಕ್ಕೆ ಬಸವರಾಜದೇವರು ತಮ್ಮ ಲಿಂಗಾಂಗ ಸಮರಸೈಕ್ಯದ ಪರಿಯೆಂತೆಂದು ಪ್ರಭುದೇವರಿಗೆ ಈ ಪ್ರಕಾರವಾಗಿ ಬೆಸಗೊಂಡರು— "ದೇವಾ, ಅವಧರಿಸು ಎನ್ನ ಬಿನ್ನಪವ. ಕಾಯದ ಮಾಯದ ಸಡಗರದಲ್ಲಿ ಹುಟ್ಟಿಸಿದಿರಿ. ಆ ಕಾಯದ ಮಾಯದ ತಲೆಯ ಚಿವುಟಿ ಕಾರುಣ್ಯವ ಮಾಡಿ ಗುರುಲಿಂಗಜಂಗಮ ತ್ರಿವಿಧ ಭಕ್ತಿಯ ಘನವ ತೋರಿಸಿ ಪಾದೋದಕ ಪ್ರಸಾದವನ್ನಿತ್ತು ರಕ್ಷಿಸಿದಿರಿ. ಪರವಾದಿ ಬಿಜ್ಜಳನು ಒರೆಗಲ್ಲಾ

ದಲ್ಲಿ ಮುನ್ನೂರರವತ್ತು ಸತ್ತ ಪ್ರಾಣವ ಬದುಕಿಸಿ ಮೂವತ್ತಾರು ಕೊಂಡೆಯವರ ಪರಿಹರಿಸಿ ಎಂಬತ್ತೆಂಟು ಪವಾಡವ ಮೆರೆಯುವಂತೆ ಮಾಡಿದಿರಿ. ಎನ್ನ ಮನದ ಮಲಿನವ ತೊಳೆಯಲೆಂದು ಬಂದು ಶೂನ್ಯ ಸಿಂಹಾಸನದ ಮೇಲೆ ಮೂರ್ತಿಗೊಂಡು ನಿಮ್ಮ ನಿಜಮಹಿಮೆಯನ್ನೆಲ್ಲ ಪ್ರಮಥರ ಮುಂದೆ ತೋರಿ ಎನ್ನ ಪಾವನವ ಮಾಡಿ ಷಟ್‌ಸ್ಥಲವಂ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ಎನ್ನ ನಿಮ್ಮಂತೆ ಮಾಡಿದಿರಿ. ಇದೆಲ್ಲ ತಮ್ಮ ಲೀಲಾ ವಿನೋದ. ಲಿಂಗಾಂಗ ಸಾಮರಸ್ಯದ ಸಕೀಲ ಸಂಬಂಧವನ್ನು ನೀವೇ ಬಲ್ಲಿರಾಗಿ ಎನಗೊಮ್ಮೆ ತಿಳುಹಿಕೊಟ್ಟು ಎನ್ನನುಳುಹಿಕೊಳ್ಳಾ ಪ್ರಭುವೇ ?

ಈ ಮಾತಿಗೆ ಪ್ರಭುದೇವರು "ಲಿಂಗಾಂಗ ಸಮರಸದ ನಿಜಪದವು ನಿನಗೆ ತಾನೇ ಸಾಧ್ಯವಾಗಿರಲು ನಾನು ಹೇಳಲಿಲ್ಲ. ನೀನು ಕೇಳಲಿಲ್ಲ. ಗುಹೇಶ್ವರ ಲಿಂಗದಲ್ಲಿ ತೆರೆಮರೆಯೆಂಬುದಿಲ್ಲ ಕಾಣಾ ಸಂಗನಬಸವಣ್ಣಾ" ಎಂದು ನಿರೂಪಿಸಲು ಬಸವಣ್ಣನವರು ಪ್ರಭುವಿಗೆ ಪುನಃ ಅರಿಕೆಮಾಡಿಕೊಂಡದ್ದೇನಂದರೆ— ನಿಜಪದವನರಿದಿಹೆನೆಂದರೆ ಅರಿವಿಂಗಸಾಧ್ಯ. ನೆನೆದಿಹೆನೆಂದರೆ ನೆನಹಿಂಗಸಾಧ್ಯ. ಭಾವಿಸಿಹೆನೆಂದರೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರವಾದ ಲಿಂಗವನರಿವ ಪರಿಯೆಂತಯ್ಯಾ ಗುರು ತೋರದನ್ನಕ್ಕರ ? ಗುರುಶಿಷ್ಯರ ಮಥನದಲ್ಲಿ ಸ್ವಯಂಜ್ಯೋತಿ-ಲಿಂಗವು ಉದಯವಪ್ಪುದೆಂಬ ಶ್ರುತಿ ಹುಸಿಯೆ ? ಕೂಡಲಸಂಗಮದೇವಾ, ನಿಮ್ಮ ಮಹಾನುಭಾವದ ಮಥನದಿಂದ ಎನ್ನಲ್ಲಿ ನಿಜವನೆಲೆಗೊಳಿಸಾ ಪ್ರಭುವೆ

ಪ್ರಭು— ಮಥನ ಲೀಲೆಯಲ್ಲಿ ಬ್ರಹ್ಮವು ಹುಟ್ಟದು. ಅದು ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ. ನಿರಾಕಾರವಾದ ಆ ಪರ ವಸ್ತುವು ಸಚರಾಚರ ವಸ್ತುಗಳಲ್ಲಿ ತುಂಬಿರುವದೆಂಬ ಮಾತು ಹುಸಿ ನೋಡಾ. ಇಲ್ಲದ ಲಿಂಗವ ಉಂಟೆಂದು ಭಾವಿಸುವವರಿಗೆ ಆ ಲಿಂಗವು ಸಾಧ್ಯವಾಗದು ನೋಡಾ ಬಸವಣ್ಣಾ.

ಬಸವ— ಶರಣರ ಅನುಭಾವಕ್ಕೆ ಮಾತಿನ ಮಥನವೆನ್ನಬಹುದೇ ? ಅನುಭಾವವಿಲ್ಲದೆ ಭಕ್ತಿಯಿಲ್ಲ, ಪ್ರಸಾದವಿಲ್ಲ, ಸಮರಸವಿಲ್ಲ. ಅನುಭಾವವಿಲ್ಲದೆ ಏನೇನೂ ಅರಿಯಬಾರದು. ನನ್ನಲ್ಲಿ ನಿಜವು ಸನ್ನಿಹಿತವಾಗಿದ್ದರೆ ಶಿವಶರಣರ ಸಂಗವೇಕೆ ? ನಿಮ್ಮ ಅನುಭಾವವು ಮಾತಿನ ಮಥನವಲ್ಲ. ಅದು ಕಾರಣ ಆ ನಿಜವ ನೆಲೆಗೊಳಿಸಾ ಪ್ರಭುವೆ ?

ಪ್ರಭು ಗುಹೇಶ್ವರ ಮೆಚ್ಚಲು ಒಂದೇ ಮಾತಿನಲ್ಲಿ ಹೇಳಿ ಬಿಡುವೆ. ಬಹು ಮಾತಿನ ಮಾಲೆಯು ಅನುಭಾವಕ್ಕೆ ಸಾಚುವೆನು. ನೆಲದ ಮುಂದಣ ಬಾಗಿಲ ಮೂರು ಮೊನೆಯ ಕಂಭದ ಶೈಲದಲ್ಲಿ ಒಂದು ದೇಗುಲವಿರುವದು. ಅಲ್ಲಿ ಒಳಗಿನ ಹುವ್ವಿನ ಕಲ್ಲಿನಲ್ಲಿ ನಾದಮೂರುತಿ ಲಿಂಗವಿಪ್ಪುದು ನೋಡಾ ಸಂಗನಬಸವಣ್ಣಾ.

ಬಸವ— ಒಂದೇ ಮಾತು, ಹಲವು ಮಾತೆಂಬ ಭೇದವುಂಟೆ? ನಿಜವು ವಾಙ್ಮನಕ್ಕೆ ಅಗೋಚರವೆಂಬುದು ನುಡಿಯಾಯಿತು. ನಡೆಯಲ್ಲಿ ನಿಮ್ಮ ಮಾತೆಂಬ ಪರತತ್ವ ಒಂದಲ್ಲದೆ ಎರಡುಂಟೇ? ಅದು ಸಾಧ್ಯವಹ ಪರಿಯೆಂತು ಹೇಳಯ್ಯಾ ಪ್ರಭುವೇ?

ಪ್ರಭು— ಬೀದಿಯಲ್ಲಿ ಕೊಡನ ಒಡೆದು ಬಯಲನುಡುಗಿದರೆ ಕೊಡವುಂಟೆ? ಗುಹೇಶ್ವರಲಿಂಗವ ತನ್ನಿಂದ ಬೇರೆ ಮಾಡಿ ಮಾತಿನಿಂದ ಅರಸಲುಂಟೆ? ಸಂಗನಬಸವಣ್ಣಾ, ಬಸವಣ್ಣನೇ ಎನ್ನ ಪ್ರಾಣಲಿಂಗವೆಂದರಿದು ದೃಷ್ಟಿ ನಟ್ಟು ಸ್ವೈರಗಾದುದ ಕಂಡೆ. ನೀನೆನ್ನನೊಳಕೊಂಡ ಗುರುವೆಂದೆನಯ್ಯಾ. ಎತ್ತೆತ್ತ ನೋಡಿದತ್ತ ಬಸವನೆಂಬ ಬಳ್ಳಿ, ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬ ಗೊಂಚಲು. ಆ ಗೊಂಚಲ ಹಿಡಿದೊತ್ತಿದರೆ ಭಕ್ತಿರಸವಾಯಿತ್ತಯ್ಯಾ. ಬಸವಗುರುವು ಎನ್ನ ಕರಸ್ಥಲದ ಲಿಂಗದ ಆದಿಯನರುಹಿ ತೋರಿದ ಕಾರಣ ಗುಹೇಶ್ವರಲಿಂಗದ ನಿಲವ ನಿನ್ನಿಂದಲರಿದೆನು. 'ಬ' ಎಂಬಲ್ಲಿ ಭವ ಹರಿಯಿತ್ತು. 'ಸ' ಎಂಬಲ್ಲಿ ಸರ್ವಜ್ಞಾನಿಯಾದೆನು. 'ವ' ಎಂದು ವಚಿಸುವರೆ ಚೈತನ್ಯಾತ್ಮಕನಾದೆನು. ಇಂತೀ ಬಸವಾಕ್ಷರ ತ್ರಯವು ಎನ್ನ ಸರ್ವಾಂಗದಲ್ಲಿ ತೊಳಗಿ ಬೆಳಗುವ ಭೇದವನರಿದು ಆನು ಬಸವ ಬಸವಾ ಎನುತಿರ್ದೆನು. ಕೈಲಾಸಕ್ಕೆ ಹೋದವರೆಲ್ಲ ಕೈಸೆರೆಯಾದರು. ಲಿಂಗದಲ್ಲಿ ಲೀಯವಾದವರೆಲ್ಲ ಬಂಧನಕ್ಕೊಳಗಾದರು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದವರೆಲ್ಲರು ಎಡೆಯಾಡುತಿರ್ದರು. ಗುಹೇಶ್ವರಾ, ನಿಮ್ಮ ಶರಣ ಸಂಗನಬಸವಣ್ಣನು ಜಂಗಮ ಪ್ರಸಾದಿಯಾಗಿ ಸ್ವಯಂಭುಲಿಂಗವಾದಾ.

ಈ ಮೇರೆಗೆ ಬಸವಣ್ಣನೇ ಸಾಕ್ಷಾತ್ ಪರವಸ್ತುವೆಂದು ಪ್ರಭುದೇವರು ಸ್ತುತಿ ಮಾಡಲು ಬಸವಣ್ಣನವರು ವಿನಯಪೂರ್ವಕವಾಗಿ ಪ್ರಭುದೇವರಿಗೆ ಬಿನ್ನವಿಸಿಕೊಂಡದ್ದೇನಂದರೆ "ಅರತವಡಗಿತ್ತೆನ್ನ ಬಯಕೆಸವುನಿ

ಸಿತ್ತೆನ್ನ. ಸ್ವಯವು ದೊರಕೊಂಡಿತ್ತೆನ್ನ. ನಿಮ್ಮ ನೋಡಿ ಎನ್ನ ಕಂಗಳ ಮಂಗಳಮಯ ಸುಖಸಂಗವಾಯಿತ್ತು. ಪ್ರಭುವೇ, ನಿಮ್ಮ ಕರುಣದಿಂದ ಒಳಹೊರಗೆಂಬುದ ತಿಳಿದು ಕೂಡಲಸಂಗಮದೇವರಲ್ಲಿ ತೆರಹಿಲ್ಲದಿರ್ದೆನು.

ಈ ಮೇರೆಗೆ ಬಸವರಾಜದೇವರು ನಿರ್ವಯಲ ಸಮಾಧಿ ಸ್ಥಿತಿಗೇರಿ ನಲಿಯುತ್ತಿರಲು ಚೆನ್ನಬಸವ, ಮಡಿವಾಳಮಾಚಯ್ಯ, ಬಹುರೂಪಿ ಚೌಡಯ್ಯ, ಹಡಪದಪ್ಪಣ್ಣ, ಸೊಡ್ಡಳ ಬಾಚರಸ, ಪರೋಳಿಗೆಯ ಮಾರಯ್ಯ, ಡೋಹರ ಕಕ್ಕಯ್ಯ ಮೊದಲಾದ ಶರಣರು ಆನಂದ ತುಂದಿಲರಾಗಿ ಒಬ್ಬೊಬ್ಬರೇ ಬಸವಜ್ಯೋತಿಯು ಬಲದಿಂದ ತಮ್ಮ ಅವಸಾನದ ಪರಾಮರಿಕೆಯನ್ನು ಮಾಡಿದ್ದರ ವಿವರವು ಇದರಡಿಯಲ್ಲಿ ಕೊಡಲ್ಪಟ್ಟಿದೆ.

## ೧ ಚೆನ್ನಬಸವದೇವರ ಪರಾಮರಿಕೆ.

ಅಪ್ಪುವನಪ್ಪಿದ ವಾರಿಕಲ್ಲಿನಂತೆ, ವಾಯುವನಪ್ಪಿದ ಪರಿಮಳದಂತೆ, ಲಿಂಗವನಪ್ಪಿದ ಶರಣಂಗೆ ದೇಹಿಯೆನಬಹುದೇ? ಅನಲನಪ್ಪಿದ ಕರ್ಪುರಗಿರಿಯಂತೆ ಕೂಡಲಚನ್ನಸಂಗಯ್ಯಾ ನಿಮ್ಮ ಶರಣ ಬಸವಣ್ಣನ ನಿಲವು. ವೇದವೇದಾರ್ಥ ಸಾರಾಯದಿಂದೆ ಹದಿನಾರು ಶಾಸ್ತ್ರ ಪುರಾಣಂಗಳಾದವು. ಆ ಪುರಾಣಂಗಳ ಸಾರವನರಿಯುವದರಿಂದ ಜ್ಯೋತಿ ಜ್ಞಾನವಾಯಿತ್ತು. ಆ ಜ್ಯೋತಿಜ್ಞಾನದಿಂದ ಮತಿಜ್ಞಾನ, ಶ್ರುತಜ್ಞಾನ ಮನಃ ಪರಿಪೂರ್ಣಜ್ಞಾನ, ಅವಧಿಜ್ಞಾನ, ಕೇವಲಜ್ಞಾನ ಇಂತೀ ಪಂಚಜ್ಞಾನವುಂಟಾಯಿತ್ತು. ಮತಿಜ್ಞಾನವುಳ್ಳಾತನೇ ಭಕ್ತ, ಶ್ರುತಜ್ಞಾನವುಳ್ಳಾತನೇ ಮಹೇಶ್ವರ, ಪರಿಪೂರ್ಣಜ್ಞಾನವುಳ್ಳಾತನೇ ಪ್ರಸಾದಿ, ಅವಧಿಜ್ಞಾನವುಳ್ಳಾತನೇ ಪ್ರಾಣಲಿಂಗಿ, ಕೇವಲಜ್ಞಾನವುಳ್ಳಾತನೇ ಶರಣ, ಶರಣಸ್ಥಲಕ್ಕೆ ಭವಂ ನಾಸ್ತಿ ಈ ಪಂಚಜ್ಞಾನಕ್ಕೆ ಮೂಲವಾದ ಜ್ಯೋತಿಜ್ಞಾನವೇ ಪಂಚಸ್ಥಲದಲ್ಲಿ ಐಕ್ಯವಾಗಲು ಆತನೇ ಐಕ್ಯ. ಇಂತೆಂಬುದಾಗಿ ಪಂಚಸ್ಥಲದಲ್ಲಿ ನೆಲೆಯ ಬಲ್ಲ ಐಕ್ಯಬಸವಣ್ಣಂಗೆ ನಮೋ ನಮೋ ಎಂಬೆನು. ನೇಹದ ಸುಖವ ನೋಟ ನುಂಗಿತ್ತು. ನೋಟದ ಸುಖವ ಕೂಟ ನುಂಗಿತ್ತು. ಕೂಟದ ಸುಖವ ಆಲಿಂಗನ ನುಂಗಿತ್ತು. ಆಲಿಂಗನದ ಸುಖವ ಸಂಗ ನುಂಗಿತ್ತು. ಸಂಗ ಸುಖವ ಸಮರಸ ನುಂಗಿತ್ತು. ಸಮರಸ ಸುಖವ ಪರವಶ ನುಂಗಿತ್ತು. ಬಸವಣ್ಣನ ಪರವಶದ ಸುಖವ ಕೂಡಲಚೆನ್ನಸಂಗಯ್ಯ ತಾನೇ ಬಲ್ಲ. ಐಕ್ಯಂಗೆ ಆನೆಂಬುದಿಲ್ಲ, ನೀನೆಂಬುದಿಲ್ಲ. ಪರ

ವೆಂಬುದಿಲ್ಲ, ಅರಿವೆಂಬುದಿಲ್ಲ. ಮರವೆಂಬುದಿಲ್ಲ, ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ. ಕೂಡಲಚೆನ್ನಸಂಗಯ್ಯನೆಂಬ ಶಬ್ದ ಮುನ್ನಿಲ್ಲ.

## ೨ ಮಡಿವಾಳಯ್ಯಗಳ ಪರಾಮರಿಕೆ.

ನಿತ್ಯ ಸತ್ಯದೊಳಡಗಿ, ಸತ್ಯ ಆಚಾರದೊಳಡಗಿ, ಆಚಾರ ಅನುಭಾವವೊಳಡಗಿ, ಅನುಭಾವ ಜ್ಞಾನದೊಳಡಗಿ, ಮಹಾಜ್ಞಾನ ಮನೋಲಯದೊಳಡಗಿ, ಮನೋಲಯವೇ ಮಹಾಘನವಾಯಿತ್ತು ಕಲಿದೇವರದೇವಾ ನಿಮ್ಮ ನಿಜೈಕ್ಯ ತನುವಳಿಯಿತ್ತು. ಮನವಳಿಯಿತ್ತು. ಭಾವವಳಿಯಿತ್ತು. ಬಯಕೆಯುಳಿಯಿತ್ತು. ನಿಜವೆಂಬುದಳಿಯಿತ್ತು. ಬಯಲಲ್ಲಿ ಬೆರಿಸಿ ನಾನು ಕಲಿದೇವರ ದೇವರಲ್ಲಿ ಬೇರಿಲ್ಲದಿರ್ದೆನು.

## ೩. ಬಹುರೂಪಿ ಚೌಡಯ್ಯಗಳ ಪರಾಮರಿಕೆ.

ಷಡುಚಕ್ರವಳಯದೊಳಗೆ ನಾನಾಡುವೆ. ಬಹುರೂಪ ಭ್ರೂಮಧ್ಯ ಮಂಡಲ ಹೃದಯ ಕಮಲ ಮಧ್ಯದ ಅಬ್ಜಸ್ವರದ ಮಣಿಪೂರಕದ ಮೇಲೆ ನಾನಾಡುವೆ. ಬಹುರೂಪನುರಿಯುಂಡ ಕರ್ಪುರದಂತೆ ನಾನಾಡುವೆ. ಬಹುರೂಪಬಯಲ ಬೆರೆಸಿದ ಮರೀಚಿಯಂತೆ ನಾನಾಡುವೆ. ಬಹುರೂಪ ರೇಕಣ್ಣ ಪ್ರಿಯನಾಗಿನಾಥಾ, ಬಸವಣ್ಣನಿಂದೆ ಬದುಕಿದೆನು. ಶೂನ್ಯ ಸನ್ನಿಹಿತನಾದಲ್ಲಿ, ಶೂನ್ಯ ಪದಾರ್ಥವಾದವೆಂದು ಬಸವನ ಪ್ರಸಾದವೆಂದು ಬಸವನ ಕೂಡೆ ಆಡುತಿರ್ದ ರೇಕಣ್ಣ ಪ್ರಿಯನಾಗಿನಾಥಾ, ಬಸವಣ್ಣನಿಂದೆ ಬದುಕಿತ್ತೀ ಲೋಕವೆಲ್ಲ.

## ೪. ಹಡಪದಪ್ಪಣ್ಣಗಳ ಪರಾಮರಿಕೆ.

ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು, ಎನ್ನ ಮನ ನಿಮ್ಮ ನೆನಹಿನಲ್ಲಿ ಸವೆದು, ಎನ್ನರಿವು ನಿಮ್ಮ ಘನದಲ್ಲಿ ಸವೆದು, ನಿಶ್ಚಲ ನಿಜೈಕ್ಯವಾಗಿ ಬಸವ ಪ್ರಿಯ ಕೂಡಲಚೆನ್ನಸಂಗಯ್ಯಾ, ನಾನೀನೆಂಬುದೇನಾಯಿತ್ತೆಂದರಿಯೆ. ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತವಾದವು. ಎನ್ನ ಅವಧಾನ ಅನುಭಾವ ಬಸವಣ್ಣಂಗರ್ಪಿತವಾದವು. ಎನ್ನ ಸರ್ವಾಚಾರ ಸಂಪತ್ತು ಬಸವಣ್ಣನಲ್ಲಿ ವೇದ್ಯವಾಯಿತ್ತು. ಬಸವಪ್ರಿಯ ಕೂಡಲಚೆನ್ನ ಸಂಗಮದೇವರಲ್ಲಿ ನಿಜ ನಿವಾಸಿಯಾಗಿರ್ದೆನು.

## ೫. ಸೊಡ್ಡಳಬಾಚರಸರ ಪರಾಮರಿಕೆ.

ಎನ್ನ ಕಾಯವೆಂಬ ಸಿಂಹಾಸನದಲ್ಲಿ ಪ್ರಾಣಲಿಂಗವ ಮೂರ್ತಿಗೊಳಿಸಿ, ಧ್ಯಾನವೆಂಬ ಹಸ್ತದಲ್ಲಿ ಮುಟ್ಟಿ ಪೂಜಿಸುತ್ತಿರಲು, ಮೆಲ್ಲಮೆಲ್ಲನೆ ಸುತ್ತಿ ಮುತ್ತಿದ ಸಂಸಾರ ಬಯಲ ಬೆರಸಿ ನಾನೆಂಬ ಭೇದವಳಿದು ಮಹಾದಾನಿ ಸೊಡ್ಡಳನಲ್ಲಿ ನಿಜಲಿಂಗೈಕ್ಯವಾಯಿತ್ತು. ಎನ್ನ ಕುಲಸೂತಕವನಳಿದ ಬಸವಣ್ಣ, ಎನ್ನ ಛಲಸೂತಕವನಳಿದ ಬಸವಣ್ಣ. ಎನ್ನ ತನುಸೂತಕವನಳಿದ ಬಸವಣ್ಣ. ಎನ್ನ ಮನಸೂತಕವನಳಿದ ಬಸವಣ್ಣ. ಎನ್ನ ಪ್ರಾಣಭಾವದ ಸೂತಕವ ಕಳೆದ ಬಸವಣ್ಣ ಎನ್ನ ಅರಿವು ಮರಹಿನ ಸಂದ ಬಿಡಿಸಿ ಎನ್ನ ತನ್ನಲ್ಲಿಂಬಿಟ್ಟುಕೊಂಡ ಬಸವಣ್ಣ. ನಿಜ ನಿರ್ವಯಲ ಸಮಾಧಿಯ ಬಾಗಿಲ ತೋರಿದ ಬಸವಣ್ಣನು.

## ೬. ಮೋಳಿಗೆಯಮಾರಯ್ಯಗಳ ಪರಾಮರಿಕೆ.

ಎನ್ನ ಅರಿವು ಮರಹು ಬಸವಣ್ಣಂಗರ್ಪಿತ. ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತ. ಎನ್ನ ಭಾವ ನಿರ್ಭಾವ ಬಸವಣ್ಣಂಗರ್ಪಿತ. ಎನ್ನಂತರಂಗ ಬಹಿರಂಗ ಬಸವಣ್ಣಂಗರ್ಪಿತ. ನೀನಾನೆಂಬುದು ಬಸವಣ್ಣಂಗರ್ಪಿತ ಇಂತು ಎನ್ನನೆ ಬಸವಣ್ಣಂಗೆ ನಿವೇದಿಸಿ ಆವ ಅವಲಂಬನವೂ ಇಲ್ಲದೆ ನಿರಾಲಂಬದಲ್ಲಿ ನಿಜನಿವಾಸಿಯಾದೆನು ಕಾಣಾ ನಿಃಕಳಂಕ ಮಲ್ಲಿಕಾರ್ಜುನಾ.

## ೭. ಡೋಹರ ಕಕ್ಕಯ್ಯಗಳ ಪರಾಮರಿಕೆ.

ಎನ್ನ ಕಷ್ಟ ಕುಲ ಸೂತಕ ನಿಮ್ಮ ಹಸ್ತ ಮುಟ್ಟಿದಲ್ಲಿ ಬಯಲಾಯಿತ್ತು. ಶುಕ್ಲ ಶೋಣಿತದಿಂದಾದ ಸೂತಕ ಲಿಂಗ ಮುಟ್ಟಿದೊಡನೆ ಬಯಲಾಯಿತ್ತು. ತಟ್ಟಿದ ಮುಟ್ಟಿದ ಸುಖಂಗಳ ಲಿಂಗ ಮುಖಕ್ಕೆ ಅರ್ಪಿಸಿದೆನಾಗಿ ಎನ್ನ ಪಂಚೇಂದ್ರಿಯಂಗಳು ಬಯಲಾದವು. ಎನ್ನಂತರಂಗದಲ್ಲಿ ಜ್ಞಾನ ಜ್ಯೋತಿಯು ಎಡೆಗೊಂಡಿತಾಗಿ ಒಳಗು ಬಯಲಾಯಿತ್ತು. ಸಂಸಾರ ಸಂಗದ ಅವಸ್ಥೆ ಮೀರಿತ್ತಾಗಿ ಬಹಿರಂಗ ಬಯಲಾಯಿತ್ತು. ಅಭಿನವ ಮಲ್ಲಿಕಾರ್ಜುನಾ, ನಿಮ್ಮ ಮುಟ್ಟಿದ ಕಾರಣ ನಾನು ಬಯಲಾದೆನು.

ಈ ಮೇರೆಗೆ ಶ್ರೀ ಬಸವರಾಜದೇವರ ಶಿವಾನುಭವ ಮಂಟಪವೆಂಬ ಗರುಡಿಯಲ್ಲಿ ಸಾಧನಮಾಡಿದ ಶರಣರೆಲ್ಲ ಆ ಬಸವನ ಅನುಗ್ರಹದಿಂದ

ಸಿದ್ಧಾವಸ್ಥೆಗೇರಿ ಲಿಂಗಾಂಗೈಕ್ಯದ ವಚನಗಳನ್ನು ಸ್ವಾನುಭವದಿಂದ ಹಾಡಿಕೊಂಡಿದ್ದಾರೆ. ವೀರಶೈವರಿಗೆ ಸಾಮರಸ್ಯ ಸುಖವು ಪ್ರಾಪ್ತವಾಗ ಬೇಕಾದರೆ ಭಕ್ತಿ ಮಾರ್ಗ, ಯೋಗಮಾರ್ಗ, ಜ್ಞಾನಮಾರ್ಗಗಳು ಅವಶ್ಯ ವಾದವುಗಳು. ಬಸವೇಶ್ವರನು ಭಕ್ತಿ ಮಾರ್ಗದ ತಳಹದಿಯಾದ್ದರಿಂದ ಎಲ್ಲ ಶರಣರು ತಮ್ಮ ಅವಸಾನ ಪರಾಮರಿಕೆ ಮಾಡುವಾಗ ಬಸವನ ಸೂತ್ರವನ್ನೆಂದಿಗೂ ಬಿಟ್ಟಿಲ್ಲ. "ಜ್ಞಾನಾದೇವ ತು ಕೈವಲ್ಯಂ" ಎಂಬ ತತ್ವ ದಂತೆ ಆ ಲಿಂಗೈಕ್ಯ ಸುಖವು ಭಕ್ತಿಯಿಂದ ಪ್ರಾದುರ್ಭವಿಸಿ ಜ್ಞಾನದಲ್ಲಿ ಲೀನವಾಗುತ್ತದೆಂಬುದೇ ಈ ಸಂಪಾದನೆಯ ಮುಖ್ಯ ತಿರುಳು. ಅದಕ್ಕೆ ಬಸವನೇ ಮುಖ್ಯ ಸೂತ್ರಧಾರನು. ಉಳಿದ ಶಿವಶರಣರೆಲ್ಲ ಪಾತ್ರಗಳು. ನಿರ್ವಯಲ ಸಮಾಧಿಯೇ ಈ ಸಂಪಾದನೆಯ ಗುರಿ.

---

# ಸಂಗೀತ ವಚನಗಳು.

ಲೇಖಕ:— ಶ್ರೀ. ಪಿ. ವ್ಹಿ. ಪಾಟೀಲ. (ಸಂಗೀತ ಶಿಕ್ಷಕ.) ವಿಜಾಪುರ.

[ಟೀಪು:— ಕಲಿಯುವವರಿಗೆ ಸುಲಭವಾಗಬೇಕೆಂದು ಸ್ವರ ಸಹಿತವಾಗಿ ಒಂದು ಪದವನ್ನು ಕೆಳಗೆ ಕೊಟ್ಟಿರುತ್ತದೆ. ಇದರ ಸ್ವರ ಸಂಯೋಜಕರು ಸೊಲ್ಲಾ ಪುರದ ಸಂಗೀತ ಕಲಾ ಮಂದಿರದ ಶ್ರೀ. ಡಿ. ಸಿ. ಬೋರಾಮಣಿಯವರು. ಮತ್ತು ಸಹಾಯಕರು ಶ್ರೀ. ಪಿ. ವ್ಹಿ ಪಾಟೀಲ ಸಂಗೀತ ಶಿಕ್ಷಕ ಇವರು ಇದ್ದಾರೆ— ಸಂಪಾದಕ ]

ರಾಗಿಣಿ—ಜಯ ಜಯವಂತಿ.

ಈ ರಾಗಿಣಿಯ ಸ್ವರೂಪವು ದೇಸ, ಛಾಯಾ ಮತ್ತು ಅಲಯ್ಯಾ ರಾಗಗಳಿಗೆ ಬಹು ಮಟ್ಟಿಗೆ ಸರಿಹೋಲುತ್ತಿದ್ದು ಎರಡೂ ಗಂಧಾರಗಳಿಂದ ಈ ರಾಗಿಣಿಯು ಅವುಗಳಿಂದ ವಿಂಗಡಿಸಲ್ಪಡುತ್ತದೆ. ಆರೋಹಾವರೋಹ ಷಾಡವ—ಸಂಪೂರ್ಣ ವಕ್ರ ಗತಿಯಿಂದ ಮಾಡಲ್ಪಡುತ್ತದೆ. ಆರೋಹ ದಲ್ಲಿ ಧೈವತ ವರ್ಜ್ಯ.

ಹಾಡುವ ಸಮಯ ರಾತ್ರಿಯ ಎರಡನೆಯ ಪ್ರಹರವು.

ಆರೋಹ:— ಸಾ ಧ ನಿ ರೆ ಗ ಮ ಪ ಮ ಗ ರೆ ಮ ಪ ನಿ ಸಾ.

ಅವರೋಹ:— ಸಾ ನಿ ಧ ಪ ಮ ಗ ರೆ ಗ ರೆ ಸಾ.

## ಸ್ವರ ಲೇಖನ ಸಂಕೇತ.

(೧) ಯಾವ ಸ್ವರದ ಕೆಳಗೆ ಂ ಈ ಚಿನ್ಹ ವಿರುವದೋ ಅದು ಮಂದ್ರ ಸಪ್ತಕದಲ್ಲಿಯ ಸ್ವರವೆಂದು ತಿಳಿಯಬೇಕು.

ಉದಾ:— ಮ ಪ ಧ ನಿ

(೨) ಚಿನ್ಹಗಳಿಲ್ಲದಸ್ವರಗಳು ಮಧ್ಯ ಸಪ್ತಕದವೆಂದು ತಿಳಿಯಬೇಕು.

ಉದಾ:— ಸಾ ರೆ ಗ ಮ

(೩) ಸ್ವರದ ಮೇಲೆ । ಈ ಚಿನ್ಹವಿದ್ದರೆ ಅದು ತಾರ ಸಪ್ತಕದ ಸ್ವರವೆಂದು ತಿಳಿಯಬೇಕು. ಉದಾ:— ಸಾ ರೆ ಗ

(೪) ಕೋಮಲ ಸ್ವರಗಳಿಗಾಗಿ ಸ್ವರಗಳ ಕೆಳಗೆ – ಈ ಚಿನ್ಹವು ಕೊಡಲ್ಪಟ್ಟಿದೆ. ಉದಾ:— ರಿ ಗ ಮ.

(೫) ಸ್ವರದ ಮುಂದೆ ಽ ಈ ಚಿನ್ಹವಿದ್ದರೆ ಅದನ್ನು ಒಂದು ಮಾತ್ರೆಯಿಂದ ಹೆಚ್ಚಿಸಬೇಕು. ಒಂದಕ್ಕಿಂತ ಹೆಚ್ಚು ಚಿನ್ಹಗಳಿದ್ದರೆ ಆ ಸ್ವರ ಅಥವಾ ಅಕ್ಷರವನ್ನು ಅಷ್ಟುಕಾಲದ ವರೆಗೆ ಹೆಚ್ಚಿಸಬೇಕು.

ಉದಾ:— ರೆ ಽ ಗ ಽ ಽ ಮ ಽ ಽ ಽ

(೬) ಯಾವ ಸ್ವರಗಳ ಕೆಳಗೆ ‿ ಈ ಚಿನ್ಹವಿರುವದೋ ಆ ಸ್ವರಗಳನ್ನು ಒಂದೇ ಮಾತ್ರೆಯ ಕಾಲದಲ್ಲಿ ಅನ್ನಬೇಕು.

ಉದಾ:— ರೆಗ ಮಪ ಪಧ.

## ತಾಲ ಸಂಕೇತ.

ಸಮ ಪೆಟ್ಟು ಹುಸಿ
+ — ೦

ಉದಾಃ—

| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
|---|---|---|---|---|---|---|---|---|---|---|---|
| ಧಿನ್ | ಧಿನ್ | ಧಾಗಿ | ತ್ರಕ | ತು | ನಾ | ಕತ್ | ತಾ | ಧಾಗೆ | ತ್ರಕ | ಧೀ | ನಾ |
| + | | ೦ | | — | | | | — | | — | |

ರಾಗಿಣೀ— ಜಯುಜಯುವಂತಿ.

ತಾಲ:— ದೃತ ಏಕತಾಲ.

**ಪದಃ—** (ವಚನ)

ತಂದೆ ನೀನು, ತಾಯಿ ನೀನು ।
ಬಂಧು ನೀನು, ಬಳಗ ನೀನು ॥ ಪ ॥
ನೀನಲ್ಲದೆ ಮತ್ತಾರು, ಇಲ್ಲವಯ್ಯಾ ।
ಕೂಡಲಸಂಗಮದೇವಾ । ಹಾಲಲದ್ದು ನೀರಲದ್ದು॥೧॥

—ಬಸವಣ್ಣ.

| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
|---|---|---|---|---|---|---|---|---|---|---|---|
| ಧಿನ್ | ಧಿನ್ | ಧಾಗೆ | ತ್ರಕ | ತು | ನಾ | ಕತ್ | ತಾ | ಧಾಗೆ | ತ್ರಕ | ಧೀ | ನಾ |
| + | | ೦ | | — | | ೦ | | — | | — | |
| ರೆ | ऽ | ರೆ | ಮ | ಗ | ರೆ | ಸಾ | ನಿ | ಸಾ | ನಿ | ಧ | ನಿ |
| ತಂ | ऽ | ದೆ | ನೀ | ऽ | ನು | ತಾ | ऽ | ಯಿ | ನೀ | ऽ | ನು। |
| ರೆ | ಗ | ಮ | ಪ | ಗ | ಮ | ರೆ | ಗ | ರೆ | ಸಾ | ಧ | ನಿ |
| ಬಂ | ऽ | ಧು | ನೀ | ऽ | ನು | ಬ | ಳ | ಗ | ನೀ | ऽ | ನು |
| ಮ | ಪ | ನೀ | ऽ | ನೀ | ನೀ | ಸಾ | ನಿ | ಸಾ | ಸಾ | ऽ | ऽ |
| ನೀ | ऽ | ನ | ऽ | ಲ್ಲ | ದೆ | ಮ | ऽ | ತ್ತಾ | ರು | ऽ | ऽ। |

ನಿ ಸಾ ರೆ ಽ ರೆ ಽ ಸಾ ನಿ ಧ ಪ ಮಗ ಮ
ಇ ಲ್ಲ ವ ಽ ಯ್ಯಾ ಽ ಽ ಽ ಽ ಽ ಽ ಽ ।

ಗ ಮ ನಿ ಧ ಪ ಮ ಗ ಮ ರೆ ಗರೆ ಸಾ ನಿಸಾ
ಕೂ ಽ ಡ ಲ ಸಂ ಽ ಗ ಮ ದೇ ಽಽ ವಾ ಽಽ ।

ರೆ ಗ ಮ ಪ ಗ ಮ ರೆ ಗ ರೆ ಸಾ ಧ ನಿ
ಹಾ ಽ ಲ ಲ ಽ ದ್ದು ನೀ ಽ ರ ಲ ಽ ದ್ದು

## ೬೮

ರಾಗಃ— ಕಾಫಿ. ತಾಲಃ— ತ್ರಿತಾಲ.

(ರಾಮಸಖಾ ಕುಣಿ ದಾವಾ... ಎಂಬಂತೆ)

ನಾದ ಪ್ರಿಯ ಶಿವ ನೆಂಬರು, ಅಯ್ಯಾ ॥
ನಾದ ಪ್ರಿಯ ಶಿವನಲ್ಲಯ್ಯಾ ।
ವೇದಪ್ರಿಯ ಶಿವನೆಂಬರು ॥ಪ॥
ವೇದ ಪ್ರಿಯ ಶಿವನಲ್ಲಯ್ಯಾ
ನಾದವ ಮಾಡಿದ ರಾವಣಂಗೆ ।
ಅರೆಯಾಯುಷ್ಯವಾಯಿತ್ತು ।
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು ।
ನಾದ ಪ್ರಿಯನು ಅಲ್ಲ, ವೇದ ಪ್ರಿಯನು ಅಲ್ಲ ।
ಭಕ್ತಿ ಪ್ರಿಯ ಕೂಡಲಸಂಗಮದೇವಾ ॥೧॥

— ಬಸವಣ್ಣ.

(೧೬) ಲಿಂಗಃ-- ಅಂಗದಲ್ಲಿ ಶಕ್ತಿ ಇದೆ. ಈ ಶಕ್ತಿಯ ಮೂಲಕವೇ ಅಂಗದ ವ್ಯಾಪಾರಗಳು ನಡೆಯುತ್ತಿವೆ. ಈ ಶಕ್ತಿಯ ಮೂಲಕವೇ ಜೀವನು ವ್ಯವಹರಿಸುತ್ತಾನೆ. ಅವನ ಈ ಶಕ್ತಿಯು ಸರಿಯಾದ ಮಾರ್ಗದಿಂದ ನಡೆದಲ್ಲಿ ಆ ಮಾರ್ಗವು ಭಕ್ತಿಯುಕ್ತವಾದುದೆಂದು ಹೇಳಲ್ಪಡುವದುಂಟ ಇಂಥ ಭಕ್ತಿಯುಕ್ತ ಕಾರ್ಯಗಳ ಮೂಲಕವೇ ಈ ಶಕ್ತಿಯಲ್ಲಿ ಲಿಂಗವು ತಲೆದೋರುತ್ತದೆ. ಆಗ ಪ್ರಕಟವಾದ ಲಿಂಗದ ವಶದಿಂದ ಹೀಗೆ ಇಂಥ ಅಂಗವು ಚಲನೆಹೊಂದುತ್ತದೆ. ಆದ್ದರಿಂದ ಲಿಂಗವೆಂದರೆ (*Spiritual energy*) ಎಂದು ಹೇಳಬಹುದು. ಅದು ಪರಮಾತ್ಮನ ಅಂಶವೇ ಇರುತ್ತದೆ. ಮುಂದೆ ಭಕ್ತಿಯು ಅಂಗದಲ್ಲಿ ಹೆಚ್ಚುತ್ತ ಹೋದಲ್ಲಿ ಲಿಂಗದ ಪ್ರಜ್ವಲನೆಯಾದರೂ ಹೆಚ್ಚುತ್ತ ಹೋಗುತ್ತಿದೆ. ಹೀಗೆ ಮನುಷ್ಯನಲ್ಲಿ ಪ್ರಗತಿ ತಲೆದೋರುತ್ತದೆ. ಅದು ಬೆಳೆಯುತ್ತ ಹೋದಲ್ಲಿ ಜೀವನು ಕಡೆಗೆ ಪರಮಾತ್ಮನಲ್ಲಿ ಅಥವಾ ನಿರವಯದಲ್ಲಿ ಅಥವಾ ಶೂನ್ಯದಲ್ಲಿ ಬೆರೆತುಹೋಗುತ್ತಾನೆ. ಇದೇ ಲಿಂಗಾಂಗ ಸಾಮರಸ್ಯವು ಅಥವಾ ಮೋಕ್ಷವು ಅಥವಾ ಐಕ್ಯವು ಅಥವಾ ಶಿವೈಕ್ಯವು, ಲಿಂಗೈಕ್ಯ ಸ್ಥಿತಿಯು. ವಚನಕಾರರು ಈ ಲಿಂಗ ವಿಕಾಸದ ಬಗ್ಗೆ ತಮ್ಮ ವಿಚಾರಗಳನ್ನು ಷಟ್‌ಸ್ಥಲಕ್ಕೆ ಅನುಸರಿಸಿ ಹೇಳುತ್ತಾರೆ. ಆದ್ದರಿಂದ ಲಿಂಗದಲ್ಲಿ ಅವರು ಆರು ವಿಭಾಗಗಳನ್ನು ಮಾಡುತ್ತಾರೆ. ಅವು ಯಾವವೆಂದರೆಃ— (೧) ಆಚಾರಲಿಂಗ (೨) ಗುರುಲಿಂಗ (೩) ಶಿವಲಿಂಗ (೪) ಜಂಗಮಲಿಂಗ (೫) ಪ್ರಸಾದಲಿಂಗ (೬) ಮಹಾಲಿಂಗ. ಮನುಷ್ಯನಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿರುವವಷ್ಟೇ. ಅವುಗಳಿಗನುಸರಿಸಿಯೂ ಲಿಂಗದಲ್ಲಿ ಮೂರು ವಿಭಾಗಗಳನ್ನು ಮಾಡುತ್ತಾರೆ. ಆಗ ಅದಕ್ಕೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂದು ಅನುಕ್ರಮವಾಗಿ ಹೆಸರುಗಳಿವೆ. ಇಷ್ಟಲಿಂಗಕ್ಕೆ ಕ್ರಿಯಾಲಿಂಗವೆಂಬ ಹೆಸರೂ ಇದೆ. ಈ ಇಷ್ಟಲಿಂಗವು ಕ್ರಿಯೆಗೆ ಸಂಬಂಧಪಡುತ್ತಿದೆ. ಪ್ರಾಣಲಿಂಗವು ಮನಸ್ಸಿಗೆ ಸಂಬಂಧಪಡುತ್ತಿದೆ. ಭಾವಲಿಂಗವು ಜ್ಞಾನಕ್ಕೆ ಸಂಬಂಧಪಡುತ್ತಿದೆ. ಈ ಕಡೆಯ ಲಿಂಗಕ್ಕೆ ಜ್ಞಾನಲಿಂಗ, ಸುಜ್ಞಾನಲಿಂಗ ಅಥವಾ ತೃಪ್ತಿಲಿಂಗ ಎಂಬ ಹೆಸರುಗಳೂ ಇವೆ. ವೀರಶೈವನು ತನ್ನಲ್ಲಿಯೇ ಈ ಲಿಂಗವನ್ನರಿಯತಕ್ಕದ್ದು. ಆದ್ದರಿಂದ ಬಾಹ್ಯಲಿಂಗಗಳು ಅಂದರೆ ಸ್ಥಾವರ ಲಿಂಗಗಳು ಅವನಿಗೆ ಅರ್ಹವಾದುವಲ್ಲ. ಲಿಂಗದ ವಿವೇಚನೆಯಲ್ಲಿ ಯಾವತರದ ಅಶ್ಲೀಲ ವಿಚಾರಗಳನ್ನು ವಚನಕಾ

ರರು ಪ್ರಕಟಮಾಡುವದಿಲ್ಲ. ಅಷ್ಟಾವರಣಗಳಲ್ಲಿ ಲಿಂಗವೆಂಬ ಹೆಸರು ಬರುವದುಂಟು. ಅದು ಪರಮಾತ್ಮನ ಗುರುತು (*Symbol*) ಮಾತ್ರ ಇರುತ್ತಿದೆ. ಅದಕ್ಕೆ ಇಷ್ಟಲಿಂಗವೆಂಬ ಹೆಸರು. ಆದರೆ ಅದರ ಅಲ್ಲಿಯ ವಿವೇಚನೆಯು ಕೇವಲ ಆಚಾರಕ್ಕೆ ಸಂಬಂಧಿಸುತ್ತದೆ. ಆದರೆ ೬ ಸ್ಥಲಗಳು ಮತ್ತು ೩ಸ್ಥಲಗಳು ಯಾವಾಗಲೂ ತಾತ್ವಿಕ ವಿವೇಚನೆಗೆ ಸಂಬಂಧಪಟ್ಟವು. ಆದ್ದರಿಂದ ಅಲ್ಲಿ ಲಿಂಗದ ವಿಚಾರಗಳನ್ನು ಷಟ್‌ಸ್ಥಲದ ತತ್ವಗಳಗನುಸರಿಸಿ ವಚನಕಾರರು ತಾತ್ವಿಕವಾಗಿ ನಿರೂಪಿಸುವದುಂಟು.

(೧೭) ಸ್ಥಲಗಳು:— ಸ್ಥಲ ಇದು ವೀರಶೈವ ಗ್ರಂಥಗಳಲ್ಲಿ ಕಂಡು ಬರುವ ವಿಶಿಷ್ಟ ಶಬ್ದವಾಗಿದೆ. ವೀರಶೈವರು ತಮ್ಮ ವಿಷಯ ವಿವೇಚನೆಯನ್ನು ಕೆಲವೊಂದು ಸ್ಥಲವನ್ನನುಸರಿಸಿ ಮಾಡುವದುಂಟು. ಅವರು ಮನುಷ್ಯನಲ್ಲಿರುವ ಗುಣಗಳು, ಇಂದ್ರಿಯಗಳು, ಶಕ್ತಿಗಳು ಇವೇ ಮೊದಲಾದವುಗಳಲ್ಲಿ ಅನೇಕ ವಿಭಾಗಗಳನ್ನು ಮಾಡುತ್ತಾರೆ. ಈ ಪ್ರಕಾರ ಮಾಡಿ ಅವರು ಅವುಗಳನ್ನು ಕೆಲವೊಂದು ಸ್ಥಳಕ್ಕೆ ಸಂಬಂಧಿಸುತ್ತಾರೆ. ಹೀಗೆ ಸಂಬಂಧಿಸುವಲ್ಲಿ ಅವರು ಅವುಗಳಲ್ಲಿರುವ ಕೆಲವು ವಿಶಿಷ್ಟ ಗುಣಗಳನ್ನು ಕಂಡು ಹಿಡಿಯಬೇಕಾಗುತ್ತದೆ. ಹೀಗೆ ಕಂಡುಹಿಡಿದು ಅವುಗಳ ವಿವೇಚನೆ ಮಾಡುವಲ್ಲಿ ಅವು ಇಂಥದೊಂದು ಸ್ಥಳಕ್ಕೆ ಸಂಬಂಧಿಸಿರುತ್ತವೆಂದು ಹೇಳುತ್ತಾರೆ. ಈ ರೀತಿ ಅವರು ವಿವೇಚನೆ ಮಾಡುವದರಿಂದ ವೀರಶೈವ ಧರ್ಮಕ್ಕೆ ಒಂದು ಸಿದ್ಧಾಂತದ ಸ್ವರೂಪ ಪ್ರಾಪ್ತವಾಗಿದೆ. ಉದಾ:- ಅವರು ಮೊದಲು ಅಂಗ ಲಿಂಗ ಸ್ಥಲಗಳೆಂದು ಎರಡು ವಿಭಾಗಗಳು, ಆಮೇಲೆ ಅವುಗಳಲ್ಲಿ ಮೂರು ವಿಭಾಗಳು, ಆಮೇಲೆ ಅವುಗಳಲ್ಲಿ ಆರು, ಹದಿನೆಂಟು, ಮೂವತ್ತಾರು, ಇನ್ನೂರು ಹದಿನಾರು ಹೀಗೆ ಅನೇಕ ವಿಭಾಗಗಳನ್ನು ಮಾಡುವದುಂಟು. ಈ ವಿಭಾಗಗಳೆಲ್ಲ ಅವರು ಸ್ಥಲಗಳೆಂದು ಹೇಳುತ್ತಾರೆ. ಈ ಆಯಾ ಸ್ಥಲಗಳಿಗೆಲ್ಲ ವಿಶಿಷ್ಟ ಹೆಸರುಗಳಿವೆ. ಆದರೆ ಒಂದು ವಿಭಾಗದೊಳಗಿನ ಗುಣಗಳು ಎರಡನೆಯ ವಿಭಾಗಗಳಲ್ಲಿಯೂ ಆಗಿಂದಾಗ್ಗೆ ಕಂಡುಬರುವದುಂಟು. ಆದರೂ ಒಂದು ವಿಭಾಗದಲ್ಲಿಯ ವಿಶಿಷ್ಟ ಗುಣದ ಮೇಲೆ ಅವರು ಹೀಗೆ ತಮ್ಮ ಸ್ಥಲಗಳನ್ನು ವಿಂಗಡಿಸುವದುಂಟು. ಉದಾ:— ಮನುಷ್ಯನಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿವೆ. ಅವುಗಳಿಗನುಸರಿಸಿ ಮೊದಲು ೩ ಸ್ಥಲ ಆಮೇಲೆ ೬ ಸ್ಥಲಗಳು ನಿರ್ಮಿಸಲ್ಪಟ್ಟಿವೆ. ಈ ಆರು ಸ್ಥಲಗಳಲ್ಲಿ ಮೊದಲನೆಯ ಭಕ್ತ

ಮಹೇಶ್ವರ ಸ್ಥಲಗಳು ಸ್ಥೂಲ ಶರೀರಕ್ಕೆ ಸಂಬಂಧಿಸಿವೆ. ಇವೆರಡರಲ್ಲಿಯ ಮಹೇಶ್ವರ ಸ್ಥಲದಲ್ಲಿ ಕೆಲವಂಶದಿಂದ ಅದರ ಹಿಂದಿನ ಮತ್ತು ಮುಂದಿನ ಸ್ಥಲದ ಗುಣಗಳೂ ಬಂದಿರಬಹುದು. ಯಾಕಂದರೆ ಅದು ಭಕ್ತಸ್ಥಲ ಮತ್ತು ಪ್ರಸಾದಿಸ್ಥಲ ಇವೆರಡಕ್ಕೆ ಮಧ್ಯವರ್ತಿಯಾಗಿದೆ. ಆದ್ದರಿಂದ ಈ ಸ್ಥಲಗಳ ವಿವೇಚನೆಯಲ್ಲಿ ಸ್ಪಷ್ಟ ಭೇದಗಳು ತೋರುವದಿಲ್ಲ. ಆದರೂ ಆಯಾ ಸ್ಥಲಗಳಲ್ಲಿ ಅವವುಗಳ ಮುಖ್ಯ ಗುಣಗಳನ್ನು ಕಂಡುಹಿಡಿಯು ತಕ್ಕದ್ದು. ಇದರಿಂದ ವೀರಶೈವ ವಚನಕಾರರ ವಾಙ್ಮಯದಲ್ಲಿ ಅನೇಕ ಸ್ಥಲಗಳು ಉತ್ಪನ್ನವಾಗಿವೆ. ಅವುಗಳ ಪರಸ್ಪರ ಸಂಬಂಧವನ್ನು ವಿಷಯ ವಿವರಣೆಯ ಪ್ರಕಾರ ಕಂಡುಹಿಡಿಯಬೇಕಾಗುತ್ತದೆ.

(೧೪) ಶಿವ, ಪರವಸ್ತು, ನಿಜ, ತತ್ವ, ನಿಜತತ್ವ, ಶಿವತತ್ವ, ಪರತತ್ವ, ಪರಶಿವ, ತತ್ವಸ್ವರೂಪ, ನಿರಾಲಂಬ, ಅನಿರ್ವಾಚ್ಯ, ನಿರಾಳ, ಸುರಾಳ, ಪರಬ್ರಹ್ಮ ವಸ್ತು, ಪರಮಾತ್ಮ:— ಈ ಶಬ್ದಗಳೆಲ್ಲವೂ ಪರ ಮಾತ್ಮ ಅಥವಾ ದೇವರ ದ್ಯೋತಕವಾಗಿವೆ. ಪರಮಾತ್ಮನು ಯಾವ ಸ್ವರೂಪುಳ್ಳವನಾಗಿದ್ದಾನೆಂಬುದನ್ನು ಅವು ವ್ಯಕ್ತಮಾಡುತ್ತವೆ. ಹಿಂದೂ ಧರ್ಮದ ಮೇರೆಗೆ ಪರಮಾತ್ಮನು ನಿರಾಕಾರನಾಗಿದ್ದಾನೆ. ಆದರೆ ಹಿಂದು ಗಡೆ ಅವನಿಗೆ ಅನೇಕ ತರದ ರೂಪಗಳು ಕಲ್ಪಿಸಲ್ಪಟ್ಟವು. ಆದರೆ ಇವು ಗಳನ್ನು ಶಿವಶರಣರು ಅಲ್ಲಗಳೆದಿದ್ದಾರೆ. ಪರಮಾತ್ಮನು ಆಕಾರ ರಹಿ ತನಾಗಿದ್ದಾನೆಂಬುದೇ ಅವರ ಅಭಿಪ್ರಾಯವು. ಶಿವ ಎಂಬ ಶಬ್ದದಿಂದ ಪರ ಮಾತ್ಮನನ್ನು ಅವರು ಸಾಮಾನ್ಯವಾಗಿ ಕರೆಯುವದುಂಟು. ಆದರೆ ಅವನು ಜಗತ್ತಿನಲ್ಲಿ ಕಾಣುವಂಥ ಒಂದು ಬಗೆಯ ವಸ್ತುವಲ್ಲವೆಂಬುದನ್ನು ತಿಳುಹಲಿಕ್ಕೆ ಅವನು ಪರವಸ್ತು ಎಂದು ಸಂಬೋಧಿಸಿದ್ದಾರೆ. ಅವನು ಮಾಯಾರಹಿತನೆಂದು ಹೇಳಲು, ನಿಜ ಎಂಬ ಶಬ್ದವನ್ನು ಅವರು ಉಪ ಯೋಗಿಸುತ್ತಾರೆ. ಅವನು ಸತ್ಯನು, ಸುಳ್ಳಲ್ಲ ಎಂಬುದನ್ನು ಸಹ ತೋರಿಸಲು ಈ ನಿಜ ಎಂಬ ಶಬ್ದವನ್ನೇ ಉಪಯೋಗಿಸುತ್ತಾರೆ. ಅವನನ್ನು ತತ್ವ ಎಂತಲೂ ಕರೆದಿದ್ದಾರೆ. ಜಗತ್ತಿನ ವ್ಯಾಪಾರಗಳಲ್ಲೆಲ್ಲ ಯಾವದು ಅಂತರ್ಭೂತವಾಗಿ ಅವುಗಳನ್ನು ಪ್ರೇರೇಪಿಸುತ್ತದೋ ಅದೇ ತತ್ವ ವೆಂದು ಹೇಳಬಹುದು. ಇಂಥ ಈ ತತ್ವವನ್ನು ಅನುಸರಿಸಿಯೇ ಈ ಜಗತ್ತು ನಡೆದಿರುತ್ತದೆ. ಈ ತತ್ವವೇ ಶಿವನು ಅಥವಾ ದೇವರು ಎಂಬ ಭಾವವು ವಚನಕಾರರ ವಚನಗಳಲ್ಲಿ ದೃಗ್ಗೋಚರವಾಗುತ್ತಿದೆ. ಅದ

ರಿಂದ ದೇವರನ್ನು ನಿಜತತ್ವ, ಶಿವತತ್ವ ಎಂತಲೂ ಕರೆದಿದ್ದಾರೆ. ಹಾಗೆಯೇ ಪರತತ್ವನೆಂತಲೂ ಕರೆದಿದ್ದಾರೆ. ಅಂದರೆ ದೃಶ್ಯ ಪದಾರ್ಥ ಗಳಿಗೆ ಸಂಬಂಧಿಸಿದ ತತ್ವವು ಯಾವದಿದೆಯೋ ಅದು ಸ್ಥೂಲತತ್ವ ವೆಂದು ಎನಿಸಿಕೊಳ್ಳುವದರಿಂದ, ಇಂಥ ಸ್ಥೂಲ ತತ್ವಕ್ಕೆ ಯಾವದು ಮೇಲಿ ನದೋ ಯಾವದು ಅತ್ಯಂತ ಸೂಕ್ಷ್ಮವಾದುದೋ ಅದೇ ಶಿವನೆಂದು ಅವರು ಹೇಳುತ್ತಾರೆ. ಈ ಭಾವದಿಂದ ಅವನು ಪರತತ್ವನೆಂತಲೂ ಹೇಳಿದ್ದಾರೆ. ಸಾಮಾನ್ಯ ಜನರಲ್ಲಿ ಶಿವನೆಂದರೆ ಪಂಚಮುಖನು, ತ್ರಿನೇತ್ರನು, ವೃಷ ಭವಾಹನನು, ಸರ್ಪಭೂಷನು, ಇವೇ ಮೊದಲಾದ ಅಭಿಪ್ರಾಯಗಳು ಇರುತ್ತವೆ. ಆದರೆ ಇವೆಲ್ಲ ಪೌರಾಣಿಕ ಕಲ್ಪನೆಗಳು. ಈ ವಿಚಾರಗಳನ್ನು ಶಿವಶರಣರು ಒಪ್ಪಿಕೊಳ್ಳುವದಿಲ್ಲ. ಇದನ್ನು ತಿಳುಹಲು, ಪರಶಿವನೆಂ ತಲೂ ಅವರು ಪರಮಾತ್ಮನನ್ನು ಕರೆದಿದ್ದಾರೆ. ಅಂದರೆ ಇಂಥ ಶಿವನಿಗಿಂ ತಲೂ ಮೇಲಿನವನು ಅಥವಾ ಸೂಕ್ಷ್ಮನೆಂದು ಅವರ ಅಭಿಪ್ರಾಯವು. ಅವನು ನಿರಾಲಂಬನೆಂತಲೂ ಹೇಳಿದ್ದಾರೆ. ಎಂದರೆ ಅವನಿಗೆ ಯಾವ ಆಧಾರಗ ಳಿಲ್ಲ, ಆದರೆ ಅವನೇ ಎಲ್ಲರಿಗೂ ಆಧಾರನು ಎಂಬರ್ಥವಿದೆ. ಅವನು ನಿರಾ ಳನೆಂತಲೂ ಹೇಳಿದ್ದಾರೆ. ಅಂದರೆ ಸ್ವಚ್ಛವಾದ, ತಿಳಿಯಾದ ವಸ್ತುವು ಎಂಬ ಅರ್ಥವು. ಬ್ರಹ್ಮ, ಪರಬ್ರಹ್ಮ, ಪರಬ್ರಹ್ಮವಸ್ತು ಈ ಶಬ್ದಗಳು ಉಪನಿಷತ್ತುಗಳು ಮತ್ತು ಬೇರೆ ವೇದಾಂತ ಗ್ರಂಥಗಳಲ್ಲಿವೆ. ಅವು ಶಿವಶರಣರ ವಾಕ್ಯಗಳಲ್ಲಿಯೂ ಕೂಡ ಬರುತ್ತವೆ. ಆದರೆ ಅವರು ಅವುಗಳನ್ನು ಅಷ್ಟು ವಿಪುಲವಾಗಿ ಉಪಯೋಗಿಸುವದಿಲ್ಲ. ಆದರೆ ಈ ಶಬ್ದಗಳು ಅವರ ದೃಷ್ಟಿಯಿಂದ ಸಮಾನಾರ್ಥವುಳ್ಳವಾಗಿವೆ. ವಚನಕಾ ರರಲ್ಲಿ ಶಿವ, ಪರಶಿವ, ದೇವರು ಎಂಬುದು ಶೂನ್ಯ ಸ್ಥಿತಿಗಳ ತರುವಾಯ ಪ್ರಕಟವಾಗುವದೆಂಬ ಅಭಿಪ್ರಾಯವಿದೆ. ಶೂನ್ಯ ಸ್ಥಿತಿಯಲ್ಲಿ ನಾಲ್ಕು ಬಗೆಗಳಿವೆ (ಮುಂದೆ ೨೦ನೇ ನಂಬರು ನೋಡಿರಿ). ಇವುಗಳ ತರುವಾಯ ಈ ಪರಶಿವನು ಪ್ರಕಟನಾಗುತ್ತಾನೆ. ಆಗ ಅವನು ಶರಣ, ಜಂಗಮ ಎಂಬ ಶಬ್ದಗಳಿಂದಲೂ ಅನೇಕ ವಚನಗಳಲ್ಲಿ ಸಂಬೋಧಿಸಲ್ಪಟ್ಟಿದ್ದುಂಟು. ಮೊದಲು ಶರಣನು ಉದಯನಾಗುವನೆಂದು ವಚನಕಾರರು ಹೇಳು ತ್ತಾರೆ. ಒಮ್ಮೊಮ್ಮೆ ಅವರು ಜಂಗಮನ ವರ್ಣನೆಮಾಡುವಲ್ಲಿಯೂಜಂಗ ಮನು ಜಗದ್ಭರಿತನಾಗಿರುತ್ತಾನೆಂದು ಅನೇಕ ವಿಶೇಷಣಗಳಿಂದ ಅತ್ಯಂತ ಭಾವನಾಮಯವಾಗಿ ಹೇಳುವದೂ ಉಂಟು. ಆಗ ಪರಶಿವ ಎಂಬ ಅಭಿ

ಪ್ರಾಯದಿಂದ ಆ ಶಬ್ದಗಳನ್ನು ಅವರು ಉಪಯೋಗಿಸುತ್ತಾರೆ. ಸಾಂಖ್ಯ ಶಾಸ್ತ್ರದಲ್ಲಿ, ಪುರುಷ ಪ್ರಕೃತಿ, ಎಂಬ ಶಬ್ದಗಳಿವೆ. ಈ ಶಬ್ದಗಳನ್ನು ಸಹ ವಚನಕಾರರೂ ಉಪಯೋಗಿಸುವದುಂಟು. ಆದರೆ ಈ ಶಬ್ದಗಳು ಅಂದರೆ (೧) ಪುರುಷ ಮತ್ತು ಪರಶಿವ, (೨) ಪ್ರಕೃತಿ ಮತ್ತು ಅಂಗ ಇವೆರಡೂ ಗುಂಪುಗಳು ಸಮಾನಾರ್ಥವುಳ್ಳವು. ಆದರೆ ಪ್ರಕೃತಿ ಪುರುಷ ಈ ಶಬ್ದಗಳು ವಚನಗಳಲ್ಲಿ ಆಗಿಂದಾಗ್ಗೆ ಬರುವದಿಲ್ಲ. ಕ್ವಚಿತ್ತಾಗಿ ಬರುತ್ತವೆ. ಬಸವನು ತನ್ನ ಕೆಲವು ವಚನಗಳಲ್ಲಿ ಪರಮಾತ್ಮನನ್ನು ಪುರುಷ ಎಂಬ ಹೆಸರಿನಿಂದಲೂ ಕರೆದಿದ್ದಾನೆ. ಉದಾಹರಣಾರ್ಥವಾಗಿ,

ಸಹಸ್ರ ಶೀರ್ಷನಾದಿ ಪುರುಷನು, ತ್ರಿಪಾದೂರ್ಧ್ವ ಪುರುಷನೊಬ್ಬ ಪುರುಷನು, ಉದಮ್ಮುಖನೊಬ್ಬ ಪುರುಷನು, ಉದಯ ಪುರುಷನೊಬ್ಬ ಪುರುಷನು, ವಿರಾಟ್ ಪುರುಷನೊಬ್ಬ ಪುರುಷನು " ಇತ್ಯಾದಿ.

(೧೯) ಚಿತ್, ಮೂಲಚಿತ್ತು, ಚಿದ್ಬ್ರಹ್ಮಾಂಡ, ಚಿದ್ರೂಪ, ಚಿತ್ ಸ್ವರೂಪು, ಚಿನ್ಮಯ, ಜ್ಞಾನಚಿತ್ತು:— ಶೂನ್ಯ ಸ್ಥಿತಿಗಳಾದ ಬಳಿಕ ಚಿತ್ತು ಉದ್ಭವಿಸುತ್ತದೆ. ಆಗ ಅದು ಮೂಲಚಿತ್ತುವೆಂತಲೂ ಹೇಳಲ್ಪಡುತ್ತದೆ. ಜ್ಞಾನ ಚಿತ್ತುವೆಂತಲೂ ಅದಕ್ಕೆ ಬೇರೆ ಹೆಸರು ಇದೆ. ಒಮ್ಮೊಮ್ಮೆ ಬರೀ ಚಿತ್ತುವೆಂತಲೂ ಅದಕ್ಕೆ ಅನ್ನುವದುಂಟು. ಆದರೆ ಈ ಮೂಲಚಿತ್ತುವಿನಕಿಂತಲೂ ಸ್ಥೂಲತರವಾದುದು ಈ ಚಿತ್ತು. ಈ ಎರಡೂ ಶಬ್ದಗಳು ವಚನಗಳಲ್ಲಿರುವದು ತೋರಿಬರುತ್ತಿದೆ. ಆದ್ದರಿಂದ ಮೂಲಚಿತ್ತು ಯಾವುದು, ಚಿತ್ತು ಯಾವುದು ಎಂಬುದನ್ನು ಸಂದರ್ಭಾನುಸಾರವಾಗಿ ಕಂಡು ಹಿಡಿಯಬೇಕು. ಪರಮಾತ್ಮನಲ್ಲಿ ಲೀಲೆಯುಂಟಾಗಲು ಈ ಮೂಲ ಚಿತ್ತು ಉಗಮಿಸುತ್ತದೆ. ಈ ಲೀಲೆಯೆಂದರೆ ಜಗತ್ತು ಹುಟ್ಟಿಸಬೇಕೆಂಬ ಒಂದು ಬಗೆಯ ಅಪೇಕ್ಷೆ ಅಥವಾ ನೆನಹು ಇದೆ ಎಂದು ಹೇಳಬಹುದು. ಈ ಮೂಲಚಿತ್ತು ಎಲ್ಲ ಪದಾರ್ಥಗಳಲ್ಲಿ ಅವ್ಯಕ್ತವಾಗಿ ವಾಸಿಸುತ್ತದೆ. ಆ ಮೇಲೆ ಅದರೊಳಗಿಂದ ನಾದಬಿಂದುಕಲೆಗಳು ಪ್ರಕಟವಾಗುತ್ತವೆ. ಅವಾದರೂ ಆಗ ಚಿತ್‌ಸ್ವರೂಪು ಅಂದರೆ ಅತ್ಯಂತ ಸೂಕ್ಷ್ಮತರ ಸ್ಥಿತಿಯಲ್ಲಿರುತ್ತವೆ. ಅವುಗಳಿಗೆ ಚಿನ್ನಾದ, ಚಿದ್ಬಿಂದು, ಚಿತ್ಕಲೆಗಳೆಂಬ ಹೆಸರುಗಳು ಇವೆ. ಅವುಗಳೊಡನೆ ಮೂಲ ಚಿತ್ತು ಬೆರೆಯಲು ಓಂಕಾರರೂಪವಾದ ಪ್ರಣಮವು ಉತ್ಪನ್ನವಾಗುತ್ತದೆ. ಅದೇ ಮಹಾಲಿಂಗವೆನಿಸಿಕೊಳ್ಳುತ್ತಿದೆ. ಈ ಮೂಲ ಚಿತ್ತುವಿನ ಮುಂದಿನ ಸ್ವರೂಪಿಗೆ ಬರೀ ಚಿತ್ತು ಎಂಬ ಹೆಸ

ರಿದೆ. ಅದು ಪುನಃ ನಾದ ಬಿಂದು ಕಲೆಗಳೊಡನೆ ಕೂಡಲು ಈ ದೃಶ್ಯ ಜಗತ್ತು ತಲೆದೋರುತ್ತದೆ. ಹೀಗೆ ತಲೆದೋರಿದ ಜಗತ್ತಿನಲ್ಲಿ ಶಕ್ತಿಯು ವ್ಯವಹರಿಸ ಹತ್ತುತ್ತಿದೆ. ಈ ಶಕ್ತಿಯಲ್ಲಿ ಅನೇಕ ಪ್ರಕಾರಗಳಿರುತ್ತವೆ. ಹೀಗೆ ಇವೆಲ್ಲವೂ ಮೊದಲು ಮೂಲಚಿತ್ತುವಿನಿಂದಲೇ ಹೊರಟಿರುತ್ತವೆ. ಈ ಮೂಲ ಚಿತ್ತು ಓಂಕಾರದ ಮೂಲಕ ಬ್ರಹ್ಮಾಂಡದಲ್ಲೆಲ್ಲ ವ್ಯಾಪಿಸಿರುತ್ತದೆ. ಅದನ್ನು ಈ ಸ್ಥಿತಿ ಯಲ್ಲಿ (*ether*) ಎಂದು ಆಧುನಿಕವಿಜ್ಞಾನ ಶಾಸ್ತ್ರದ ಶಬ್ದದಿಂದ ಕರೆಯಬ ಹುದು. ಚಿದ್ಬ್ರಹ್ಮಾಂಡ, ಚಿದ್ರೂಪು, ಚಿತ್‌ಸ್ವರೂಪು, ಚೈತನ್ಯಸ್ವರೂಪು ಎಂದು ಹೇಳಿಸಿಕೊಳ್ಳುವುಗಳೆಲ್ಲವೂ ಈ ಮೂಲಚಿತ್ತುವಿನಿಂದ ಕೂಡಿ ಕೊಂಡಿವೆ. ಈ ಮೂಲಚಿತ್ತು ಅವುಗಳಲ್ಲಿ ಬೆರೆದು ಪ್ರಕಾಶಿಸದೆ ಇದ್ದಲ್ಲಿ ಅವು ತೋರಲಾರವು. ಆದುದರಿಂದ ಮೂಲಚಿತ್ತು ಪರಮಾತ್ಮನ ಪ್ರಕಾಶ ವೆಂದು ಆಗಿಂದಾಗ್ಗೆ ವಚನಗಳಲ್ಲಿ ವರ್ಣಿಸಲ್ಪಡುವದುಂಟು. ಅದು ಬೆಳಗು ಎಂತಲೂ ಹೇಳುತ್ತಾರೆ. ಆಗ ಅದನ್ನು ಚಿತ್‌ಪ್ರಕಾಶವೆಂತಲೂ ಕರೆಯು ತ್ತಾರೆ. ಚಿದಾನಂದವೆಂತಲೂ ಹೇಳುತ್ತಾರೆ. ನೆನಹು ಎಂತಲೂ ಒಮ್ಮೊಮ್ಮೆ ಕರೆಯುವದುಂಟು. ಅಂದರೆ ಈ ಮೂಲಚಿತ್ತುವು ಅತ್ಯಂತ ಆನಂದಮ ಯವಾದದ್ದು, ಅತ್ಯಂತ ಪ್ರಕಾಶಮಾನವಾದದ್ದು, ಅತ್ಯಂತ ಜ್ಞಾನಮಯ ವಾದದ್ದು ಎಂದು ಅದರ ಅತ್ಯುತ್ಕೃಷ್ಟತೆಯನ್ನು ವಚನಕಾರರು ವರ್ಣಿಸು ತ್ತಾರೆ. ಆದರೆ ಇಂಥ ಶಬ್ದಗಳನ್ನು ಉಪಯೋಗಿಸುವಲ್ಲಿ ವಚನಕಾರರು ಸೃಷ್ಟಿಯಲ್ಲಿ ಕಾಣುವಂಥ ಈ ಗುಣಗಳೇ ಮೂಲಚಿತ್ತುವೆಂದು ಭಾವಿ ಸಬಾರದು. ಸಾಮಾನ್ಯ ಜನರಿಗೆ ತಿಳಿಯುವ ಉದ್ದೇಶದಿಂದ ಆನಂದ ಪ್ರಕಾಶ ಇವೇ ಮೊದಲಾದ ಶಬ್ದಗಳನ್ನು ಅವರು ಉಪಯೋಗಿಸುತ್ತಾರೆ. ಆದರೆ ನಿಜವಾಗಿ ಮೂಲಚಿತ್ತು ಆಕಾರ ರಹಿತವಾದದ್ದು ನಿಷ್ಕ್ರಿಯೆಯು ಳ್ಳದ್ದು ಅಗವ್ಯವಾದದ್ದು ಇದೆ.

(೨೦) (ಅ) ನಿಶ್ಶೂನ್ಯ; (ಬ) ಸರ್ವಶೂನ್ಯ, ಮಹಾಶೂನ್ಯ, ಸರ್ವ ಶೂನ್ಯ, ನಿರಾಲಂಬ; (ಕ) ಶೂನ್ಯಲಿಂಗ (ಡ) ನಿಃಕಲಲಿಂಗಃ— ವಚನ ಕಾರರು ಶೂನ್ಯದಲ್ಲಿ ಕೆಲವು ವಿಭಾಗಗಳನ್ನು ಮಾಡುತ್ತಾರೆ. ಅವೆಲ್ಲವೂ ಏನೂ ಇಲ್ಲದಂಥ ಸ್ಥಿತಿಗಳು. ಅವುಗಳಲ್ಲಿ ನಾಲ್ಕು ಮುಖ್ಯವಾದವುಗಳು. ಸರ್ವಶೂನ್ಯ, ಮಹಾಶೂನ್ಯ, ಸರ್ವಶೂನ್ಯನಿರಾಲಂಬ ಇವೆಲ್ಲಗಳೂ ಒಂದೇ ಅರ್ಥವನ್ನು ಸೂಚಿಸುತ್ತವೆ. ಇದರ ತರುವಾಯ ಶೂನ್ಯಲಿಂಗವು ಉದ್ಭವಿಸುತ್ತದೆ. ಅದರ ತರುವಾಯ ನಿಃಕಲಲಿಂಗವು ಉದ್ಭವಿಸುತ್ತದೆ. ಈ ಕಡೆಯ ಎರಡೂ ಸ್ಥಿತಿಗಳೂ ಕೂಡ ಶೂನ್ಯವಿರುತ್ತವೆ. ಆದರೆ ನಿಃಕಲ

ಲಿಂಗದಕಿಂತಲೂ ಹೆಚ್ಚು ಶೂನ್ಯವಾದದ್ದು ಶೂನ್ಯಲಿಂಗವು. ಈ ಶೂನ್ಯ ಲಿಂಗಕ್ಕಿಂತಲೂ ಹೆಚ್ಚು ಶೂನ್ಯವಾದುದು ಸರ್ವಶೂನ್ಯನಿರಾಲಂಬವು ಎಂದು ಭಾವಿಸಬೇಕು. ಇವೆಲ್ಲವೂ ಮನುಷ್ಯನ ಇಂದ್ರಿಯಗಳಿಗೆ ಮತ್ತು ವಿಚಾರಕ್ಕೆ ನಿಲುಕದಂಥವು ಇರುತ್ತವೆ. ವಚನಕಾರರು ಈ ಮೂರೂ ಸ್ಥಿತಿಗಳನ್ನು ದಾಟಿದರೂ ಮತ್ತೂ ಇಲ್ಲ ಎಂಬುದನ್ನು ಸೂಚಿಸುವದಕ್ಕೋ ಸ್ಕರ ನಿಶ್ಶೂನ್ಯವೆಂತಲೂ ನಾಲ್ಕನೆಯದಾಗಿ ಒಮ್ಮೊಮ್ಮೆ ಹೇಳುವದುಂಟು. ವಚನಕಾರರು ಯಾವದೂ ಇಲ್ಲ, ಇಲ್ಲ, ಇಲ್ಲ, ಎಂದು ಹೇಳುತ್ತ ಈ ಎಲ್ಲ ಸ್ಥಿತಿಗಳನ್ನು ವರ್ಣಿಸುತ್ತ ಹೋಗುತ್ತಾರೆ. ಅವು ಅನಿರ್ವಾಚ್ಯ ಅಂದರೆ ಹೇಳಲು ಬಾರದಂಥವು ಎಂತಲೂ, ನಿರಾಲಂಬ ಎಂದರೆ ಆಶ್ರಯವಿಲ್ಲದೆ ಸ್ವತಂತ್ರವಾಗಿ ಇರುವಂಥವೆಂತಲೂ ಅವರು ಹೇಳುವದುಂಟು.

(೨೧) ಮೋಕ್ಷ, ಮುಕ್ತಿ, ಸಾಮರಸ್ಯ, ಐಕ್ಯ, ಲಿಂಗಾಂಗ ಸಾಮರಸ್ಯ, ಕೈವಲ್ಯ, ಅದ್ವೈತ, ಸಮರಸ, ಸಮರಸಭಾವಃ—

ಪರಮಾತ್ಮನು ಮನುಷ್ಯನಿಂದ ಬೇರೆಯಾದ ಒಂದು ವಸ್ತುವಿದ್ದಾನೆ ಎಂಬ ಕಲ್ಪನೆಯು ಜನರಲ್ಲಿರುತ್ತದೆ. ಆದ್ದರಿಂದ ಮನುಷ್ಯನ ಅಂತಿಮಧ್ಯೇಯವು ಅವನನ್ನು ಭಜಿಸಿ ಅವನಪ್ರೀತಿಯನ್ನು ಸಂಪಾದಿಸಿ ಅವನ ಸನ್ನಿಧಾನದಲ್ಲಿಇರುವದಿದೆಂದು ಭಾವಿಸಿರುತ್ತಾರೆ. ಬೇರೆ ಕೆಲವರು ಅವನಲ್ಲಿ ಬೆರೆದು ಹೋಗುವದಿರುತ್ತದೆಂದು ಭಾವಿಸಿರುತ್ತಾರೆ. ಅಂದರೆ ತಾನು ಮತ್ತು ಪರಮಾತ್ಮ ಇವೆರಡೂ ವಸ್ತುಗಳು ಬೇರೆ ಬೇರೆ ಇವೆ ಎಂದು ಅವರ ವಿಚಾರಗಳಿದ್ದಹಾಗಾಯಿತು. ಅದರೆ ವೀರಶೈವರಲ್ಲಿ ಇಂಥ ವಿಚಾರಗಳಿಲ್ಲ. ಪರಮಾತ್ಮನುಜಗತ್ತಿನಲ್ಲೆಲ್ಲ ಹರಡಿರುತ್ತಾನೆ. ಹಾಗೆಯೇ ಅವನು ತನ್ನಲ್ಲಿಯೂ ಕೂಡ ಇದ್ದಾನೆ ಎಂದು ಅವರು ತಿಳಿದಿರುತ್ತಾರೆ. ಆದರೆ ಅವನು ಇನ್ನೂ ಅವನಲ್ಲಿ ಪ್ರಕಟವಾಗಿರುವದಿಲ್ಲ. ಆದ್ದರಿಂದ ಅವನನ್ನು ಮನುಷ್ಯನು ತನ್ನಲ್ಲಿ ಪ್ರಕಟಮಾಡಿಕೊಳ್ಳಬೇಕು. ಹೀಗೆ ಪರಮಾತ್ಮನು ತನ್ನಲ್ಲಿ ಪ್ರಕಟವಾಗುವಂತೆ ಮನುಷ್ಯನ ವರ್ತನೆ ಇರಬೇಕು. ಇಂಥ ವರ್ತನೆಯಿಂದ ಮನುಷ್ಯನ ಶಕ್ತಿಗಳು ವಿಕಾಸಹೊಂದುವವು. ಅಂದರೆ ಅವುಗಳಲ್ಲಿ ಲಿಂಗದ ಕಳೆಯು ಸ್ಥಾಪನೆಹೊಂದುವದು. ಮನುಷ್ಯನ ಶುದ್ಧ ವೃತ್ತಿಗಳು ಸ್ಥಿರಗೊಂಡ ಹಾಗೆ ಲಿಂಗವೂ ಕೂಡ ಅವನ ಮನ ವಚನ ಕಾಯಗಳಲ್ಲಿ ನೆಲಿಸುವದು. ಇದೇ ಲಿಂಗದ ನಡೆ, ಲಿಂಗದ ನುಡಿ, ಎಂದು ವಚನಕಾರರು ಹೇಳುವದುಂಟು. ವೀರಶೈವರು ಕೈಲಾಸ, ವೈಕುಂಠ, ಸ್ವರ್ಗ, ಇಂಥ ಯಾವದೋ

ಒಂದು ಸ್ಥಲದಲ್ಲಿ ಪರಮಾತ್ಮನು ವಾಸಿಸುತ್ತಾನೆ ಎಂದು ಭಾವಿಸಿಲ್ಲ. ಅವರ ಪ್ರಕಾರ ಪಾರ್ವತೀ, ಷಣ್ಮುಖ, ಗಣಪತಿ, ಇವರೆಲ್ಲರೂ ಕಾಲ್ಪನಿಕ ದೇವತೆಗಳು. ಅವೆಲ್ಲವೂ ಪೌರಾಣಿಕ ಕಾಲದಲ್ಲಿ ಜನರು ಕಲ್ಪಿಸಿದವುಗಳಿವೆ. ವೀರಶೈವರು ಅವುಗಳನ್ನು ನಂಬಬಾರದು. ವೀರಶೈವರಲ್ಲಿ ಪರಮಾತ್ಮನ ವಿಷಯವಾಗಿ ಇಂಥ ಕಲ್ಪನೆಗಳಿರುವದರಿಂದ ಅವರು ದೇವಾಲಯಗಳನ್ನು ನಂಬುವದಿಲ್ಲ. ಅವರಿಗೆ ತಮ್ಮ ದೇಹವೇ ದೇವಾಲಯವು. ಈ ಅಭಿಪ್ರಾಯದ ವಚನಗಳು ಅವರಲ್ಲಿ ಹೇರಳವಾಗಿ ದೊರಕುತ್ತವೆ. ಆಕಾಶದಲ್ಲಿ ಇಂದ್ರ ಧನುಸ್ಸು ಉತ್ಪನ್ನವಾಗಿ ಅದು ಅಲ್ಲಿಯೇ ಅಡಗುವಂತೆ, ಶಿವತತ್ವದಲ್ಲಿ ಮನುಷ್ಯನು ಉಗಮಹೊಂದಿ ಅಲ್ಲಿಯೇ ಅವನು ಕಡೆಗೆ ಲಯವಾಗುತ್ತಾನೆ. ಇದೇ ಸಾಮರಸ್ಯವು ಅಥವಾ ಮೋಕ್ಷವು. ಮನುಷ್ಯನು ತನ್ನ ಈ ಧ್ಯೇಯವನ್ನು ತಾನೇ ಸಾಧಿಸಿಕೊಳ್ಳತಕ್ಕದ್ದು. ಅದು ಅವನ ಪ್ರಯತ್ನದಿಂದಲೇ ಜರಗಬೇಕು. ಹೊರಗಿನವರು ಅವನಿಗೆ ಕೇವಲ ಮಾರ್ಗದರ್ಶಕರಾಗಿದ್ದಾರೆ. ಅವನು ಹೀಗೆ ನಡೆಯುತ್ತ ಹೋದಲ್ಲಿ ಅವನ ಎಲ್ಲ ಶಕ್ತಿಗಳು ವಿಕಾಸಹೊಂದುತ್ತವೆ. ಈ ವಿಕಾಸವೇ ಲಿಂಗಪ್ರಾಪ್ತಿ ಎಂದೆನಿಸಿಕೊಳ್ಳುತ್ತಿದೆ. ಆಗ ಈ ಲಿಂಗವು ಅವನ ಚಕ್ರಗಳಲ್ಲಿ ಮತ್ತು ಅವನ ಶಕ್ತಿಗಳಲ್ಲಿ ವ್ಯವಹರಿಸಹತ್ತುತ್ತಿದೆ. ಇದರಿಂದ ವೀರಶೈವರಲ್ಲಿ ಸಮರಸಾಚರಣೆಯು ಇದೆ. ಅವರಲ್ಲಿ ಭಿನ್ನಾಚಾರವಿಲ್ಲ. ಎಂದರೆ ತನ್ನಲ್ಲಿ ಲಿಂಗವಿದೆ, ಎಂಬ ಭಾವನೆಯಿಂದಲೇ ಮನುಷ್ಯನು ತನ್ನ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಬೇಕು. ಅಂದರೆ ಅವನಲ್ಲಿ ಅದ್ವೈತಾಚಾರ ಉಂಟು. ಹೀಗೆ ಮನುಷ್ಯನು ಮೆಲ್ಲ ಮೆಲ್ಲನೆ ಏರುತ್ತ ಮೋಕ್ಷವನ್ನು ಹೊಂದಬೇಕು. ಇದೇ ಮುಕ್ತಿಯು, ಸಾಮರಸ್ಯವು, ಐಕ್ಯತೆಯು, ಕೈವಲ್ಯವು, ಲಿಂಗಾಂಗ ಸಾಮರಸ್ಯವು, ಸಮರಸವು, ಸಮರಸಭಾವವು. ಇವೆಲ್ಲವೂ ಪರ್ಯಾಯ ಶಬ್ದಗಳಾಗಿವೆ.

(೨೨) ಮಹಾಲಿಂಗ, ಪರಂಜ್ಯೋತಿರ್ಲಿಂಗ, ಜ್ಯೋತಿರ್ಲಿಂಗಃ— ಶೂನ್ಯ ಸ್ಥಿತಿಗಳ ತರುವಾಯ ಮಹಾಲಿಂಗವು ಉದ್ಭವಿಸುತ್ತದೆ. ಇದು ಓಂಕಾರವೆಂಬ ಪ್ರಣವ ಸ್ವರೂಪವು. ತೇಜೋಮೂರ್ತಿಯಾಗಿದೆ. ಅದು ಜಗತ್ತಿನಲ್ಲೆಲ್ಲ ತುಂಬಿಕೊಂಡಿದೆ. ಅಣುವಿಗೆ ಅಣುವಾಗಿದೆ. ಮಹತ್ತಿಗೆ ಮಹತ್ತಾಗಿದೆ. ಸಂಪೂರ್ಣ ಚೈತನ್ಯಮಯವಾಗಿದೆ. ಸರ್ವವ್ಯಾಪಕವಾಗಿದೆ. ಅಖಂಡವಾಗಿದೆ. ಇದು ಶೂನ್ಯಸ್ಥಿತಿ ಮತ್ತು ಜಗತ್ತು ಪ್ರಕಟವಾದ

# ವಚನಶಾಸ್ತ್ರಸಾರ ಗ್ರಂಥಗಳು.

( ರಾ। ಸಾ। **ಪಿ. ಜಿ. ಹಳಕಟ್ಟಿ** ಇವರಿಂದ ವಿರಚಿತವಾದವುಗಳು. )

(೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ — ೨—೮—[illegible]

(೨) ,, ,, ಉತ್ತರಾರ್ಧ — ೧—೧೨—[illegible]

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

(೩) ವಚನಶಾಸ್ತ್ರಸಾರ ಭಾಗ ೨ — ೪—೮—[illegible]

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

(೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ — ೨—೪—[illegible]

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಅಷ್ಟಾವರಣಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರು, ಲಿಂಗ, ಜಂಗಮ ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯು ೧೧ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ತೆಗೆದುಕೊಂಡಲ್ಲಿ ಇವುಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ರೂಪಾಯಿಗಳಿಗೆ ದೊರೆಯುವವು. ಟಪಾಲಖರ್ಚ ಪ್ರತ್ಯೇಕ.

ದೊರೆಯುವ ಸ್ಥಳ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

---

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ **"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜ ಓಣಿಯಲ್ಲಿರುವ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

R. N. B. 2554

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೪ ]  ಸಪ್ಟೆಂಬರ ೧೯೪೦.  [ ಸಂಚಿಕೆ ೧೨

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೪ | ಸಪ್ಟೆಂಬರ ೧೯೪೦. | ಸಂಚಿಕೆ ೧೨ |
|---|---|---|

## ಶೂನ್ಯ ಸಂಪಾದನೆಯ ರಹಸ್ಯ.

(ಸಕಲ ಗಣಂಗಳ ನಿರ್ವಯಲ ಸಮಾಧಿ)

**ಲೇಖಕ— ಕಲ್ಯಾಣಪ್ಪಾ ಬ್ಯಾಳಿ ಬಿ. ಎ. ವಿಜಾಪೂರ.**

ಗೋರಕ್ಷಗೆ ನಿಜ ಪದಮಂ
ಓರಂತಿರಲಿತ್ತು ಪ್ರಭುವು ನಿರ್ವಯಲಾಗಲ್ ।
ಭೂರಿಮಹಶರಣರುಗಳೀ
ಧಾರುಣಿಯೊಳಗಿರದೆ ಐಕ್ಯಪಡೆದುದ ಪೇಳ್ವೆಂ ॥

ಬಸವರಾಜ ದೇವರು, ಚೆನ್ನಬಸವರಾಜದೇವರು, ಮಡಿವಾಳಮಾಚಿತಂದೆಗಳು ಮೊದಲಾದ ಅಸಂಖ್ಯಾತ ಮಹಾಗಣಂಗಳು ತಮ್ಮ ತಮ್ಮ ನಿಜಪದದ ನಿಜೈಕ್ಯಮಂ ಪೇಳಲು ಪ್ರಭುದೇವರು ಕೇಳಿ ಅವರಿಗೆ ನಿರ್ವಯಲ ಸ್ಥಿತಿಗತಿಯನ್ನು ಈ ಪ್ರಕಾರ ನಿರೂಪಿಸಿದರು. "ಅವಧಿಯುಳಿಯಿತ್ತು ವ್ಯವಧಾನವುಳಿಯಿತ್ತು. ನಿಜವು ನಿಜವನೊಡಗೂಡಿತ್ತು. ಕೇಳಾ ಬಸವಣ್ಣಾ. ಕಲಿಯುಗದಲ್ಲಿ ಮುಂದೆ ಇರಬಾರದು. ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು. ಚೆನ್ನಬಸವಣ್ಣನು ಉಳುವೆಯ ಮಹಾಮನೆಯಲ್ಲಿ ನಿಜವನೈದುಗೆ. ಮಡಿವಾಳಯ್ಯ, ಸೊಡ್ಡಳ ಬಾಚರಸರು ಮೊದಲಾದ ಪ್ರಮಥರೆಲ್ಲರು ನಿರ್ವಯಲ ನಿಜಸಮಾಧಿಯನೈದುವದು. ನಮಗೆ ಕದಳಿಯಲ್ಲಿ ಹೊಕ್ಕು ಒಡಗೂಡುವ ಪರಿಣಾಮ ಸಂದಿಹುದು. ಎಲ್ಲರಿಗೂ ಗುಹೇಶ್ವರನ ಆಣತಿ."

ಈ ಪರಿಗೆ ಶಿವಶರಣರಿಗೆ ನಿಜಸಮಾಧಿಯು ಹರಿವನ್ನು ನಿರೂಪಿಸಿ ಪ್ರಭುದೇವರು ಕಲ್ಯಾಣದಿಂದ ಪೊರಮಟ್ಟು ಶ್ರೀ ಪರ್ವತಕ್ಕೆ ಬಿಜಯಂಗೈದು ಅಲ್ಲಿ ಗೋರಕ್ಷನೆಂಬ ಸಿದ್ಧನಂ ಕಂಡು ಅವನ ವಜ್ರದೇಹವನ್ನು ಖಡ್ಗದಿಂದ ಹೊಯ್ದು ಪರೀಕ್ಷೆ ಮಾಡಿ ಆತನಿಗೆ ನುಡಿದುದೇನಂದರೆ "ಉದಯ ಮುಖದಲ್ಲಿ ಹುಟ್ಟಿದ ಪ್ರಾಣಿಗಳು ಅಸ್ತಮಾನಕ್ಕೆ ಅಳಿದರಲ್ಲ ? ಅಮೃತಸೇವನೆಯು ಮಾಡಿ ಆಪ್ಯಾಯನ ಘನವಾಗಿದ್ದುದ ಕಂಡೆ. ಪರುಷವೇದಿಯು ಸಾಧಿಸಹೋದರೆ ದಾರಿದ್ರ್ಯ ಘನವಾಗಿರ್ಪುದ ಕಂಡೆ. ಮರುಜೀವಣಿಯು ಹಣ್ಣುಮೆದ್ದು ಮರಣಕ್ಕೊಳಗಾಗಿದ್ದುದ ಕಂಡೆ. ಇವನೆಲ್ಲವನು ಸಾಧಿಸಿದವರು ಏನೂ ಕಾಣದೆ ಹೋದರು. ನಾನು ನಿಜವ ಸಾಧಿಸಿ ಬದುಕಿದೆನು. ನಿಜವು ಕುಟಿಲ ಕುಹಕದ ಕಪಟ ಯೋಗವಲ್ಲ ಕಾಣಿರೋ. ಕಾಯುಸಮಾಧಿ, ಕರಣಸಮಾಧಿ ಜೀವಸಮಾಧಿಯು ಯೋಗವಲ್ಲಿದು ಕಾಣಿರೋ ನಿಜವು ಸಹಜ ಸಮಾಧಿಯಾಗಿಪ್ಪುದು ನೋಡಾ ಗುಹೇಶ್ವರಾ."

ಹೀಗೆ ಪ್ರಭುದೇವರು ಗೋರಕ್ಷನ ಕಾಯುಸಿದ್ಧಿ ಮೊದಲಾದ ಸಿದ್ಧಿಗಳನ್ನೂ ಆತನ ಯೋಗಾಭ್ಯಾಸವನ್ನೂ ಜರಿಯಲು ಗೋರಕ್ಷನು ಪ್ರಭುವಿಗೆ ಮಹೋಪದೇಶವನ್ನು ಮಾಡಬೇಕೆಂದು ಈ ಪ್ರಕಾರ ಬೆಸಗೊಂಡನು. "ಪ್ರಭುವೇ ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾಗದು. ನಾನಾ ಕಲ್ಪ ಅದೃಶ್ಯಂಗಳ ಕಲಿತಲ್ಲಿ ಕಾಯುಸಿದ್ಧಿಯಾಯಿತ್ತಲ್ಲದೆ ಆತ್ಮಸಿದ್ಧಿಯಾಗದು, ನಾನಾ ವಾಗ್ವಾದಂಗಳಿಂದ ಹೋರಾಡಿದರೆ ಮಾತಿನ ಮಾಲೆಯಾಯಿತ್ತಲ್ಲದೆ ಆತ್ಮಾನಂದ ದೊರಕೊಳ್ಳದು. ಅದು ಕಾರಣ ಪರಂಜ್ಯೋತಿಯು ವಿಕಳವ ತೋರಿಸಾ ಗೋರಕ್ಷಪಾಲಕ ಮಹಾಪ್ರಭುಸಿದ್ಧಸೋಮನಾಥಲಿಂಗವೇ. ಅದಕ್ಕೆ ಶ್ರೀ ಪ್ರಭುದೇವರು "ನಿಶ್ಶಬ್ದಂ ಬ್ರಹ್ಮ ಉಚ್ಯತೇ" ಎಂಬ ಮರ್ಮವು ತಿಳಿದಮೇಲೆ ಬಳಲುವ ಕಾರಣವಿಲ್ಲ. ನಾಹಂ ಎಂಬಲ್ಲಿ ತಾನಾರು ? ಕೋಹಂ ಎಂಬಲ್ಲಿ ಮುನ್ನಾರು ? ಸೋಹಂ ಎಂಬ ಹಮ್ಮಿನ ಭವಮಾಲೆಯೇಕೆ ? ಇತ್ಯಾದಿಯಾಗಿ ಮೌನದಿಂದಲೇ ಸತ್ಯದ ಬೆಳಕು ಹೊಳೆಯುವದೆಂದು ಗೋರಕ್ಷನಿಗೆ ಪರಬ್ರಹ್ಮದ ನೆಲೆಯ ತೋರಿ ಪ್ರಭುವು ಕದಳಿಯ ಹೊಕ್ಕು ನುಡಿದುದೇನಂದರೆ "ಕಾಯುವೆಂಬ ಕದಳಿಯ ಹೊಕ್ಕು ಪ್ರಾಣವೆಂಬ ಗಂಹರದೊಳಗೆ ಸಕಲೇಂದ್ರಿಯಂಗಳೆಂಬ ಕೋಣೆಕೋಣೆಗಳಲ್ಲಿ ತಿರುಗಾಡುತ್ತ ಬರಲಾಗಿ ಮೇರು ಮಂದಿರದ ತ್ರಿಕೋಣೆಯಲ್ಲಿ ಬೆಳಗಾಯಿತು.

ಗುಹೇಶ್ವರಲಿಂಗವೆಂಬದು ರೂಪಾಯಿತ್ತು." ಇಂತಪ್ಪ ಕದಳಿಯಲ್ಲಿ ಪ್ರಭುದೇವರು ನಿಜಸಮಾಧಿಯಲ್ಲಿ ಪರವಶರಾಗಿ ನಿರಾಳವನ್ನೈದಿದರು.

ಶ್ರೀ .ಪ್ರಭುವು ಕದಳಿಯಲ್ಲಿ ಲಿಂಗೈಕ್ಯವಾದುದನ್ನು ಜ್ಞಾನದೃಷ್ಟಿಯಿಂದ ತಿಳಿದು ಬಸವ, ಚೆನ್ನಬಸವ, ಮಡಿವಳಮಾಚಿದೇವ, ಸೊಡ್ಡಳ ಬಾಚರಸ ಮೊದಲಾದವರು ಇನ್ನು ಮೇಲೆ ತಾವೂ ನಿರ್ವಯಲ ಸಮಾಧಿಯಲ್ಲಿ ಬೆರೆಯಲುದ್ಯುಕ್ತರಾದರು. ಮೊದಲು ಸೊಡ್ಡಳ ಬಾಚರಸರು ಲಿಂಗೈಕ್ಯರಾಗಲು ಬಸವಣ್ಣನವರು "ಎಮ್ಮವರಿಗೆ ಸಾವಿಲ್ಲ. ಎಮ್ಮವರು ಸಾವನರಿಯರು. ಸಾವೆಂಬುದು ಸಾವಿಲ್ಲ. ಲಿಂಗದಲ್ಲಿ ಉದಯವಾದ ನಿಜೈಕ್ಯರಿಗೆ ಆ ಲಿಂಗದಲ್ಲಿ ಅಲ್ಲದೆ ಬೇರೆ ಮತ್ತೊಂದೆಡೆಯಿಲ್ಲ. ಕೂಡಲಸಂಗಮದೇವರ ಶರಣ ಸೊಡ್ಡಳ ಬಾಚರಸರು ನಿಜಲಿಂಗದ ಒಡಲೊಳಗೆ ಬಗೆದು ಹೊಕ್ಕಡೆ ಉಪಮಿಸಬಲ್ಲವರ ಕಾಣೆನು" ಎಂದು ಕೊಂಡಾಡಿದರು.

ಇದೇ ಸಮಯಕ್ಕೆ ಬಿಜ್ಜಳರಾಯನು ಹರಳಯ್ಯ ಮಧುವಯ್ಯಗಳ ಶರೀರಸಂಬಂಧದಿಂದ ಕುಪಿತನಾಗಿ ಅವರು ನೀತಿಭ್ರಷ್ಟರೆಂದು ಬಗೆದು ಅವರ ಕಣ್ಣು ಕೀಳಿಸಲು ಅವರೀರ್ವರು ಬಸವನ ಅನುಗ್ರಹದಿಂದ ಕಂಗಳಂ ಪಡೆದು ಶಿವನೊಳೀಕಾರ್ಥವಾದರು. ಬಸವರಾಜದೇವರು ಶಿವಭಕ್ತದ್ರೋಹಿಯಾದ ಬಿಜ್ಜಳನನ್ನು ಸಂಹರಿಸಿರೆಂದು ಜಗದೇವಮೊಲ್ಲಿಬೊಮ್ಮಣ್ಣಗಳಿಗೆ ಬೆಸನಿತ್ತು ಶರಣರನ್ನು ಕುರಿತು "ಅರಸು ಅವಿಚಾರಿ, ಸಿರಿಯು ಸಿಂಗಾರ ಸ್ಥಿರವಲ್ಲ ಕೇಳಿರೋ. ಮರ್ತ್ಯದಲ್ಲಿ ಕಲ್ಯಾಣವು ಕೆಟ್ಟು ಹಾಳಪ್ಪುದು ಕೂಡಲಸಂಗನ ಸಾಕ್ಷಿಯಾಗಿ ಜಗದೇವ ಮೊಲ್ಲಿಬೊಮ್ಮಣ್ಣಗಳ ಕೈಯಲ್ಲಿ ಬಿಜ್ಜಳನು ಮಡಿಯುವನು. ಕರ್ತೃ ಕೂಡಲಸಂಗನು ನನ್ನನ್ನು ಮರ್ತ್ಯಕ್ಕೆ ಅಟ್ಟಲು ಮಹಮನೆಯ ಕಟ್ಟಿದೆ. ಸತ್ಯ ಶರಣರಿಗೆ ತೊತ್ತು ಭೃತ್ಯನಾಗಿ ತನುವ ಸವೆದು ಬದುಕಿದೆನು. ಕರ್ತನು ಮತ್ತೆ ತನ್ನೆಡೆಗೆ ಬರಬೇಕೆಂದು ನಿರೂಪವಿತ್ತ ಕಾರಣದಿಂದೆ ಮಹಾಪ್ರಸಾದವೆಂದು ತೆರಳುವೆನು. ಸಕಲ ಪುರಾತನರ ಪಾದಕ್ಕೆ ಶರಣು. ಶ್ರೀ ಪ್ರಭುವಿನ ಪಾದಕ್ಕೆ ಶರಣು. ಕೂಡಲಸಂಗನ ಪಾದಕ್ಕೆ ಶರಣು. ನಿಮ್ಮ ನಿಜಪದದಲ್ಲಿ ಬೆರೆಯೆಂದು ಕೃಪೆಮಾಡಾ" ಎಂದು ಬೇಡಿಕೊಂಡರು.

ಇಂತು ಬಸವರಾಜದೇವರು ಅಸಂಖ್ಯಾತ ಮಹಾಗಣಂಗಳ ಕೈಯ್ಯಲು ಬೀಳ್ಕೊಂಡು ತಮ್ಮ ಮನೆಯ ಉಪಕರಣಗಳನ್ನೆಲ್ಲ ಲಿಂಗ

ಜಂಗಮಕ್ಕೆ ಸೂರೆಗೊಟ್ಟು, ೭೭೦ ಅಮರಗಣಂಗಳಿಗೆ ನಿಜಪದಪ್ರಾಪ್ತಿಯನ್ನು ನಿರೂಪಿಸಿ ತಮ್ಮ ಸಮಯಾಚಾರದ ೩೬ ಸಾವಿರ ಜಂಗಮರನ್ನು ಚೆನ್ನಬಸವಣ್ಣನವರ ಕೈಯಲ್ಲಿ ಕೊಟ್ಟು ಕಟಕದಿಂ ಪೊರಮಟ್ಟು ಕಪ್ಪಡಿ ಸಂಗಮಕ್ಕೆ ತೆರಳಲನುವಾದರು. ಆಗಳೇ ಬಿಜ್ಜಳನ ಐಶ್ವರ್ಯವು ಹಾನಿಯಾಗಿ ಕಟಕದ ಭಾಗ್ಯವಳಿಯಿತ್ತು. ಧಾರುಣಿ ನಡುಗಿತ್ತು. ಕಾಗೆಗಳು ಇರುಳು ಅರಚಿದವು. ಹಗಲು ನರಿಗಳು ಊರೊಳಪೊಕ್ಕವು. ನಕ್ಷತ್ರಗಳು ಬಿಳ್ದವು. ಕಲ್ಲಮಳೆ ಸುರಿಯಿತು. ಮಹಾ ಪ್ರಚಂಡವಾಯು ಬೀಸಿ ಕೆಂಧೂಳು ಆಕಾಶವನಡರಿತು. ಬಿಜ್ಜಳನು ಗಗನದಲ್ಲಿ ಶಿರವಿಲ್ಲದ ಹೆಣನ ಕಂಡನು. ಜಗದೇವ ಮೊಲ್ಲೆ ಬೊಮ್ಮಯ್ಯಗಳು ಬಸವರಾಜದೇವರಿಂದ ಬೆಸನಾಂತು ವೀರಾವತಾರದ ವೀರಭದ್ರರಾಗಿ ಕೈದುವಂ ಪಿಡಿದು ದಳದಳನೆ ಬಂದು ಗದ್ದುಗೆಯಮೇಲೆ ಬಿಜ್ಜಳನ ಕಾಣುತ್ತೆ ಆಯುಧವನುಚ್ಚಿ ಬಿಜ್ಜಳನ ಕಾಯದಲ್ಲಿ ಎರಡು ಮೂರು ಪೂರಾಯ ಗಾಯದೊಳಿರಿದು ಕೆಡಹಿ ಶಿವಭಕ್ತದ್ರೋಹಿಯ ಕೊಂದೆವೆಲಾ ಎಂದು ಉಬ್ಬಿ ಕೊಬ್ಬಿ ಬೊಬ್ಬೆಯಿಡುತ್ತ ಶಿವಲೋಕಕ್ಕೈದಿದರು.

ಬಸವರಾಜದೇವರು ಇದನ್ನೆಲ್ಲ ಕೇಳಿ ಸಂತೋಷದಿಂದ ಕೂಡಲಸಂಗಮಕ್ಕೆ ಬಂದುಬಿಟ್ಟರು. ಆ ಸಮಯದಲ್ಲಿ ತಮ್ಮ ಪತ್ನಿಯಾದ ನೀಲಲೋಚನೆಯನ್ನು ಕರೆದುಕೊಂಡುಬಾರೆಂದು ಹಡಪದಪ್ಪಣ್ಣಗಳನು ಕಳುಹಲು ಆ ಅಪ್ಪಣ್ಣಗಳು ಕಲ್ಯಾಣಕ್ಕೆ ಬಂದು ಬಸವನಾಜ್ಞೆಯನ್ನು ನಿರೂಪಿಸಿದರು. ಆಗ ನೀಲಮ್ಮನವರು "ನಾವು ಇಲ್ಲಿದ್ದರೇನು, ಅಲ್ಲಿದ್ದರೇನು ? ನಮ್ಮ ನಿಮ್ಮ ಸಂಸರ್ಗದ ನಿರೂಪಮಾಕಾರ ಮೂರ್ತಿಯನ್ನೆಡೆಯಲ್ಲಿರಲು ನಿರವಯವನ್ನೈದಿ ನಿಜಸುಖಿಯಾದೆನು. ಬಸವನಲ್ಲಿ ಎಮಗೆ ತೆರಹಿಲ್ಲವಯ್ಯಾ ಅಪ್ಪಣ್ಣಾ. ಭಾವಶೂನ್ಯಳು ನಾನಯ್ಯ, ಸಂಗಯ್ಯ. ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ ? ನಾನಾರ ಹೊಂದುವೆನೆಂದು ಭ್ರಮೆಬಡಲೇಕಯ್ಯಾ ? ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ ? ಪರಿಣಾಮಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣಾ ? (ಲಿಂಗವನ್ನು ಕುರಿತು) ನೋಡು ನೋಡೆಲೆ ಲಿಂಗವೇ, ಬಸವನಾಟವಾ. ಅಲ್ಲಿಗೆ ಎನ್ನನು ಬರಹೇಳಿದರಂತೆ. ಇಲ್ಲಿ ತಾವಿಲ್ಲವೇ ? ಸಂಗಯ್ಯಂಗೆ ಅಲ್ಲಿ ಇಲ್ಲಿಯೆಂಬ ಉಭಯ ಸಂದೇಹವುಂಟೆ ? ಬಲ್ಲ ಮಹಾತ್ಮರು ಹೀಗೆ

ಹೇಳಿಕಳಿಸುವದುಚಿತವೇ? ಕರಸ್ಥಲದ ಲಿಂಗದಲ್ಲಿಯೇ ನಾವು ಪರಿಣಾಮಿಸುವೆವು" ಎಂದು ಹೇಳಿ ಕಳುಹಿದರು.

ನೀಲಮ್ಮಗಳು ಆತ್ಮಲಿಂಗದಲ್ಲಿ ಐಕ್ಯವಾಗುವರೆಂಬದನ್ನು ಹಡಪದಪ್ಪಣ್ಣಗಳು ಬಸವರಾಜದೇವರಿಗೆ ಬಿನ್ನವಿಸಿದರು. ಅದಕ್ಕೆ ಬಸವರಾಜದೇವರು ಒಡಂಬಟ್ಟು ಸಂಗಮನಾಥನನ್ನುದ್ದೇಶಿಸಿ "ಉರಿಯೊಳಗಣ ಕರ್ಪುರಕ್ಕೆ ಕರಿಯುಂಟೇ ಅಯ್ಯ? ಬಯಲಮರೀಚಿಯ ಜಲಕ್ಕೆ ಕೆಸರುಂಟೆ ಅಯ್ಯ? ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯವುಂಟೆ ಅಯ್ಯ? ನೀವು ನೆರೆ ಒಲಿದ ಬಳಿಕ ಎನಗೆ ಭಯವುಂಟೆ? ಕೂಡಲಸಂಗಮದೇವಾ. ನಿಮ್ಮ ಚರಣಕಮಲದೊಳಗೆ ಎನ್ನನಿಂಬಿಟ್ಟುಕೊಳ್ಳಯ್ಯ. ನಿಮ್ಮ ಹೃದಯಕಮಲದ ಅಂತರಾಳದ ಏಕಪೀಠದ ಸಿಂಹಾಸನದ ತೆರಹುಗೊಡು ಕೂಡಲಸಂಗಮದೇವಾ." ಎಂದೆನ್ನಲು ಕೋಟಿಸೂರ್ಯಪ್ರಭೆಯುಳ್ಳ ಆ ಸಂಗಮೇಶ್ವರನು ಜಂಗಮರೂಪದಿಂದ ಬಂದು ಆ ಬಸವರಾಜದೇವರನ್ನು ಬಿಗಿದಪ್ಪಿಕೊಂಡು ಹೃದಯಕಮಲದೊಳಡಗಿಸಿಕೊಂಡನು. ವಾರಿಶಿಲೆಯುದಕದೊಳಡಗಿದಂತೆ, ಪರಿಮಳಂ ಕುಸುಮದೊಳಡಗಿಪ್ಪಂತೆ, ಪಾಲೋಳ್ಪಾಲು ಬೆರೆದಂತೆ ಬಸವಣ್ಣನು ಸಂಗಮಲಿಂಗದಲ್ಲಿ ಐಕ್ಯವಾದನು.

ಬಳಿಕ ನೀಲಮ್ಮನೂ ಅಕ್ಕನಾಗಾಯಿಗಳೂ ಬಹುಪರಿಯಾಗಿ ಪ್ರಳಾಪಿಸಿ ಕೊನೆಗೆ ಲಿಂಗೈಕ್ಯರಾದರು. ನೀಲಮ್ಮನು "ಅಡವಿಯಲ್ಲಿ ಕಂಗೆಟ್ಟ ಪಶುವಿನಂತೆ ನಾನು ಪ್ರಳಾಪಿಸುತ್ತಿದ್ದೇನೆ. ಕಾಯದ ಸುಖವ ಕಂಗೊಳಿಸಿದ ಗುರುವೇ, ಕಲ್ಪಿತವ ನಷ್ಟಮಾಡಿದ ಗುರುವೇ, ಎತ್ತಲಡಗಿದೆಯಯ್ಯಾ? ಪ್ರಾಣ ಪ್ರಸಾದದಲ್ಲಿ ಅಡಗಿತ್ತೇ ಬಸವಾ.? ಭಕ್ತಿ ಬಯಲಾಯಿತ್ತೇ ಬಸವಾ? ಎನ್ನ ಪ್ರಾಣದ ಹಂಗು ಹರಿದ ಬಳಿಕ ಇನ್ನೇವೆನಯ್ಯಾ?" ಇತ್ಯಾದಿಯಾಗಿ ಶೋಕಿಸಿ ಬಯಲಾದಳು.

ಅಕ್ಕನಾಗಾಯಿಗಳು "ಭಕ್ತಿಯ ತವನಿಧಿಯೇ, ಮುಕ್ತಿಯ ಮೂರುತಿಯೇ, ಲಿಂಗಜಂಗಮದ ಚೈತನ್ಯವೇ, ನಿಮ್ಮನಗಲಿ ಎಂತು ಸೈರಿಸುವೆನು. ಬಸವಣ್ಣಾ, ನೀವು ಮರ್ತ್ಯಕ್ಕೆ ಬಂದು ನಿಂದರೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲ ಪಸರಿಸಿತ್ತು. ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲ ನಿಮ್ಮ ಭಕ್ತಿಯ ಬೆಳುವಿಗೆಯ ಘನವನಾರು ಬಲ್ಲರು? ಅಣ್ಣಾ ನೀವು ಲಿಂಗೈ

ಕ್ಯವಾದೊಡನೆ ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ; ಸದಾಚಾರ ಹೋಯಿತ್ತಯ್ಯ, ಅಣ್ಣಾ ಬಸವಣ್ಣಾ. ಎನ್ನನೊಯ್ಯದೆ ಹೋದೆಯಲ್ಲ ? ಇಂತೆಂದು ಹೇಳಿ ಬಯಲಾದಳು. ಬಳಿಕ ಮಡಿವಾಳಯ್ಯ, ಚೆನ್ನಬಸವಣ್ಣ, ಚೌಡಯ್ಯ, ಕೋಲಶಾಂತಯ್ಯ, ಹಡಪದಪ್ಪಣ್ಣ ಮೊದಲಾದ ಶರಣರು ಬಸವನ ಘನತೆಯನ್ನು ನೆನೆನೆನೆದು ಲಿಂಗದೊಳಡಗಿದರು. ಈ ಮೇರೆಗೆ ಎಲ್ಲ ಶಿವಶರಣರ ಲಿಂಗೈಕ್ಯದೊಂದಿಗೆ ಈ ಸಂಪಾದನೆಯು ಪೂರ್ತಿಗೊಳ್ಳುತ್ತದೆ.

— ಭದ್ರಂ ಶುಭಂ ಮಂಗಳಂ —

---

# ರಾಘವಾಂಕ ಪಂಡಿತನ ಲಿಂಗವಂತಿಕೆಯ ಐತಿಹ್ಯ.

[ಜೀವನ ಕಾಲನಿರ್ಣಯ ಸಹಿತ.]

**ಲೇ.— ವೇ. ಪಂಡಿತ ಸ. ಹಾ. ಶಿವಮೂರ್ತಿ**

---

ಇದೇ ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ— ಹರಿಹರ ಕವಿಯ ಲಿಂಗವಂತಿಕೆಯ ಐತಿಹ್ಯ—ವೆಂಬ ನಮ್ಮ ಲೇಖನದಲ್ಲಿ ಅವನ ಮತಕಾಲ ವಿಚಾರವನ್ನು ಚರ್ಚಿಸಿ ನಿಶ್ಚಯಿಸಿರುವದರಿಂದಲೇ ರಾಘವಾಂಕಪಂಡಿತನ ಮತ ಕಾಲ ನಿರ್ಣಯವೂ ಆಗಬಹುದಾಗಿತ್ತು. ಆದರೆ ಐತಿಹಾಸಿಕ ಲೇಖಗಳನ್ನು ಬರೆಯುವುದರಲ್ಲಿ ಹೆಸರಾದಂತವರೊಳಗೆ ಒಬ್ಬರಾಗಿರುವ, ಮ। ರಾ। ಗೋವಿಂದ ಪೈ ಅವರು ಈ ಕೆಳಗಿರುವಂತೆ ಅಭಿಪ್ರಾಯ ಪಟ್ಟಿದ್ದಾರೆಃ—

"ರಾಘವಾಂಕನಾದರೊ ಪ್ರಾಯಶಃ ಅದಕ್ಕೂ ಮೇಲೆ [ಎಂದರೆ ಹರಿಹರನು ವೀರಶೈವ ಧರ್ಮವನ್ನು ಸ್ವೀಕರಿಸಿ ಆ ಬಳಿಕ ಬಸವರಾಜದೇವರ ರಗಳೆ ಮೊದಲಾದ ತನ್ನ ಅವೆಲ್ಲ ರಗಳೆಗಳನ್ನು ರಚಿಸಿದ ಮೇಲೆ] ಅಂದರೆ ಈಗ ಬಲ್ಲಷ್ಟರ ಮಟ್ಟಿಗೆ ಆತನ ಯಾವ ಕಾವ್ಯದಲ್ಲಾದರೂ ಬಸವೇಶ್ವರನನ್ನು ಸ್ಮರಿಸಿಲ್ಲದುದರಿಂದ, ತನ್ನ ಹೆಚ್ಚು ಕಡಿಮೆ ಅವೆಲ್ಲ ಕಾವ್ಯಗಳನ್ನು ಬರೆದು ಮುಗಿಸಿದ ಮೇಲೆನೋ ವೀರಶೈವನಾಗಿರಬೇಕು.[೧]

---

ಟಿ:— ೧ ಶರಣಸಾಹಿತ್ಯ. ಸಂ-೨ ಪುಟ ೩೩೭.

ಈ ರೀತಿ ಬರೆದಿರುವುದು, ನಾವು ಮುಂದೆ ಉದಾಹರಿಸುವ ರಾಘವಾಂಕನ ಮಾತಿಗೇ ಪ್ರತಿಕೂಲವಾಗುತ್ತಿರುವ ಕಾರಣ, ಇಷ್ಟೆಯಲ್ಲ— ರಾಘವಾಂಕನು ತನ್ನ ಹೆಚ್ಚುಕಡಿಮೆ ಅವೆಲ್ಲ ಕಾವ್ಯಗಳನ್ನು ಬರೆದು ಮುಗಿಸಿದ ಮೇಲೇನೋ ವೀರಶೈವನಾಗಿರಬೇಕು— ಎಂದು ಆ ಲೇಖಕರು ಹೇಳಬೇಕಾದರೆ, ರಾಘವಾಂಕನ ಆ ಎಲ್ಲಾ ಕಾವ್ಯಗಳನ್ನು ಅವರು ಕಣ್ಣಾರೆ ಕಂಡಿರುವರೋ ಇಲ್ಲವೋ ಎಂಬ ಸಂಶಯವೂ ಒಡನೆ ತೋರುತ್ತಿರುವುದರಿಂದ, ಅವರ ವಾದಸರಣಿಯು ಎಷ್ಟೂ ಸಾಧುವಾಗಿಲ್ಲವೆಂಬುದನ್ನು ತೋರಿಸಿಕೊಡಲು, ನಾನು ನಿರ್ವಾಹವಿಲ್ಲದೆ ಲೆಕ್ಕಣಿಕೆಯನ್ನೀಗ ಎತ್ತಲೇಬೇಕಾಯಿತು.

## ೧ ಹರಿಹರ-ರಾಘವಾಂಕರ ಜನನವು ಮಾತ್ರ ಬ್ರಾಹ್ಮಣರಲ್ಲಿ:

ಹರಿಹರನು ಜನ್ಮತಃ ಬ್ರಾಹಣ ಮತದವನೆಂಬುದು— ಕಾಷ್ಠದೊಳ್ ಕಷ್ಟರೂಪಿಂಬೇವಲ್ಲಿಂ ಮುನ್ನ-ಎಂಬ ರಕ್ಷಾಶತಕದ ವಾಕ್ಯದಿಂದಲೂ, ಮತ್ತು ಶಿವದೀಕ್ಷೆಯಾದೊಡನೇ— ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ಕೈ— ಎಂಬ ಪಂಪಾಶತಕದ ಪದ್ಯದಿಂದಲೂ ಗೊತ್ತಾಗುತ್ತದೆ. ರಾಘವಾಂಕನಾದರೂ ಆ ಹರಿಹರನ ಅಗ್ರಜೆಯ ಮಗನೆಂದು, ಪದ್ಮರಾಜಪುರಾಣ, ಚೆನ್ನಬಸವ ಪುರಾಣಗಳಲ್ಲಿ ಹೇಳಿದೆ. [ಟೀಃ-ಇದು ನಿಜವಿದ್ದರೆ ರಾಘವಾಂಕನು, ಹರಿಹರನ ಈ ಆಪ್ತತ್ವವನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದನೆಂದು ಕೆಲವರು ಅನುಮಾನಿಸುತ್ತಾರೆ.]

ರಾಘವಾಂಕನು ತನ್ನ ತಂದೆಯನ್ನು ಯಾವ ಕಾವ್ಯದಲ್ಲಿಯೂ ಸ್ತುತಿಸದೆ, ಹರಿಹರದೇವನ ತಂದೆಯಾದ ಮಹಾದೇವ ಗುರುರಾಯನನ್ನು ಸ್ತುತಿಸಿದ್ದಾನೆ. [ಹ. ಕಾವ್ಯ. ೧-೧೧] ಹೀಗೆ ಆತನನ್ನು ಆದರಪೂರ್ವಕಸ್ತುತಿಸಿರುವುದು, ಈ ಮುಂದಿನ ಊಹೆಯನ್ನು ದೃಢಪಡಿಸುತ್ತದೆ. ರಾಘವಾಂಕನ ಮಾತಾಪಿತೃಗಳು ಚಿಕ್ಕಂದಿನಲ್ಲಿಯೇ ಪರಲೋಕವನ್ನೈದಿದ್ದು, ಈತನೇ ಅವರ ಪ್ರಥಮ ಪುತ್ರನಾಗಿರಬಹುದು. ಇಂತಾದರೆ ಮಾತೃವಂಶದರೇ ಚಿಂಣನಾಗಿರುವ ರಾಘವಾಂಕನನ್ನು ತಮ್ಮಲ್ಲಿಗೆ ಕರೆತಂದು, ಅಕ್ಕರೆಯಿಂದ ಸಲಹುವುದು ಸಹಜವಾಗುತ್ತದೆ. ಅಂತೆಯೆ ಮುಂದೆ ರಾಘವಾಂಗನಾದರೂ ತನ್ನ ಗುರುವೂ ಸೋದರಮಾವನೂ ಆದ ಹರಿಹರದೇವನ ತಂದೆಯನ್ನು ಎಂದರೆ ತನ್ನ ಮಾತಾಮಹನಾದ ಮಹಾದೇವ

ಗುರುರಾಯನನ್ನು ಸ್ತುತಿಸುವಲ್ಲಿ ಕಾರಣವಾಗುತ್ತದೆ. ಮತ್ತು ಈ ಸ್ತುತಿಯು, ಹರಿಹರ ರಾಘವಾಂಕರ ಆ ಆಪ್ತಬಂಧುತ್ವವನ್ನೂ ಬಲಪಡಿಸುತ್ತದೆಂಬುದು ಸ್ವೈಜವಾಗುತ್ತದೆ.

ಹರಿಹರದೇವನು ಕ್ರಿ. ಶ. ಸು ೧೧೨೫ ರಲ್ಲಿ ಹುಟ್ಟಿ, ಕ್ರಿ. ಶ. ೧೧೫೩ ರಕೊನೆಗೆ ಹಂಪೆಗೆ ಮರಳಿ ಬಂದೊಡನೆ, ವೀರಶೈವದೀಕ್ಷೆಯನ್ನು ಹೊಂದಿ ಆ ಮೇಲೆ ತನ್ನ ಕಾವ್ಯಗಳನ್ನೆಲ್ಲಾ ಬರೆದು, ಕ್ರಿ. ಶ. ಸು ೧೧೯೦ ರಲ್ಲಿ ಶಿವಾಧೀನವಾದನೆಂದು, ಆತನ ಸಂಬಂಧವಾದ ಲೇಖನದಲ್ಲಿ ಸಪ್ರಮಾಣವಾಗಿ ಸ್ವೀಕರಿಸುವುದನ್ನು ನೋಡಬಹುದಾಗಿದೆ.

### ೨. ರಾಘವಾಂಕನ ಜನನ ಕ್ರಿ. ಶ. ಸು ೧೧೪೦ರಲ್ಲಿ

ರಾಘವಾಂಕನು ತನ್ನ ೩೦ನೇ ವಯಸ್ಸಿನ ಆಚೀಚೆ, ತನ್ನ ಮೊತ್ತಮೊದಲಿನ ಕೃತಿಯೆನಿಸುವ ಹರಿಶ್ಚಂದ್ರಕಾವ್ಯವನ್ನು[೧] ರಚಿಸಿರಬಹುದೆಂಬ ನಮ್ಮ ಗೋವಿಂದ ಪೈಗಳವರ ಊಹೆಯು ಹೆಚ್ಚು ಸಂಭಾವ್ಯವಾಗಿದೆ. ಆ ಹರಿಶ್ಚಂದ್ರ ಕಾವ್ಯವಾದರೂ ಕ್ರಿ. ಶ. ಸು. ೧೧೭೧ರಲ್ಲಿ ರಚಿತವಾಗಿದೆಯೆಂದು, ಈ ಮುಂದೆ ನಾವು ಸಪ್ರಮಾಣವಾಗಿ ಸ್ಪಷ್ಟೀಕರಿಸಿರುವುದರಿಂದ ರಾಘವಾಂಕನು ಕ್ರಿ. ಶ. ಸು. ೧೧೪೦ ರಲ್ಲಿ ಜನಿಸಿದನೆಂದು ನಿರ್ಧರಿಸಲು, ಯಾವ ಪ್ರತ್ಯವಾಯುವೂ ಇಲ್ಲ. ಈ ದೃಷ್ಟಿಯಿಂದ ಕ್ರಿ. ಶ. ೧೧೨೫ ರಲ್ಲಿ ಹುಟ್ಟಿದ ಹರಿಹರನಿಗೆ, ರಾಘವಾಂಕನು ೧೫ ವರ್ಷ ಕಿರಿಯನಾಗುತ್ತಾನೆ.

### ೩ ರಾಘವಾಂಕನು ವೀರಶೈವನಾದುದು ಕ್ರಿ. ಶ. ಸು. ೧೧೫೪ರಲ್ಲಿ

ಹರಿಹರಕವಿಯು ಕ್ರಿ. ಶ. ೧೧೫೩ರ ಕೊನೆಯಲ್ಲಿ ವೀರಶೈವ ದೀಕ್ಷೆಯನ್ನು ಕೈಕೊಂಡನು. ಬ್ರಾಹ್ಮಣರಾಗಿದ್ದ ಆತನ ವಂಶದವರು ಮಾತ್ರ ಆ ಕೂಡಲೇ ವೀರಶೈವ ದೀಕ್ಷೆಗೆ ಒಪ್ಪಿಕೊಂಡಿಲ್ಲ. ಆದ ಕಾರಣ ರಾಘವಾಂಕನನ್ನೂ ಈತನ ಮಾತಾಮಹನಾದ ಮಹಾದೇವ ಗುರುರಾಯನು ವೀರಶೈವನನ್ನಾಗಿ ಮಾಡಿಸಿಲ್ಲ. ಏಕಂದರೆ ಅಂದು ೧೩ ವರುಷದ ವಯಸ್ಸಿನವನಾಗಿದ್ದ ರಾಘವಾಂಕನಿಗೂ ಹರಿಹರನೊಡನೇ ದೀಕ್ಷೆಯಾಗಿದ್ದರೆ, ಈರ್ವರಿಗೂ ಮಾಯಿದೇವ [ಮಾದರಸ] ರೇ ಗುರುಗಳಾಗುತ್ತಿದ್ದರು.

---

೧ ಟಿ:—೨ ಶ. ಸಾಹಿತ್ಯ. ೨, ೩೩೧.

ಅದರೆ ರಾಘವಾಂಕನು ತನ್ನ ಪ್ರಥಮ ಕಾವ್ಯವಾದ ಹರಿಶ್ಚಂದ್ರ ಕಾವ್ಯ ದಲ್ಲಿಯೇ [೧, ೧೫] ತಾನು 'ಹರೀಶ್ವರನ ವರಸುತ' ನೆಂದು ಹೇಳುತ್ತಾನೆ. 'ವರಸುತ' ನೆಂದರೆ ಸಾಕಣೆಯ ಮಗನೆಂದು ಅರ್ಥವಾಗುವುದಿಲ್ಲ. ವೀರ ಶೈವ ದೀಕ್ಷೆಯಾದ ಬಳಿಕ— ಪಾಶಬದ್ಧವಾದ ಪೂರ್ವಜನ್ಮವಳಿದು ಮಂತ್ರ ಮಯವಾದ ಪುನರ್ಜನ್ಮವಾವುದೆಂಬ ಭಾವನೆಯಲ್ಲಿ ಗುರುಪುತ್ರರಾಗುವ ಕಾರಣ— ವೀರಶೈವರು, ತಮ್ಮ ಗುರುನಾಮದ ಮುಂದೆ, ಕರಕಮಲ ಸಂಜಾತ ಅಥವಾ ವರಕುಮಾರ— ವರಸುತನೆಂದಿಟ್ಟುಕೊಳ್ಳುವುದೇ ವೀರಶೈವ ಸಂಪ್ರದಾಯವಾಗಿದೆ. ಅಂತೆಯೇ ರಾಘವಾಂಕನು, ಹರಿ ಹರನು ತನಗೆ ಸೋದರಮಾವನಾಗಿದ್ದರೂ, ಭಯಭಕ್ತಿಗೆ ಸ್ಥಾನವಾದ ಗುರುದೇವನಾಗಿರುವುದರಿಂದ, ಸಲುಗೆಗೆ ತಾಣವಾದಾ ಬಂಧುತ್ವವನ್ನು ಆತನಲ್ಲಿ ಹೇಳಿಕೊಳ್ಳುವುದು ತಪ್ಪೆಂದು ತಿಳಿದುಬಿಟ್ಟಿದ್ದಾನೆ.

ಹಾಗಾದರೆ ರಾಘವಾಂಕನು ಲಿಂಗವಂತನಾದ ಕಾಲವಾವುದು ? ಪರಿಕಿಸೋಣ: ಉದ್ದಾಮ ಪಂಡಿತನೂ, ಶ್ರೀ ಶಿವಸಾಕ್ಷಾತ್ಕಾರವನ್ನು ಪಡೆ ದಿದ್ದವನೂ, ಪ್ರಚಂಡ ಕ್ರಾಂತಿಯವನೂ ಆದ ಹರಿಹರನು, ಕ್ರಿ. ಶ. ೧೧೫೩ ರಲ್ಲಿ ವೀರಶೈವನಾದೊಡನೆ ರಚಿಸಿದ ತನ್ನ ಪಂಪಾಶತಕದಲ್ಲಿ ವೀರಶೈವ ಧರ್ಮವನ್ನು ಹೊಗಳುತ್ತ, ತನ್ನ ಜನ್ಮವನ್ನಿತ್ತ ಬ್ರಾಹ್ಮಣ ಮತದ ಆಚಾರಗಳನ್ನು ತೆಗಳುತ್ತಿರುವುರಿಂದಲೂ, ಇದೂ ಅಲ್ಲದೆ ಬ್ರಾಹ್ಮಣನಾಗಿದ್ದಂದೇ ವೀರಶೈವನಾಗಲು ಉತ್ಕಂಠಿತನಾದಾಗ ರಚಿಸಿದ ತನ್ನ ರಕ್ಷಾಶತಕದ ೭೭ ನೇ ಪದ್ಯದಲ್ಲಿ—'ಭಕ್ತನೇ ಸತ್ಕುಲಜನೆಂ' ದು ನಂಬಿ ಆದರಿಸುತ್ತಿರುವುದರಿಂದಲೂ, ತನ್ನ ವಂಶದವರನ್ನೂ ಬಹು ದಿವಸ ಬ್ರಾಹ್ಮಣರನ್ನಾಗಿ ಉಳಿಸಿರಲಾರನೆಂದರೆ, ಕನಿಷ್ಟಪಕ್ಷ ತಾನು ಲಿಂಗವಂತನಾದ ಒಂದು ವರ್ಷದೊಳಗೇ ಅವರನ್ನೆಲ್ಲಾ ವೀರಶೈವರನ್ನಾಗಿ ಮಾಡಿಸಿದ್ದಾನೆಂಬುದು ಯುಕ್ತವಾಗುತ್ತದೆ. ಆಗಲೇ ೧೪ ವರ್ಷದವನಾದ ರಾಘವಾಂಕನಿಗೆ ಹರಿಹರನು ಶಿವದೀಕ್ಷೆಯನ್ನು ಸ್ವತಃ ಕರುಣಿಸಿರುವನು. ಆದುದರಿಂದ ರಾಘವಾಂಕನು ಲಿಂಗವಂತನಾದ ಕಾಲವೆಂದರೆ ಕ್ರಿ. ಶ. ಸು. ೧೧೫೪ ಆಗುತ್ತದೆ. ಆ ತರುವಾಯ ತನ್ನ ಗುರುವಿನ ಬಳಿಯಲ್ಲಿ ಅವನು ಉಚ್ಚ ವಿದ್ಯಾವ್ಯಾಸಂಗಪರನಾಗಿರಬಹುದು.

## ೪ ಹರಿಶ್ಚಂದ್ರಕಾವ್ಯದ ರಚನೆಯು— ಕ್ರಿ. ಶ. ಸು. ೧೧೭೧ ರಲ್ಲಿ

ರಾಘವಾಂಕನ ಮೊತ್ತಮೊದಲಿನ ಕೃತಿಯೆನಿಸುವ ಹರಿಶ್ಚಂದ್ರ ಕಾವ್ಯವು, ಕ್ರಿ. ಶ. ಸು. ೧೧೭೧ ರಲ್ಲಿ ರಚಿತವಾಗಿದೆಯೆನ್ನಲು ಇಲ್ಲೊಂದು

ಕಾರಣವನ್ನು ತೋರಿಸಲಾಗುವುದು: ಹರಿಹರದೇವನು ಕ್ರಿ. ಶ. ೧೧೭೦ ರೊಳಗೆ ಬಸವರಾಜದೇವರ ರಗಳೆಯನ್ನು ರಚಿಸಿರುವುದಾಗಿ ಈಗ ನಿಶ್ಚಯಿಸಿದೆಯಷ್ಟೆ! ಅದರ ೯ ನೆಯ ಸ್ಥಲದಲ್ಲಿ ಬಸವಣ್ಣನವರ ದಾನಗುಣವನ್ನು ಬಣ್ಣಿಸುವಾಗ—

ಎಲೆ ಬಸವ ನಿನ್ನ ದಾನೋ-
ಜ್ಜ್ವಲಜಳಧಾರೆಗಳೊಳದ್ದು ವೈಗರೆದು ಕರಂ
ಬಲವಳಿದು ಕುಂದಿಸೆಡೆದರ್
ಬಲಿ ಶಿಬಿ ಜೀಮೂತವಾಹನಂ ಕರ್ಣರ್ಕಳ್ ॥ ೧ ॥
ಗುರುಬಸವ ನಿನ್ನ ಕೋಡಿಂ
ಸುರಭಿ ಕರಂ ಮೂಗುವಟ್ಟುದದು ಕಲ್ತಾಯ್ತಾ-
ಪರುಷಂ ಮರನಾದುದು ಸುರ-
ತರು ಚಿಂತೆಯ ಸಾರ್ದುದಮುಮು ಚಿಂತಾರತ್ನಂ ॥ ೨ ॥

ಎಂದು ವರ್ಣಿಸಿರುವ ಈ ಎರಡು ಶ್ಲೋಕಗಳೊಳಗೆ, ವಿಶೇಷವಾಗಿ ಎರಡನೆಯದರಲ್ಲಿರುವ ಸಮಗ್ರ ಭಾವವನ್ನು ಗ್ರಹಿಸಿಕೊಂಡು, ಈ ಕೆಳಗೆ ತೋರಿಸುವ ಹರಿಶ್ಚಂದ್ರ ಕಾವ್ಯದ ಪದ್ಯವನ್ನು ರಚಿಸಿರುವುದು, ತನ್ನ ಗುರುದೇವನಾದ ಹರಿಹರನ ಬಳಿಯಿರುವ ರಾಘವಾಂಕನಿಗೆ ಒಪ್ಪುತ್ತದೆ.

ಧರೆಯೊಳು ಹರಿಶ್ಚಂದ್ರ ಭೂವರಂ ತನ್ನ ಸಾ-
ರ್ದರ ಬೇಡಿದರ ಬಯಸಿದರ ಸೋಂಕಿದರ ಬೆರಸಿ-
ದರನು ತನ್ನಂತೆ ಮಾಳ್ಪುನ್ನತಿಕೆಯನು ಕಂಡು ನಾಚಿ ಸಿಗ್ಗಾಗಿ ಸೆಡೆದು।
ಮರನಾಯ್ತು ಚಂದನಂ ಸ್ವರ್ಗಸ್ಥವಾಯ್ತು ಸುರ-
ತರು ಮೂಗುವಟ್ಟುದಮರರಧೇನು ಕಲ್ಲಾಯ್ತು-
ಪರುಷ ಕಟ್ಟನೆ ಕರಗಿತೆನೆಸಿದ್ಧರಸವಂದು ಮೊದಲಾಗಿ ಮೂಜಗದೊಳು॥
[ಹ. ಕಾವ್ಯ. ೧ ೪೩]

ಈ ಪದ್ಯದಲ್ಲಿ ಹರಿಹರನ ಪದ್ಯದ ಭಾವವಿಷ್ಟೆಯಲ್ಲ, ಪದ್ಯಗಳಲ್ಲಿ ಕಂಡುಬರುವ ಶಬ್ದಗಳು ಸುರಭಿ [ಅಮರರಧೇನು] ಕರಂ ಮೂಗುವಟ್ಟುದು,— ಕಲ್ಲಾಯ್ತಾ ಪರುಷಂ,— ಬಲವಳಿದು ಕುಂದಿ ಸೆಡೆದರ್ ಇತ್ಯಾದಿ ಹರಿಹರನ ವಾಕ್ಯಗಳೂ, ಮತ್ತು ಮೂಗುವಟ್ಟುದು+ಅಮರರಧೇನು,— ಕಲ್ಲಾಯ್ತು ಪರುಷ,— ನಾಚಿ ಸಿಗ್ಗಾಗಿ ಸೆಡೆದರ್, ಎಂಬ ಹರಿಶ್ಚಂದ್ರ ಕಾವ್ಯದ ರಾಘವಾಂಕನ ವಾಕ್ಯಗಳಲ್ಲಿಯ ಪದಗಳೂ, ಪ್ರಾಯಃ

ತತ್ಸಮವಾಗಿಯೇ ಇವೆ. ಈ ಹೋಲಿಕೆಯಿಂದ, ಬಸವರಾಜದೇವರ ರಗಳೆಯ (೧೧೭೦) ತರುವಾಯ [ಆಗ ೩೦ ವರ್ಷ ವಯಸ್ಸಿನಲ್ಲಿದ್ದ] ರಾಘವಾಂಕನಿಂದ ಆಗಲೆ ಈ ಹರಿಶ್ಚಂದ್ರ ಕಾವ್ಯವು ರಚಿಸಲ್ಪಟ್ಟಿತೆಂಬುದು ಉಚಿತವಾಗುತ್ತದೆ. ಎಂದರೆ ಹರಿಶ್ಚಂದ್ರ ಗಾವ್ಯದ ರಚನಾ ಕಾಲವು ಕ್ರಿ. ಶ. ಸು. ೧೧೭೧ ಆಗುವುದಲ್ಲದೆ, ಆಗ ರಾಘವಾಂಕನ ವಯಸ್ಸು ೩೧ ಆಗುತ್ತದೆ.

## ೫ ಹರಿಹರ, ರಾಘವಾಂಕರ ಕಾವ್ಯಗಳಲ್ಲಿ ಬಸವೇಶ್ವರನ ಸ್ತುತಿಯಿರಬೇಕೆಂಬುದು, ಅವರೀರ್ವರಿಗೂ ಸಂಬಂಧ ಪಟ್ಟಿಲ್ಲ.

ಹರಿಹರ ಕವಿಯು ಪಂಪಾ ಶತಕದಲ್ಲಿ ಮಾತ್ರ ಅನೇಕ ಶರಣರನ್ನು ಸ್ಮರಿಸಿದ್ದುದರಿಂದ, ಬಸವಣ್ಣನವರನ್ನು ಸ್ಮರಿಸಬಹುದಾಗಿತ್ತೆನ್ನುವುದಾದರೆ, ಆ ಶತಕವಾಗಲೇ ಕ್ರಿ. ಶ. ೧೧೫೩ ರ ಅಂತ್ಯದಲ್ಲೇ ರಚಿತವಾಗಿರುವ ಪ್ರಯುಕ್ತ, ಅಲ್ಲಿ ಬಸವಣ್ಣನವರ ನೆನಹು ಇಲ್ಲವೆಂಬುದು ಸರಿಯಷ್ಟೆ! ಗಿರಿಜಾಕಲ್ಯಾಣ ಕಾವ್ಯವೂ ೧೧೫೬ ರೊಳಗೆ ಸಮಾಪ್ತವಾಗಿತ್ತೆಂದು ನಿರ್ಣಯಿಸಿದೆ. ಇದಂತೂ ಸಮ. ಆದರೆ ಬಸವಣ್ಣನವರು ಐಕ್ಯವಾದ ಬಳಿಕ ಬಸವರಾಜದೇವರ ರಗಳೆಯು ರಚಿತವಾದ ಮೇಲೆಯೇ ಹರಿಶ್ಚಂದ್ರ ಕಾವ್ಯ (೧೧೭೧) ಮೊದಲಾದ ಇನ್ನುಳಿದ ಕಾವ್ಯಗಳನ್ನು ರಾಘವಾಂಕನು ರಚಿಸಿದನಲ್ಲವೇ? ಇಂತಾದರೆ ಆ ಕಾವ್ಯಗಳೊಳಗೆ ಈ ಬಸವಣ್ಣನವರ ಸ್ತುತಿಪದ್ಯವೇಕಿಲ್ಲ? ಎಂದು ಒಡನೇ ಕೆಲವರ ಪ್ರಶ್ನೆ. ಪ್ರಶ್ನೆಯ ಮೇಲಿಂದಲೇ, ರಾಘವಾಂಕನು (ಹರಿಹರನೂ) ಇನ್ನೂ ಬ್ರಾಹ್ಮಣನಿದ್ದನೆಂದು ಹಲವರ ಊಹೆ, ಅಲ್ಲಲ್ಲ— ನಿರ್ಣಯವೆಂದರೂ ಸರಿಯೆ.

ಆದರೆ ಇದಕ್ಕೆ ನಮ್ಮ ಖಂಡಿತವಾದ ಅಭಿಪ್ರಾಯವಿಂತು—

ಶ್ರೀ ಬಸವೇಶ್ವರನನ್ನು ಗ್ರಂಥದ ಆದಿಪದ್ಯಗಳಲ್ಲಿ ಸ್ತುತಿಸುವ ನಿಯಮವು [ಪದ್ಧತಿಯು] ತೆಲಗು ಬಸವಪುರಾಣದ ಸೋಮನಾಥನಿಂದ ಹುಟ್ಟಿ, ಕನ್ನಡದ ಭೀಮಕವಿಯ ಬಸವಪುರಾಣದಲ್ಲಿ ಬೆಳೆದು, ಉಳಿದ ವೀರಶೈವ ಕವಿಗಳ ಕಾವ್ಯದಲ್ಲಿ ಸುಳಿದು ಬಲವಾಗುತ್ತ ಬಂದಿದೆ. ಒಟ್ಟು ತೆಲಗು ಬಸವಪುರಾಣಕಾರನಿಂದ ಈ ನಿಯಮವು ಹುಟ್ಟಿದೆ, ಬೆಳೆದಿದೆ. ಅದಕ್ಕೂ ಮೊದಲಿನ ಹರಿಹರ, ರಾಘವಾಂಕರಿಂದಲ್ಲ. ಇಂತೆದುದರಿಂದೆ ಬಸವಣ್ಣನವರ ವಿಷಯದಲ್ಲಿ ಅವರಿಗೆ ಅನಾದಾರವಿತ್ತೆಂದಲ್ಲ; ಸರ್ವೋತ್ತರ ಆದರವಿತ್ತೆಂದು ಬಸವರಾಜದೇವರ ರಗಳೆಯಿಂದಲೇ ಗೊತ್ತಾಗು

ತ್ತದೆ. ಆದರೆ ವೀರಶೈವರ ಆದಿ ಕವಿಗಳಾದ ಅವರೀರ್ವರಿಗೆ, ಯಾರಾದರೂ ಇನ್ನೊಬ್ಬರು ಹಾಗೆ ಕಾವ್ಯದಲ್ಲಿ ಸ್ತುತಿಸಿರುವುದು ಕಾಣುವದಂತೂ ಅಸಂಭವವಾಗುತ್ತದೆ. ಇನ್ನು ಬಸವೇಶ್ವರನಿಗಿಂತಲೂ ಪೂರ್ವದ ಯಾವ ಶಿವಶರಣರನ್ನೂ ಗ್ರಂಥದ ಆದಿಯಲ್ಲಿ ಅವರು ಸ್ತುತಿಸಿಲ್ಲದುದರಿಂದ, ಯಾವುದೇ ಶಿವಶರಣರನ್ನು ಸ್ತುತಿಸಬೇಕೆಂಬುದು ಅವರ ಮನಸ್ಸಿನಲ್ಲಿಯೇ ಅಂಕುರಿಸಿಲ್ಲವೆಂಬುದು ಅವರ ಕಾವ್ಯಗಳಿಂದಲೇ ಗೊತ್ತಾಗುತ್ತಿದೆ. ಏಕೆಂದರೆ ರಾಘವಾಂಕನು ತನ್ನ ಸಿದ್ಧರಾಮ ಚಾರಿತ್ರದ (೮, ೯೫) ಪದ್ಯದಲ್ಲಿ— "ವೀರಜಗದೇವನಿಂ ಭೂಪ ಬಿಜ್ಜಳನಳಿದಂ" ಎಂದೂ, ಮತ್ತು ಅದೇ ಚಾರಿತ್ರದ (೯, ೩೮) ನೆಯ ಪದ್ಯದಲ್ಲಿ ಅಲ್ಲಮನು ಸೊನ್ನಲಾಪುರಕ್ಕೆ ಬಂದನೆಂದು ತಿಳಿಸುವಾಗ— "ಬಸವರಾಜನು (ನ?) ಜಾನಿಸುತೊಂದು ಜಂಗಮಾಕಾರವಿಡಿದಿಹ ಮುಕ್ತಾಂತ ನೋಡಬಂದನು ಸೊನ್ನಲಿಗಪುರಕೆ" ಎಂದೂ ಹೇಳಿರಬೇಕಾದರೆ, ಶ್ರೀ ಬಸವರಾಜಾದಿಗಳ ಜೀವನ ವಿಚಾರವು ರಾಘವಾಂಕನಿಗೆ ಚೆನ್ನಾಗಿ ಗೊತ್ತಿಲ್ಲವೆಂದೆನ್ನಲಾಗುವುದಿಲ್ಲ. ಹೀಗೆ ಹೇಳಿದ ಈ ಸಿದ್ಧರಾಮ ಚಾರಿತ್ರದಲ್ಲೇ ಬಸವೇಶ್ವರನ ಸ್ತುತಿಯಿಲ್ಲವಾದುದರಿಂದ ಇದಕ್ಕೆ ಈ ಮೇಲಿರುವ ನಮ್ಮ ಊಹೆಯೇ ಸತ್ಯವಾದ ಕಾರಣವಾಗುತ್ತದೆ; ಆದರೆ ಬಸವಣ್ಣನವರ ಚರಿತ್ರೆ ಗೊತ್ತಿಲ್ಲವೆಂಬುದಾಗಲಿ, ಅಥವಾ ರಾಘವಾಂಕನಾಗ ಬ್ರಾಹ್ಮಣನಾಗಿದ್ದನೆಂಬುದಾಗಲಿ ಒಪ್ಪಿತವಾಗುವುದಿಲ್ಲ. ಏಕೆಂದರೆ ರಾಘವಾಂಕನು ಹರಿಶ್ಚಂದ್ರ ಕಾವ್ಯವನ್ನು ಬರೆಯುವಾಗ್ಗೇ ಲಿಂಗವಂತನಾಗಿ ಆಗಲೇ ೧೮ ವರ್ಷಗಳು ಗತಿಸಿ ಬಿಟ್ಟಿದ್ದವು. ಆದುದರಿಂದಲೇ ಬಸವೇಶ್ವರನನ್ನು ಸ್ತುತಿಸ

ಟಿ. ೧. ಆದರೆ ಮ. ರಾ. ಗೋವಿಂದಪ್ಪೈಗಳವರು— 'ಬಸವರಾಜದೇವ ಮೊದಲಾದ ಆ ರಗಳೆಗಳೆಲ್ಲಾ ಮುಗಿಸಿದ ಮೇಲೇನೋ ರಾಘವಾಂಕನು ಲಿಂಗವಂತನಾಗಿರಬಹುದು.' ಎಂಬ ಮಾತು ಎಷ್ಟೂ ಒಪ್ಪಿತವಾಗುವುದಿಲ್ಲ. ಏಕೆಂದರೆ ಬಸವರಾಜದೇವರರಗಳೆ ಮೊದಲಾದವುಗಳನ್ನು ಬರೆಯುವಾಗ ಹರಿಹರನು ಮೊದಲೇ ವೀರಶೈವ ದೀಕ್ಷೆಯನ್ನು ಹೊಂದಿದ್ದನೆಂದು ಅದೇ ಲೇಖಕರೇ ಅದೇ ಲೇಖದಲ್ಲಿ ಒಪ್ಪಿದ್ದಾರೆ. ಅಷ್ಟೆಲ್ಲಾ ಕಾವ್ಯಗಳನ್ನು ಬರೆದು ಮುಗಿಸುವವರೆಗೂ ಆವೇಶವುಳ್ಳ ಭಕ್ತಕುಲತಿಲಕನಾದ ಹರಿಹರ ಕವಿರಾಜನು, ತನ್ನ ವಿದ್ಯಾರ್ಥಿಯಾದ, ಎಂದರೆ ತನ್ನ ಅಧೀನಕ್ಕೊಳಪಟ್ಟಿದ್ದೂ ಆಪ್ತಬಂಧುವೂ ಆಗಿದ್ದ ರಾಘವಾಂಕನನ್ನು, ಬ್ರಾಹ್ಮಣನನ್ನಾಗಿಯೇ ಉಳಿಸಿದ್ದನೆಂಬು ತೀರಾ ಅಸಂಬದ್ಧವಾಗುತ್ತದೆ.

ಬೇಕೆಂಬ ನಿಯಮವು ಹರಿಹರ, ರಾಘವಾಂಕರಿಗೆ ಮಾತ್ರ ಸಂಬಂಧ ಪಡುವುದಿಲ್ಲವೆನ್ನುತ್ತೇವೆ.

ಹರಿಹರ ರಾಘವಾಂಕರು ಮಾತ್ರ ಗ್ರಂಥದ ಆದಿಯಲ್ಲಿ ಶ್ರೀ ಶಿವನನ್ನೂ, ತಮ್ಮ ಗುರುಪುಂಗವರನ್ನೂ ನುತಿಸಿದ್ದಾರೆ. ಆ ಮುಂದೆ ಕಾಳಿದಾಸಾದಿಗಳು ಕೇವಲ ಶೈವರಿದ್ದು, ಹೆಸರಾಂತ ಕವಿಗಳೂ ಆಗಿರುವುದರಿಂದ ಅವರ ಕಾವ್ಯಗಳಲ್ಲಿಯ ಒಂದೋಂದು ಗುಣವು ತಮ್ಮ ಕಾವ್ಯದಲ್ಲಿ ನೆಲಿಸಲೆಂಬ ಉದ್ದಿಶ್ಯ, ತಾವೂ ಕವಿಗಳಾದುದರಿಂದ ಅವರನ್ನು ಸ್ಮರಿಸುವುದು ಸಹಜವಾಗಿದೆ. ರಾಘವಾಂಕನಂತೂ ಆ ಕವಿಗಳು— "ಮನವಚನಕಾಯದೊಳಗೊಮ್ಮೆಯುಂ ಭಾಳಲೋಚನನಲ್ಲದೆ ಪೊಗಳದ"ವರೆಂದು ಹೇಳಿ ಅವರ ಪದಯುಗಕ್ಕೆ ನುತಿಸೇ ಬಿಟ್ಟಿದ್ದಾನೆ. ಒಟ್ಟು ಕಾಳಿದಾಸಾದಿಗಳು ಕೇವಲ ಶೈವರಾಗಿ, ಕವಿಗಳೂ ಆಗಿದ್ದ ಪ್ರಯುಕ್ತ, ಕವಿತ್ವ ಮೋಹದಿಂದ ಅವರನ್ನು ಬಾಯ್ತುಂಬ ಬಂಣಿಸಿದ್ದಾರೆ. ಆದರೆ ಇದಕ್ಕೆ ಕೇವಲ ಶೈವರೆಂಬುದೇ ಕಾರಣವಲ್ಲ.

## ಈ ಕಾಳಿದಾಸಾದಿಗಳು ಕೇವಲ ಶೈವರೆನ್ನುವಲ್ಲಿ ಆಕ್ಷೇಪ.

ಈ ಲೇಖನದಲ್ಲಿ—ಕಾಳಿದಾಸಾದಿ ಕವಿಗಳು ಕೇವಲ ಶೈವರಿದ್ದರೇ? ಎಂಬ ವಾದ ವಿಚಾರವನೆತ್ತುವುದು, ವಿಷಯಾಂತರವಾಗುತ್ತದೆಂದು ವಾಚಕರೆನ್ನಬಹುದು. ಆದರೆ ಮ। ರಾ। ಗೋವಿಂದ ಪೈಗಳವರು ಹರಿಹರ ರಾಘವಾಂಕರ ಕಾಲ ವಿಚಾರವೆಂಬ ತಮ್ಮ ಲೇಖನದಲ್ಲೇ, ಈ ವಿಚಾರವನ್ನೆತ್ತಿ, ಬಸವೇಶ್ವರ, ಹರಿಹರ, ರಾಘವಾಂಕಾದಿಗಳು ಸ್ತುತಿಸುವ ಆ ಕಾಳಿದಾಸಾದಿ ಕವಿಗಳು ಕೇವಲ ಶೈವರಲ್ಲವೆಂದು ವ್ಯಕ್ತಮಾಡಿದ್ದಾರೆ. ಇದರಿಂದ, ಶಿವಭಕ್ತರಲ್ಲದವರ ಹೆಸರನ್ನೂ ಎತ್ತದ ಬಸವೇಶ್ವರಾದಿಗಳು ಮಿಶ್ರಪೂಜಕರಾದ ಆ ಕಾಳಿದಾಸಾದಿಗಳನ್ನು ಅದೆಂತು ಸ್ತುತಿಸಿದರು ? ಎಂಬ ಸಂಶಯವೊಂದು ಬರುತ್ತದೆ. ಇದುಕಾರಣ ಈ ವಿಚಾರವು ಇದೇ ಲೇಖನದಲ್ಲಿ ಚರ್ಚಿಸಲ್ಪಡತಕ್ಕುದೆಂದು ಇನ್ನುಮೇಲೆ ವಾಚಕರೇ ಅನುಮತಿಸಬಹುದು.

ಮ। ರಾ। ಗೋವಿಂದಪೈಯವರು, ಕಾಳಿದಾಸಾದಿಗಳು ಮಿಶ್ರಪೂಜಕರೆಂದು ಪ್ರಾಮಾಣ್ಯಕೊಟ್ಟು ವ್ಯಕ್ತಮಾಡಿರುವ ಅವರ ಬರಹವು ಈ ರೀತಿಯಿದೆ.

"ರಘುವಂಶದಲ್ಲಿ (೧೦, ೧೬—೩೨)

ನಮೋವಿಶ್ವಸೃಜೇ ಪೂರ್ವಂ ವಿಶ್ವಂ ತದನುಬಿಭ್ರತೇ ।
ಅಥ ವಿಶ್ವಸ್ಯಸಂಹರ್ತ್ರೇತುಭ್ಯಂ ತ್ರೇಧಾ ಸ್ಥಿತಾತ್ಮನೇ ॥೧೬॥

ಎಂದು ವಿಷ್ಣುವನ್ನು ಸ್ತುತಿಸಿದ ಕಾಲಿದಾಸನೂ

ಕೈಲಾಸೇಕೃತ್ತಿವಾಸಾವಿಹರತಿ ವಿರಹತ್ರಾಸದೇಹೋಢಕಾಂತಃ
ಶ್ರಾಂತಃ ಶೇತೇ ಮಹಾಹಾವಧಿ ಜಲಧಿವಿನಾಥಧದ್ಮನಾಪದ್ಮನಾಭಃ ।
ಯೋಗೋದ್ಯೋಗೈಕತಾನೋಗಮಯತಿ ಸಕಲಂ ವಾಸರಂಸ್ವಂ ಸ್ವಯಂಭೂ
ರ್ಭೂರಿತ್ರೈಲೋಕ್ಯಚಿಂತಾಭೃತಿ ಭುವನವಿಭೌ ಯತ್ರಭಾಸ್ವಾನ್ ಸವೋ
ವ್ಯಾತ್ ॥

ಎಂದು ಸೂರ್ಯಶತಕದಲ್ಲಿ (ಪದ್ಯ ೮೮; ೯೧; ೯೨; ೯೩; ೯೯) ಸೂರ್ಯನನ್ನು ಸ್ತುತಿಸಿದ ಮಯೂರನೂ ಕೇವಲ ಶೈವರೇ ಎಂದಾದರೂ ಹೇಳಲಾಗುವುದಿಲ್ಲ."

೬ —ಈ ಆಕ್ಷೇಪಕ್ಕೆ ನಮ್ಮ ವಿನಂತಿ.

ಆಕ್ಷೇಪಕರು ಮೇಲೆ ಉದಾಹರಿಸಿದ ರಘುವಂಶದ ಪದ್ಯದಲ್ಲಿ, ಕಾಳಿದಾಸನೇ ಸ್ವತಃ ವಿಷ್ಣುವನ್ನು ಸ್ತುತಿಸಲು ಹೊರಟಿಲ್ಲವೆಂಬುದು ಅದೇ ಪದ್ಯದಮೇಲಿರುವ 'ಪ್ರಣಿಪತ್ಯಸುರಾಸ್ತಸ್ಮೈ' ಎಂಬ ಪದ್ಯವನ್ನು ಓದಿಕೊಂಡರೆ ತಿಳಿಯುತ್ತದೆ. ಸ್ವಕಾರ್ಯಾರ್ಥಿಗಳಾಗಿ ಬಂದಿರುವಾ ದೇವತೆಗಳು ಹಾಗೆ ಸ್ತುತಿಸಿದರೆಂದು ರಾಮಾಯಣದಲ್ಲುಕ್ತವಾದ ಐತಿಹಾಸಿಕ ಸಂಗತಿಯನ್ನೇ ಕವಿಯಲ್ಲಿ ಹೇಳುತ್ತಾನೆ. ಹೀಗೆಯೇ ತಾರಕಾಸುರನಿಂದ ಪೀಡಿತರಾದ ಅದೇ ದೇವತೆಗಳು (ಕುಮಾರಸಂಭವ ೨, ೪-೧೬) ಮೇಲೆ ವಿಷ್ಣುವನ್ನು ಸ್ತುತಿಸಿದಂತೆಯೇ, ಬ್ರಹ್ಮನನ್ನೂ ಬಹು ಚೆನ್ನಾಗಿ ಕಾರ್ಯದಿಚ್ಛೆಗೆ ಸ್ತೋತ್ರ ಮಾಡಿದ್ದನ್ನು ಕಾಳಿದಾಸನು ವರ್ಣಿಸಿದ್ದಾನೆ. ಇದರಿಂದ ಕಾಳಿದಾಸನು ಚತುರ್ಮುಖನ ಉಪಾಸಕನೂ ಆಗಿದ್ದನೆಂದು ಸಮರ್ಥಿಸಲೇ? ಎಂದೂ ಸಾಧ್ಯವಿಲ್ಲ. ಏಕೆಂದರೆ ಭಾರತದ ಕವಿಸಮ್ರಾಟನಾದ ಕಾಳಿದಾಸನೂ ಕೂಡಾ ದೇವನಾರೆಂಬುದನ್ನು ನಿಶ್ಚಯಿಸಿಕೊಳ್ಳದೆ, ಗ್ರಾಮ್ಯಜನದಂತೆ ಹೀಗೆ ಕಂಡ ದೇವತೆಗಳಿಗೆಲ್ಲಾ ಕೈಮುಗಿಯುತ್ತಿದ್ದನೆಂದರೆ ಪರಿಹಾಸಕ್ಕೆ ಆಸ್ಪದವಾಗಬಹುದು. ಆದರೂ ನೈಜವಾಗಿದ್ದರೆ ಅದೂ ಒಪ್ಪಿತವಾಗಬಹುದಿತ್ತು.

ಹಿಂದೂ ದೇಶದವರಿಗೆ ಮಿಕ್ಕಿನ ಆರಾಧ್ಯದೇವತೆಗಳೆಂದರೆ:—ಹರಿ, ಹರರು. ಇವರಲ್ಲಿ ಕಾಳಿದಾಸನು ಯಾರಾದರೂ ಒಬ್ಬನ ಭಕ್ತನಾಗಿರಬೇಕು. ಇದನ್ನು ಆತನ ಪದ್ಯಗಳಿಂದಲೇ ಅರಿಯೋಣ.

ಕಾಳಿದಾಸನ ಪದ್ಯಗಳಲ್ಲಿರುವ 'ತತ್ತ್ವ' ಸಂಬಂಧವಾದ ರಹಸ್ಯವು ಮಾತ್ರ ಶಾಸ್ತ್ರವನ್ನನುಸರಿಸಿ ಬಹು ಗಂಭೀರವಾಗಿದ್ದು, ಅದು ಥಟ್ಟನೆ ನಿರ್ಧರಿಸಲು ಯಾವ ವ್ಯಕ್ತಿಗೂ ಹೊಳೆಯುವುದಿಲ್ಲ. ಅವನು ಮತಾಭಿಮಾನದವರ ವಾದವನ್ನು ಗ್ರಹಿಸುವ ಸಂಕುಚಿತ ಹೃದಯದ ಕವಿಯಲ್ಲ. ಶ್ರದ್ಧಾಬುದ್ಧಿಯಲ್ಲಿ ನಿಂತು ಸತ್ಯವನ್ನು ಕಾಳಿದಾಸನು ಬಹು ಚೆನ್ನಾಗಿ ಅನುಭವಮಾಡಿಕೊಂಡಿದ್ದಾನೆ. ಕುಮಾರಸಂಭವದಲ್ಲಿ (೭, ೪೪) ಸ್ವತಃ ಕಾಳಿದಾಸನೇ ಹರಿಹರ ಬ್ರಹ್ಮರ ವಿಷಯವಾಗಿ—

ಏಕೈವ ಮೂರ್ತಿರ್ಬಿಭಿದೇ ತ್ರಿಧಾಸಾ ಸಾಮಾನ್ಯ ಮೇಷಾಂ ಪ್ರಥಮಾವರತ್ವಂ ।
ವಿಷ್ಣೋರ್ಹರಸ್ತಸ್ಯ ಹರಿಃಕದಾಚಿದ್ವೇಧಾಸ್ತಯೋಸ್ತಾವಪಿ ಧಾತುರಾದ್ಯೌ ॥

ಎಂದರೆ—'ಹರಿಹರ ಬ್ರಹ್ಮರೊಳಗೆ ಜ್ಯೇಷ್ಠ ಕನಿಷ್ಠ ಭಾವವು, ಮೂವರೊಳಗೆ ಯಾವೊಬ್ಬರಿಗಾದರೂ, ಒಂದೊಂದು ಸಾರೆ ಪ್ರತ್ಯೇಕ ಸರ್ವಸಾಮಾನ್ಯದಿಂದ ಬರುತ್ತದೆ. ಏಕೆಂದರೆ ಅವರೆಲ್ಲಾ ಒಂದೇ ಮೂರ್ತಿಯಿಂದ ಹುಟ್ಟಿ ಭಿನ್ನರಾಗಿದ್ದಾರೆ' ಎಂದು ಸರ್ವಸಾಮಾನ್ಯವಾದ ಮೂಲತತ್ತ್ವ ಪ್ರಕಾರ ಹೇಳಿದ್ದಾನೆ. (ಈ ಅಭಿಪ್ರಾಯವು ವೀರಶೈವ ಶಾಸ್ತ್ರ (ಆಗಮ)ದಲ್ಲಿಯೂ ಉಂಟು.) ಆದರೂ ವಿಶೇಷ ವಿಧಾಯಕ ಶಾಸ್ತ್ರರೀತ್ಯಾ, ವ್ಯವಹಾರದಲ್ಲಿ—

ಹರಿರ್ಯಥೈಕಃ ಪುರುಷೋತ್ತಮಃ ಸ್ಮೃತೋ
ಮಹೇಶ್ವರಸ್ತ್ರ್ಯಂಬಕ ಏವ ನಾಪರಃ । (ರಘುವಂಶ. ೩)

ಎಂದು ದೇವೇಂದ್ರನ ಮುಖಾಂತರ ದೃಷ್ಟಾಂತಕ್ಕಾಗಿ ಸ್ವತಃ ಸೇರಿಸಿ [ಈ ದೃಷ್ಟಾಂತವು ಮೂಲ ಕಥೆಯೊಳಗಿಲ್ಲ] ಕಾಳಿದಾಸನೇ ಹೇಳಿದ್ದಾನೆ. ಈ ಪದ್ಯದ ಅರ್ಥವಿಂತು:—"ಹರಿಯೇ ಪುರುಷೋತ್ತಮ ಪದವಾಚ್ಯನು, ಶಿವನೇ ಮಹೇಶ್ವರ ಪದವಾಚ್ಯನು ಆಗುತ್ತಾರೆ; ಅನ್ಯರಲ್ಲ. ಎಂದು, ಮತ್ತು ಕುಮಾರಸಂಭವ ಕಾವ್ಯದ ಪದ್ಯದಲ್ಲಿ (೨ ೫೮)

ಸಹಿದೇವಃ ಪರಂಜ್ಯೋತಿಸ್ತಮಃಪಾರೇ ವ್ಯವಸ್ಥಿತಮ್ ।
ಪರಿಚ್ಛಿನ್ನಪ್ರಭಾವರ್ದ್ಧಿರ್ನಮಯಾ ನಚ ವಿಷ್ಣುನಾ ॥

[ತಾರಕನಿಂದ ಪೀಡಿತರಾಗಿ ಶರಣಾಗತರಾಗಿರುವ ಆ ದೇವತೆಗಳೆಲ್ಲರಿಗೆ ಬ್ರಹ್ಮನು ಈ ಪದ್ಯವನ್ನು ಹೇಳುತ್ತಾನೆ.] ಇದರ ಅರ್ಥ— "ಆ ನೀಲಲೋಹಿತ (ಶಿವ)ನು ತಮೋಮಯವಾದ ಅವಿದ್ಯೆಯನ್ನು ಮೀರಿ ಪರಂಜ್ಯೋತಿಯಾಗಿದ್ದಾನೆ,[೧] ಎಂದರೆ ಹೇಳಲಸದಳವಾದ ಪ್ರಕಾಶದಿಂದ ಇರುತಿಹನು. ಆದುದರಿಂದ (ನಾವೆಲ್ಲಾ ಅವನ-ಮಾಯಾ-ಅವಿದ್ಯಾಧೀನರಾದುದರಿಂದ, ಎಂದು ಭಾವ) ನನ್ನಿಂದಲಿರಲಿ, ವಿಷ್ಣುವಿನಿಂದಲೂ ಶುದ್ಧ ವಿದ್ಯಾಸ್ವರೂಪನಾದ ಆತನ ಮಹಿಮಾಸಂಪತ್ತು ತಿಳಿಯಲ್ಪಡುವುದಿಲ್ಲ." ಎಂದು ಬ್ರಹ್ಮನು ಹೇಳಿದನೆನ್ನುವಲ್ಲಿ ಕಾಳಿದಾಸನು, ಬ್ರಹ್ಮನಗಿಂತಲೂ ವಿಷ್ಣುವು ಶ್ರೇಷ್ಠತರನೆಂದು ಒಪ್ಪಿಕೊಂಡು, ಅವರೀರ್ವರಗಿಂತಲೂ ಶಿವನೇ ಶ್ರೇಷ್ಠತಮನೆಂದು ನಂಬಿದ್ದಾನೆ. ಅಂತೆಯೇ ಕಾಳಿದಾಸನು ತನ್ನ ಯಾವ ಕಾವ್ಯಗಳಲ್ಲಾಗಲಿ, ನಾಟಕಗಳಲ್ಲಾಗಲಿ, ನಾಂದೀಪದ್ಯದಲ್ಲಿ ಉಮಾಮಹೇಶ್ವರರ ಹೊರತು, ಉಳಿದ ದೇವತೆಗಳನ್ನು ಸ್ಪಷ್ಟವಾದ ಶ್ಲೇಷೆಯಿಂದಲಾದರೂ ಸ್ತುತಿಸಿಲ್ಲ. ಇವೆಲ್ಲ ಕಾರಣಗಳಿಂದ ಕಾಳಿದಾಸನು ಕೇವಲ ಶೈವನೆಂದೇ ಸಿದ್ಧವಾಗುತ್ತದೆ. ಅಂತೆಯೇ ಹರಿಹರ ಕವಿಯು—

ಅವರೊಳಗೆ ಸಜ್ಜನರ್ ಶಿವಭಕ್ತಿಕಾಮಿಗಳ್
ಶಿವಭಕ್ತರುತ್ತಮರ್ ಶಂಕರಪ್ರೇಮಿಗಳ್
ಎನಿಪಬಾಣಂ ಕಾಳಿದಾಸನುಂ......

(ಹರಿಹರನ ರಗಳೆಗಳು ಭಾಗ ೫ ಪುಟ ೧)

ಎಂದೂ ಮತ್ತು, ರಾಘವಾಂಕನು—

ಮನವಚನ ಕಾಯದೊಳಗೊಮ್ಮೆಯುಂ ಫಾಲಲೋ-,
ಚನನಲ್ಲದೆ ಪೊಗಳದ+ಉದ್ಭಟಯ್ಯನ ಮಯೂ-
ರನ ಕಾಳಿದಾಸನ ಹಲಾಯುಧನ ಕೇಶಿರಾಜನ ಮಲುಹಣನ ಬಾಣನ ।

---

ಟಿ. ೧. ಆದುದರಿಂದಲೇ 'ಶಿವ'ನೆಂಬುದು ಅವನ ಪ್ರಧಾನ ನಾಮವಾಗಿದ್ದು, ಉಳಿದ ನಾಮಗಳೆಲ್ಲ ಗೌಣವಾಗಿವೆ. ಶಿವ ಶಬ್ದವು—'ಉಶ'—ಕಾಂತೌ ಎಂಬ ಸಂಸ್ಕೃತ ಧಾತುವಿನಿಂದ ನಿಷ್ಪನ್ನವಾಗಿದೆ.

ವಿಸುತಭೋಜನ ಭಲ್ಲಟನ ಭಾರವಿಯ ಪದವ
ನೆನೆದು ಒಲಗೋಡು ತೊಡಗಿದೆಸೀ ಮಹಾಕೃತಿಯ
ನೆನಗೆ ನೆರವಾಗಿ ನಡಸುಗೆ ರಸಂಗುಡುಗೆ ತಿರ್ದುಗೆ ಸುನಿರ್ವಿಘ್ನದಿಂದ ॥
(ಹ. ಕಾವ್ಯ ೧, ೧೪)

ಎಂದೂ, ಅಲ್ಲದೆ ಬಸವೇಶ್ವರನು—

ಎನಗಾರು ಇಲ್ಲ, ಎನಗಾರು ಇಲ್ಲವೆಂಬರು
ಬಾಣನವ ನಾನು, ಮಯೂರನವ ನಾನು, ಕಾಳಿದಾಸನವ ನಾನು
ಕಕ್ಕಯ್ಯ ಪಿರಿಯಯ್ಯ, ಚಿಕ್ಕಯ್ಯ ಚೆನ್ನಯ್ಯ—
ಎತ್ತಿ ಮುದ್ದಾಡಿದರೆನ್ನ ಕೂಡಲಸಂಗಯ್ಯ.
(ಬ. ವ. ಹಳಕಟ್ಟಿಯವರ ಪ್ರತಿ ಪು. ೫೨ ವ. ೧೦೨)

ಎಂದು ಮಂತ್ರಾಗಿ ಸ್ತುತಿಸಬೇಕಾದರೆ ಅವರೆಲ್ಲಾ ಕೇವಲ ಶೈವರಿದ್ದ ರೆಂಬ ಔಚಿತ್ಯವಿಲ್ಲದಿಲ್ಲ. ಇದಲ್ಲದೆ ಕ್ರಿ. ಶ. ೧೨೮೦ ನೆಯ ಮರಡೀಪುರದ ಶಾಸನದಲ್ಲಿರುವ ಬಸವಂಣ ಸಿದ್ಧರಾಮ ದಾಸಿಮಯ್ಯ ಮೊದಲಾದ ಶಿವ ಭಕ್ತರ ಶ್ರೇಣಿಯಲ್ಲೇ ಬಾಣ ಮಯೂರ* ಕಾಳಿದಾಸರ ಹೆಸರುಗಳಿ

---

* ಟೀಪು:- ಮಯೂರ ಕವಿಯ ವಿಚಾರವು 'ಹರಿಹರನ ರಗಳೆಗಳು ಭಾಗ ೩'ರಲ್ಲಿರುವ ಬಾಣನ ರಗಳೆಯಲ್ಲಿ ಕೊಂಚ ಬಂದಿದೆ—ಕಂಧಾರ ಪಟ್ಟಣದ ನಂದ ರಾಜನ ಆಸ್ಥಾನದಲ್ಲಿದ್ದ ಮಯೂರನಿಗೆ ಚರ್ಮರೋಗವಿದ್ದು, ಅದನ್ನು ನಾಳೆಯ ಓಕುಳಿಯಾಟದಲ್ಲಿ ಆ ರಾಜನು ನೋಡುವನೆಂಬ ಚಿಂತೆಯಿಂದ ನೀರಿನಲ್ಲಿ ನಿಂತು ಸೂರ್ಯನನ್ನು, ಆ ಸೂರ್ಯಶತಕ ರೂಪದಿಂದ ಪ್ರಾರ್ಥಿಸಿ, ಒಲಿಸಿಕೊಂಡು ಅಂದ ವಾದ ಮೈಯನ್ನು ಪಡೆದನು. ಮರುದಿನ ನಂದರಾಜನು ಅದನ್ನು ಕಂಡು ಸಂತುಷ್ಟನಾಗಿ ಚರ್ಮರೋಗವಿತ್ತೆಂದು ಹೇಳಿದ ಬಾಣ ಕಾಳಿದಾಸಾದಿಗಳನ್ನು ಕರೆಸಿ ಕೇಳಲಾಗಿ, ಮೊದಲು ತನಗೆ ಚರ್ಮರೋಗವಿದ್ದುದು ನಿಜವೆಂದು ಮಯೂ ರನೇ ಒಪ್ಪಿಕೊಂಡು ಅದು ಹೋಗಿ ಅಂದವಾದ ಪರಿಯನ್ನೂ ಹೇಳಿದನು. ಬಾಣ ನಾಗ ಸೂರ್ಯನಾ ವರದಾನವನ್ನು ಹಂಗಿಸಿದನು. ನಂದರಾಜನು—ಅದೊಡೇನಿಂ ತಿದಂ ಮಾಳ್ಪರಾರ್? ವಾದಕ್ಕೆ ಸೂರ್ಯನಿಂ ಪಡೆವುದೊಂದು ಅರಿದು-ಎನಲು ನೃಪನ ಕರುಣಾತಿಶಯವುಳ್ಳ ಬಾಣನಾಗ—ಮುನ್ನುಳ್ಳುದಂ ಪಡೆದನಿಲ್ಲಿ ತಾಂ ಪೊಸತೇನು? ಬಿನ್ನಣಮದೇಕೆ ಮಿಗಿಲಂ ಪಡೆವೆನ್ ಅರಿದೇನು?—ಎಂಬ ಶಿವ ಭಕ್ತಿಯ ಆವೇಶದಲ್ಲಿ ತನ್ನ ಕೈಯೊಂದನ್ನು ಕಡಿಸಿಕೊಂಡು ಕೂಡಲೇ ಶಿವನಿಂದ ಮರಳಿ ಪಡೆದು, ಕೈಯಿಲ್ಲದವರ್ಗೆಯುಂ ಕೊಡಿಸಿದನು. ಇದನ್ನು ಕಂಡ ನಂದ ರಾಜನಾಗ ಕೌತುಕಪಟ್ಟು ಬಾಣಕವಿಯನ್ನು ಮೆರೆಯಿಸಿದನೆಂದು ಹೇಳಿದೆ. ಇದ ರಿಂದ ಬಳಿಕ ಮಯೂರನೂ ಕೂಡಾ ಶಿವಭಕ್ತಿಯನ್ನೇ ಕೈಕೊಂಡಿರಬೇಕು. ಅಲ್ಲದಿದ್ದರೆ ಅವನನ್ನು ಶಾಸನಾದಿಗಳಲ್ಲಿಯೂ ಶಿವಭಕ್ತಪುಂಗವರಲ್ಲಿ ಗಣಿಸುತ್ತಿ ದ್ದಿಲ್ಲ. ಬಸವೇಶ್ವರಾದಿಗಳೂ ಆತ್ಮೀಯತೆಯಿಂದ ಹೊಗಳುತಿದ್ದಿಲ್ಲ.

ರುತ್ತವೆಂದು ಆ ಆಕ್ಷೇಪಕರೇ ಅದೇ ಲೇಖನದ ೩೧೫[೫] ನೆ ಪುಟದಲ್ಲಿ ಹೇಳಿ ಶಿವಭಕ್ತರೆಂದು ಸ್ವತಃ ಬರೆದೂ ಒಪ್ಪಿಕೊಂಡಿದ್ದಾರೆ. ಇದರಿಂದಲೂ ಕಾಳಿದಾಸಾದಿಗಳು ಕೇವಲ ಶೈವರಿದ್ದರೆಂದು ದೃಢವಾಗುತ್ತದೆ. ಅಂತೆಯೇ ಹರಿಹರ, ಬಸವೇಶ್ವರ, ರಾಘವಾಂಕರೂ, ಇವರ ತರುವಾಯದ ವೀರಶೈವ ಕವಿಗಳೂ, ಕಾಳಿದಾಸ ಬಾಣ ಮಯೂರ ಮೊದಲಾದ ಸಂಸ್ಕೃತ ಕವಿಗಳನ್ನು ಸ್ತುತಿಸಿದ್ದಾರೆ.

## ೭ ಹರಿಶ್ಚಂದ್ರ ಕಾವ್ಯದಲ್ಲಿ ಕವಿಯ ಲಿಂಗವಂತಿಕೆ.

ರಾಘವಾಂಕನ ಕೃತಿಗಳೊಳಗೆ ಹರಿಶ್ಚಂದ್ರ ಕಾವ್ಯವೇ ಮೊದಲನೆಯದೆಂದು, ಅಲ್ಲಿಂದ ಇಲ್ಲಿಯ ವರೆಗೂ ವಿವಾದವಾಗದಂತಿದೆ. ರಾಘವಾಂಕನ ಆರು ಕಾವ್ಯಗಳಲ್ಲಿ ಹರಿಶ್ಚಂದ್ರ ಕಾವ್ಯ, ಸೋಮನಾಥ ಚಾರಿತ್ರ, ಸಿದ್ಧರಾಮ ಚಾರಿತ್ರ ಇವು ಮೂರು ಮಾತ್ರ ಈಗ ಅಚ್ಚಾಗಿವೆ. ಇವುಗಳಲ್ಲಿ ಕೊನೆಯವೆರಡು ಚಾರಿತ್ರಗಳು, ವೀರಶೈವರಾದ ಆದಯ್ಯ-ಸಿದ್ಧರಾಮರನ್ನು ಕುರಿತು ಬರೆಯಲ್ಪಟ್ಟವೆ. ಮತ್ತು ಅವುಗಳಲ್ಲಿರುವ ವಿಷಯ ನಿರೂಪಣೆಯಿಂದಲೂ ಅದು ಗೊತ್ತಾಗುತ್ತದೆಯಾದುದರಿಂದ, ಅದನು ಪುನಃ ಇಲ್ಲಿ ವಿವೇಚಿಸಬೇಕಾಗಿಲ್ಲ. ಆದರೂ ಈ ಸಿದ್ಧರಾಮಚಾರಿತ್ರದ ವಿಮರ್ಶೆಯುಳ್ಳ ಲೇಖನವೊಂದನ್ನು ಇನ್ನು ಮುಂದೆ ಪ್ರತ್ಯೇಕ ಕೊಡುವೆವು.

ಹರಿಶ್ಚಂದ್ರ ಕಾವ್ಯವು ಆ ಎರಡು ಚಾರಿತ್ರಗಳಂತೆ ವೀರಶೈವ ಮತಕ್ಕೆ ಎಷ್ಟೂ ಸಂಬಂಧವಾದುದಲ್ಲ. ಎಂದರೆ ಕೇವಲ ಶೈವಚರಿತ್ರೆಯಾಗಿದೆ. ಕಾರಣ ಈ ಕಾವ್ಯದಲ್ಲಿ ಅಷ್ಟಾವರಣದಲ್ಲಿಯ ಶಬ್ದಗಳು, ಭವಿ — ಭಕ್ತ ಇತ್ಯಾದಿ ಪದಗಳೂ ಬರಲು ಕಾರಣವಿಲ್ಲ. ಆದರೂ ಕವಿಯ ವಾಣಿಯಲ್ಲಿ ಅವು ಕೆಲವಡೆ ಸುಳಿದು ಮೂಡಿರುವುದನ್ನು ತೋರಿಸಿದರೆ, ರಾಘವಾಂಕನ ಲಿಂಗವಂತಿಕೆಯು ಹರಿಶ್ಚಂದ್ರ ಕಾವ್ಯದಲ್ಲೇ ವ್ಯಕ್ತವಾಗುವುದು.

ಗ್ರಂಥದ ಆದಿಯ ಮಂಗಳ ಪದ್ಯಗಳಲ್ಲಿ ಗುರುವಾದ ಹರಿಹರದೇವನನ್ನು ಸ್ತುತಿಸಿದ್ದಾನೆ. ಆ ಸ್ತುತಿಯು ಈ ರೀತಿಯಿದೆ.—

---

[೫]— ಶರಣಸಾಹಿತ್ಯ ಸಂಪುಟ ೨

ಆ ಮಹಾದೇವರುದರದೊಳು ಗುರುಭಕ್ತಿ ನಿ-
ಷ್ಕಾಮವರಿವಾಚಾರ ನೀತಿ ದಯೆ ಜಂಗಮ
ಪ್ರೇಮ ಶಮೆ ದಯೆ ಶಾಂತಿ ದಾಂತಿ ಸತ್ಯವುದಾರ ಸದ್ಭಕ್ತಿಯೇಕನಿಷ್ಠೆ।
ಸಾಮರ್ಥ್ಯವೆಲ್ಲಾ ಕಳಾಪ್ರೌಢಿ ಸದ್ಗುಣ
ಸ್ತೋಮವೆಲ್ಲಂ ನೆರೆದು ರೂಪಾದುದೆನಿಸುವ ಮ-
ಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿನೆಲಸಿಕೆ ನನ್ನ ಚಿತ್ತದೊಳಗೆ॥
(ಹ. ಕಾವ್ಯ ೧, ೧೨.)

ಈ ಪದ್ಯವು ಆತನ ಎಲ್ಲಾ ಕಾವ್ಯಗಳಲ್ಲಿಯೂ ಇದೆ. ಇದರಲ್ಲಿ, ಹರಿಹರನು ಜಂಗಮ ಪ್ರೇಮವುಳ್ಳವನಾಗಿದ್ದನೆಂದು, ರಾಘವಾಂಕನು ತನ್ನೀಮೊದಲಿನ ಕಾವ್ಯದಲ್ಲೇ ಬಂಣಿಸಬೇಕಾದರೆ, ರಾಘವಾಂಕನಾಗ ಲಿಂಗವಂತನಿರಲಿಲ್ಲವೆಂಬ ಮಾತು ಮೊದಲೇ ನಿಲ್ಲುವುದಿಲ್ಲ. ಮತ್ತು ಈ ಪದ್ಯವು ಕೇವಲ ವರ್ಣನಾತ್ಮವಾಗಿರದೆ, ಸತ್ಯವಾದ ಗುರುಭಕ್ತಿಯನ್ನು ವ್ಯಕ್ತಮಾಡುತ್ತಿದೆ. ಇಂತೆಂಬುದರಿಂದಲೇ ಆ ಮುಂದೆ ೧೫ ನೇ ಪದ್ಯದಲ್ಲಿ ತಾನು — 'ಹರೀಶ್ವರನ ವರಸುತ' ನೆಂದು ಹೇಳಿಕೊಂಡಿರುವುದೂ ಸಲ್ಲುತ್ತದೆ. (ಈ ವರಸುತ ಶಬ್ದದ ವಿಚಾರವನ್ನು ಮೊದಲೇ ಬರೆಯಲಾಗಿದೆ.) ಅದೇ ಪದ್ಯದಲ್ಲಿ—'ಕೃತಿಗೆ ಪಾಲಕರು ಶಿವಭಕ್ತರ್ಕಳು' ಎಂದು ನಿರ್ದೇಶಿಸಿದ್ದಾನೆ.

ಹರಿಶ್ಚಂದ್ರನು ಕಾಶೀಕ್ಷೇತ್ರವನ್ನು ಮುಟ್ಟಿದನು. ಆ ಕ್ಷೇತ್ರವನ್ನು ಪೊಗಳುವಾಗ ಕವಿಯು—

ಕುಡಿವ ಪಾದೋದಕಂ-ಪನ್ನೀರ ಪಾನವಾ
ದಡೆ, ಧರಿಸುವ ಪ್ರಸಾದಂ-ಸುಧಾಪಿಂಡವಾ
ದಡೆ, ಬಿಡುವರಾರೆನಿಪ್ಪಂತೆ, ಜನದಿಹಪರಕೆ ಸೊಗಸುಕಾಶೀಕ್ಷೇತ್ರವು॥
(ಹ. ಕಾ. ಸಂಗ್ರಹ ೭, ೧೫)

ಇಲ್ಲಿ ರಾಘವಾಂಕನು ವೀರಶೈವರ ಅಷ್ಟಾವರಣದೊಳಗಣ ಪಾದೋದಕ ಪ್ರಸಾದ ಶಬ್ದಗಳನ್ನು ನೀರು ಅನ್ನವೆಂಬ ಅರ್ಥದಲ್ಲಿಟ್ಟು ಆ ಪಾದೋದಕ ಪ್ರಸಾದಗಳಂತೆ ಕಾಶೀಕ್ಷೇತ್ರವಾದರೂ ಜನದಿಹಪರಕೆ ಸುಖದಾಯಕವೆನ್ನುತ್ತಾನೆ.

ಹರಿಶ್ಚಂದ್ರನು ಹೊಲೆಯ ವೀರಬಾಹುಕನ ಮನೆಯಲ್ಲಿ ದುಡಿವಂದು ಹರಿಶ್ಚಂದ್ರನಿಗೆ ವೀರಬಾಹುಕನೆಂದ ಮಾತು.

ಎಲವೊ ನೀ...ಮುನಿಮತೋಚಿತ ಶಿವಾರ್ಚಕನಾದಡೆ
ಹೊಲಸಿನಟ್ಟುಳಿಗೆ ಕೊಕ್ಕರಿಸದಿಹೆ ಮುನ್ನ ಭವಿ
ನಿಳಯದೊಳು ತಲೆ ಮುಟ್ಟಿ ದುಡಿದಗಾವದಿಯೈಸೆ ?

(ಹ. ಕಾ. ಸಂ. ೭, ೪೪)

ಇಲ್ಲಿ ವೀರಶೈವರು ಮಾತ್ರ ಇತರ ಮತೀಯರಿಗೆನ್ನುವ 'ಭವಿ' ಶಬ್ದವನ್ನು ಪ್ರಯೋಗಿಸಿದ್ದಾನೆ. ಮತ್ತು ಗ್ರಂಥದ ಕೊನೆಯಲ್ಲಿ—

ಅನೃತವರಿಯದ ಹೊಲೆಯನಂ ನೆನೆಯೆ ಪುಣ್ಯಮೆಂ
ದೆನೆ ಸೂರ್ಯಕುಲಜ ಕಲಿದಾನಿ ಸತ್ಯಂ ವಸಿ
ಷ್ಠನ ಶಿಷ್ಯನಧಿಕಶೈವಂ ಕಾಶಿಯೊಳ್ ಮೆರೆವ ವೇದ ಪ್ರಮಾಣ ಪುರುಷ ।
ಘನನೃಪ ಹರಿಶ್ಚಂದ್ರನೆಂದಡಾತನಂ ಪೊಗಳ್ದು
ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ದ-
ನನಪೇಕ್ಷೆಯಿಂದ ಕವಿ ರಾಘವಾಂಕಂ ಮಹಾಲಿಂಗ ಭಕ್ತರ ಭಕ್ತನು ॥

(ಹ. ಕಾ. ಸಂ. ೨೩)

ಇದರಲ್ಲಿ ಹರಿಶ್ಚಂದ್ರನು ಸೂರ್ಯಕುಲಜನೆಂದು ಹೇಳಿದುದರಿಂದ ಸಂಶಯಕ್ಕೆಡೆಯಾಗಬಹುದೆಂದು ತಿಳಿದು, ಆ ಮುಂದೆಯೇ ಅವನು 'ವಶಿಷ್ಠನ ಶಿಷ್ಯನಧಿಕಶೈವ'ನೆಂದು ಒತ್ತಿ ನಿರ್ದೇಶಿಸಿ, 'ಕವಿರಾಘವಾಂಕಂ ಮಹಾಲಿಂಗ ಭಕ್ತರ ಭಕ್ತನು' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಮಹಾಲಿಂಗ ಶಬ್ದವು ವಿಚಾರಾರ್ಹವಾಗಿದೆ. ವೀರಶೈವನಾದವನು ಶಿವಸಂಬಂಧವಾದ ಒಂದೊಂದು ನೇಮಗಳನ್ನು ಕೈಕೊಂಡಿದ್ದರೆ, ಆ ನೇಮಾನುಸಾರ ಮಹಾಲಿಂಗವೀರ, ಮಹಾಲಿಂಗಮೋಹಿ, ಮಹಾಲಿಂಗಭಕ್ತ ಇತ್ಯಾದಿ ಅಂಕಿತಗಳನ್ನು ಹೊಂದುವನೆಂದು ಆ ಆ ಲಕ್ಷಣಪೂರ್ವಕ ಸೂಕ್ಷ್ಮಾಗಮದಲ್ಲಿ ಹೇಳಲ್ಪಡುತ್ತಿದೆ.

ಮಹಾಲಿಂಗಭಕ್ತನ ಲಕ್ಷಣವಿಂತು —

ಸ ಮಹಾಲಿಂಗಭಕ್ತಃ ಸ್ಯಾದನ್ಯಭಕ್ತಿವಿವರ್ಜಿತಃ ।
ತ್ಯಜೇತ್ ಸಂಸರ್ಗಮನ್ಯೇಷಾಂ ಸಹವಾಸಾದಿಕಂ ತ್ಯಜೇತ್ ॥

(ಸೂಕ್ಷ್ಮಾಗಮ ಪಟಲ ೮, ಪದ್ಯ ೭೬)

ಈ ಪದ್ಯದ ಭಾವಃ- "ಶಿವನ ಹೊರತು ಅನ್ಯದೇವತೆಗಳಲ್ಲಿ ಭಕ್ತಿಯು ಳ್ಳವನಾಗದವನೇ ಮಹಾಲಿಂಗಭಕ್ತನೆನಿಸುತ್ತಾನೆ. ಅನ್ಯೇಷಾಂ ನಾವು ಮಹಾಲಿಂಗಭಕ್ತೇತರಾಣಾಂ ಎಂದಾಗುತ್ತದೆ. ಎಂದರೆ ಮಹಾಲಿಂಗ ಭಕ್ತನಾದವನು ಮಹಾಲಿಂಗಭಕ್ತರಾದವರ ಸಹವಾಸವನ್ನು ಮಾಡತ ಕ್ಕದು."

ಈ ಲಕ್ಷಣವೆಲ್ಲದು ರಾಘವಾಂಕನ ಈ ಕೆಳಗಿರುವ ಪದ್ಯದಲ್ಲಿದೆ.

ಎನಿತು ಸಿರಿ ಸಾರ್ವೊಡಂ ಸಾರಿ ಮಾಣ್ದೊಡೆ ನಿತ್ಯ
ವನು ಪಡೆವೊಡಂ ಸಾವೊಡಂ, ಮೆಚ್ಚಿ ಹಂಪೆಯರ
ಸನ ಪೊಗಳ್ವ ನಾಲಿಗೆಯೊಳನ್ಯದೈವವೆ ಭವಿಗಳಂ ಕೀರ್ತಿಸಿದೆನಾದೊಡೆ।
ಮನಸಿಜಾರಿಯ ಭಕ್ತನಲ್ಲ ತಾನೆನಿಪ ಬಿರು
ದಿನ ಕವಿಯೆನಿಪ್ಪ ಹಂಪೆಯ ರಾಘವಾಂಕನೊ
ಯ್ಯನೆ ಪೇಳ್ದನೆಂಬಾಗಳೀಕೃತಿಯುನಾವಸಜ್ಜನರು ಕೊಂಡಾಡದಿಹರು ॥
(ಹ. ಕಾ. ೧, ೩೨)

ಮತ್ತು ಈ ಪದ್ಯದಲ್ಲಿರುವ ಪ್ರತಿಜ್ಞೆಯು ವೀರಶೈವನಿಗೆ ಮಾತ್ರ ತಕ್ಕುದಾಗಿದೆಯಲ್ಲದೆ, ರಾಘವಾಂಕನ ಲಿಂಗವಂತಿಕೆಯು ಕಾಳಿದಾಸನ ಉಪಮಾನದಷ್ಟು ಸಹಜವಾಗಿ ಮನಂಬುಗುವಂತಿದೆ. ಅಥವಾ ತಿಳಿನೀ ರಿನೊಳಗಿರುವ ತೊಳಪ ವಸ್ತುವಿನಂತೆ ನಿಚ್ಚಳವಾಗಿ ಕಾಣುತ್ತಿದೆ.

ಇಂತು ರಾಘವಾಂಕನು ತನ್ನ ಮೊತ್ತಮೊದಲಿನ ಹರಿಶ್ಚಂದ್ರ ಕಾವ್ಯ ದಲ್ಲಿಯೇ ಲಿಂಗವಂತನಿದ್ದನೆಂಬುದು ಅತಿ ಸ್ಪಷ್ಟವಿರುವಾಗ "ಅವೆಲ್ಲಾ ಕಾವ್ಯಗಳನ್ನು ಬರೆದು ಮುಗಿಸಿದಮೇಲೇನೋ (ರಾಘವಾಂಕನು) ವೀರ ಶೈವನಾಗಿರಬೇಕು" ಎಂಬ ಆಕ್ಷೇಪಕರ ಅಭಿಪ್ರಾಯವು, ಎಷ್ಟೂ ಸಾಧುವೂ ಸತ್ಯವೂ ಆಗುವುದಿಲ್ಲವೆಂದು ಇದುವರೆಗಿನ ವಿಚಾರದೊಡನೆ ನಮ್ಮ ವಿನಂ ತಿಯಿದೆ.

ಸಾರಾಂಶವೆಂದರೆ ರಾಘವಾಂಕನು ಕ್ರಿ. ಶ. ಸು. ೧೧೪೦ ರಲ್ಲಿ ಬ್ರಾಹ್ಮಣ ಮತದಲ್ಲಿ ಹುಟ್ಟಿ, ೧೧೫೪ ರಲ್ಲಿ ವೀರಶೈವ ದೀಕ್ಷೆಯನ್ನು ಹೊಂದಿ ೧೧೭೧ ರಲ್ಲಿ ಹರಿಶ್ಚಂದ್ರ ಕಾವ್ಯವನ್ನು ಮೊದಲು ಬರೆದನೆಂಬೂ ಮತ್ತೂ ರಾಘ ವಾಂಕನು ನುತಿಸಿರುವ ಕಾಳಿದಾಸಾದಿ ಕವಿಗಳು ಕೇವಲ ಶೈವರೆಂದೂ ಇದುವರೆಗಿನ ಲೇಖದ ಅಭಿಪ್ರಾಯವಾಗಿದೆ. ಆ ಮುಂದೆ ರಾಘವಾಂಕನು

ಉಳಿದ ತನ್ನ ಕಾವ್ಯಗಳನ್ನೆಲ್ಲಾ ಬರೆದು ಕ್ರಿ. ಶ. ಸು. ೧೧೯೦ ರೊಳಗೇ ಬೇಲೂರಿನಲ್ಲಿ ಶಿವೈಕ್ಯನಾದನು. ಒಟ್ಟು ರಾಘವಾಂಕನು ಕ್ರಿ. ಶ. ಸು. ೧೧೪೦ ರಿಂದ ೧೧೯೦ ರವರೆಗೆಂದರೆ, ೫೦ ವರ್ಷ ಜೀವಿಸಿದ್ದನೆಂದು ಹೇಳುತ್ತೇವೆ. ಇನ್ನೊಂದು ವಿಷಯವನ್ನು ಹೇಳದೆ ಈ ಲೇಖನವನ್ನು ಮುಗಿಸಲಾಗದು.

## ೮ ಹರಿಹರ ಕವಿಯ ನಾಮದ ನಿರ್ವಚನ.

ಹರಿಹರ ಕವಿಯ 'ಹರಿಹರ' ಎಂಬ ನಾಮವು ಹರಿ, ಹರರ ಸಮತ್ವವನ್ನು ಸೂಚಿಸುತ್ತದೆಂದು ನಮ್ಮ ಮ। ರಾ। ಗೋವಿಂದಪೈಗಳವರೂ ಇನ್ನೂ ಕೆಲವರು ಗ್ರಹಿಸಿಕೊಂಡಿರುವುದು ಆ ಹರಿಹರದೇವಕವಿಯ ಈ ಮುಂದಿನ ಪಂಪಾಶತಕದ ಪದ್ಯದಿಂದಲೇ ತಪ್ಪಾಗುತ್ತದೆ.

ಹರಿನಯ ನಾರ್ಚಿತಾಂಘ್ರಿಯುಗಳಂ ಹರಿದೇಹನಿಳಾಯ ಭೂಷಣಂ
ಹರಿಹರನೆಂದು ನಿನ್ನ ನಿಜಕೀರ್ತನೆಯಂ ಶರಣಾಳಿಕೂಡಿ ಡಂ- ।
ಗುರಿಸುತ್ತೆ ಸತ್ಯಮಂ ನುಡಿಯೆ ಸೇರದ ಶಾಪಹತರ್ಗೆ ನಿಂದೆಯಂ
ತಿರೆ ಸಲ್ಲುತಿರ್ಪುದಿಂತಿವರ ಪಾಪಮಿದಚ್ಚರಿ ಹಂಪೆಯಾಳ್ದನೇ ॥
(ಪಂ. ಶ. ಪದ್ಯ ೯೫)

ಇದರ ವಿವರಣೆಃ— ಇದರಮೇಲಿನ ೯೪ ನೆ ಪದ್ಯವನ್ನೂ ಆ ಪಂಪಾಶತಕದಲ್ಲೇ ನೋಡಿಕೊಳ್ಳಬೇಕೆಂದು ವಿಸ್ತಾರಭಯದಿಂದ ಸೂಚಿಸುತ್ತೇನೆ. ಹರಿಂ=ಎಂದರೆ ನೃಸಿಂಹಾದ್ಯವತಾರಗಳನ್ನು ತಾಳಿದ ವಿಷ್ಣುವನ್ನು ಹರತೀತಿ=ಎಂದರೆ ಶರಭಾದಿ ರೂಪಿನಿಂದ ಶಿವನು ನಾಶಗೊಳಿಸುತ್ತಾನೆಂಬುದಾಗಿ—"ಹರಿಹರ" ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಕಾರಣ ಹರಿಹರನೆಂದರೆ ಶರಭ ಮೂರ್ತಿ — ಭಿಕ್ಷಾಟನ ಮೂರ್ತಿ— ಇತ್ಯಾದಿ ಶಿವದೇವತಾಕವಾದ ಅರ್ಥವೇ ಆಗುತ್ತದೆಂದು ಹರಿಹರಕವಿಯ ಅಭಿಪ್ರಾಯ. ಆದುದರಿಂದಲೇ ಚಿಕ್ಕನಂಜೇಶಕವಿಯು ತನ್ನ ರಾಘವಾಂಕ ಚಾರಿತ್ರದಲ್ಲಿ ಹರಿಹರ ಕವಿಯನ್ನು ವರ್ಣಿಸುವಾಗ—

......ಮಾದರಸರಿಂದ ಸು-
ಜ್ಞಾನ ದೀಕ್ಷೆಯ ಪಡೆದು "ಹರಿಹರ ಸುರುದ್ರಾಭಿ-
ಧಾನದಿಂ" ಶ್ರೀವಿರೂಪಾಕ್ಷನಂ ಮನವಚನಕಾಯದಿಂ
ಭಜಿಸುತಿರ್ದಂ ॥
(ರಾ. ಚಾ. ಸಂಧಿ ೧೪, ೪೬)

ಎಂದಿರುವಲ್ಲಿ ಹರಿಹರ ಎಂಬುದು ರುದ್ರನ ಸುಂದರ ನಾಮವೆಂದು ಹೇಳಿದ್ದಾನೆ. ಹರಿಹರದೇವನೂ ಈ ಪದ್ಯದಲ್ಲಿ ಹೇಳುವುದೇನಂದರೆ:— ಹರಿಹರನೆಂಬ ಶಬ್ದವು ಶಿವನ ನಿಜಕೀರ್ತನೆಯದಾಗಿದೆ. ಇದನ್ನು ಸೈರಿಸದವರು ಶಾಪಹತರು ಇಷ್ಟೆಯಲ್ಲ ವ್ಯರ್ಥವಾಗಿ ನಿಂದೆಯನ್ನು ಮಾಡುವವರಾಗುತ್ತಾರೆ. (ಪುಸಿಯಂ ಪೇಳ್ವುದೆ ನಿಂದೆಯೆಂದು ಇದೇ ಪದ್ಯ ಮುಂದೆ ಹರಿಹರ ಕವಿಯೇ ಆ ಲಕ್ಷಣವನ್ನು ಮಾಡಿದ್ದಾನೆ.) ಆ ಶಿವನ ಇಂತಹ ನಿಂದೆಯಿಂದ ಅವರು ವ್ಯರ್ಥವಾಗಿ ಪರಮಕಷ್ಟಕ್ಕೆ ಗುರಿಯಾಗುತ್ತಾರಲ್ಲಾ ಎಂದು ತಿಳಿದ ಹರಿಹರಕವಿಯು ಅವರಲ್ಲಿ ಪರಮ ದಯಾರ್ದ್ರಹೃದಯನಾಗಿ ಪರಮಾತ್ಮನನ್ನು ಕುರಿತು—"ಎಲೆ ಹಂಪೆಯಾಳ್ದನೆ! ಇಂತಾಡುವುದು ಅವರ 'ಪಾಪವಿದು ಅಚ್ಚರಿ'. ಕಾರಣ ನೀನು ಮಾತ್ರ ಅವರನ್ನು ಸಲಹು" ಎಂದು ಆ ತನ್ನ ದೇವನಲ್ಲಿರುವ ಸಲುಗೆಯಿಂದ ಬಿನ್ನವಿಸಿಕೊಂಡಿದ್ದಾನೆ. ಒಟ್ಟು ಹರಿಹರ ಎಂಬ ಶಬ್ದವು ಶಿವನ ನಾಮವಾಗಿದೆ.

---

# ವೀರಶಂಕರದಾಸಿಮಯ್ಯಗಳ ವಚನ. ೧.

(ಸಂಗ್ರಾಹಕ:— ವೆ|| ಪಂಡಿತ. ಸ. ಹಾ. ಶಿವಮೂರ್ತಿ.)

---

## ಸಂಗ್ರಾಹಕನ ಮುನ್ನುಡಿ.

[೯೪೨ ವಚನಗಳುಳ್ಳ "ಸಕಲ ಪುರಾತನರ ವಚನಗಳು" ಎಂಬ ಒಂದು ತಾಡಓಲೆಯ ಕಟ್ಟು-ಶ್ರೀ ಶಿವಯೋಗಮಂದಿರ [ಬದಾಮಿ ತಾಲೂಕ] ಸಂಸ್ಥೆಯ ಲೈಬ್ರರಿಯಲ್ಲಿ ನನಗೆ ದೊರೆಯಿತು. ಇದರಲ್ಲಿ ಹೆಚ್ಚುಕಡಿಮೆ ಸುಮಾರು ೫೦-೬೦ ಕ್ಕಿಂತಲೂ ಹೆಚ್ಚು ಜನ ವಚನಕಾರರ ವಿವಿಧ ವಚನಗಳು, ಅವರವರ ನಾಮನಿರ್ದೇಶಪೂರ್ವಕ ಪ್ರಾಯಃ ಶುದ್ಧವಾಗಿ ಬರೆಯಲ್ಪಟವೆ. ಇದರ ೩೭ನೇ ಪುಟದ ಹಿಮ್ಮೈಯ್ಯಲ್ಲಿ ವೀರಶಂಕರದಾಸಿಮಯ್ಯಗಳ ವಚನವೆಂದು ಹೇಳಿ, ಒಂದೇ ಒಂದು ಬಲು ಉದ್ದವಾದ ವಚನವು ಬರೆಯಲ್ಪಟ್ಟಿದೆ.

ಈ ಶಂಕರದಾಸಿಮಯ್ಯಗಳೂ, ಜೇಡರದಾಸಿಮಯ್ಯನೆಂಬ ನಾಮಾಂತರವುಳ್ಳ ದೇವರದಾಸಿಮಯ್ಯಗಳೂ, ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ೧ ನೇ ಜಯಸಿಂಹನ [ಕ್ರಿ. ಶ. ೧೦೦೮-೧೦೪೨] ಕಾಲದಲ್ಲಿದ್ದರೆಂಬುದು ಈಗ ನಿರ್ವಿವಾದದ ಸಂಗತಿಯಾಗಿದೆಯಷ್ಟೆ.

ಶಂಕರದಾಸಿಮಯ್ಯಗಳ[1] ಈ ಮುಂದೆ ಉದಾಹೃತವಾಗಿರುವ ವಚನವು, ಅಂದಿನ ವೀರಶೈವ ಮತ್ತು ಬ್ರಾಹ್ಮಣ ಮತಗಳಲ್ಲಿದ್ದ ಧಾರ್ಮಿಕ ನಡೆವಳಿಕೆಗಳನ್ನೂ, ಇನ್ನೂ ಕೆಲವು ಸಂಗತಿಗಳನ್ನೂ ನಿರ್ಧರಿಸಲು, ಐತಿಹಾಸಿಕ ಪಂಡಿತರಿಗೆ ಅತ್ಯುಪಯುಕ್ತವಾಗುತ್ತದೆಂದು ನನಗೆ ತೋರಿದ್ದುದರಿಂದ ಇದನ್ನು ಪ್ರಕಟನೆಗೆ ಕೊಡುವ ಮನ ಮಾಡಿರುತ್ತೇನೆ. ಶಂಕರ ದಾಸಿಮಯ್ಯಗಳ ವಚನಾಂಕಿತವಾದರೋ—'ಘನ ಗುರುಶಿವಲಿಂಗ ರಾಮನಾಥಾ'—ಎಂಬುದೆಂದು ಈ ವಚನದಿಂದ ತಿಳಿಯುತ್ತದೆ.

ಆದರೆ ಈ ವಚನಕಾರನ ಅಂಕಿತವು— ನಿಜಗುರು ಶಂಕರದೇವ—ಎಂದಿದ್ದಂತೆ ಕವಿಚರಿತೆ (೩-೩೬೧) ಯಲ್ಲಿ ತಿಳಿಸಿದ್ದಾರೆ. ಇದಕ್ಕೆ ಆಧಾರವಾದರೂ ಅವರಿಗೆ ರಾ॥ ಸಾ॥ ಹಳಕಟ್ಟಿಯವರಿಂದ ಪ್ರಕಟವಾಗಿರುವ ಶೂನ್ಯ ಸಂಪಾದನೆಯ ಪುಟ ೩೬೫ ರಲ್ಲಿರುವ ೨ ವಚನಗಳೇ ಆಗಿರಬಹುದೆಂದು ನನಗೆ ತೋರುತ್ತದೆ. ಆ ೨ ವಚನಗಳಾದರೋ, ಶಂಕರದಾಸಿಮಯ್ಯನು ಅಲ್ಲಮ ಪ್ರಭುಗಳನ್ನು ಸ್ತುತಿಸಿದನೆಂದು ಹೇಳುತ್ತಿವೆ. ಈ ಹೇಳಿಕೆಯೇ, ಆ ೨ ವಚನಗಳೂ ಶೂನ್ಯ ಸಂಪಾದನಾಕಾರರ ಸ್ವತಃ ಕೈವಾಡದವೆನ್ನಲು ಸಾಕಷ್ಟು ಪ್ರಮಾಣವಾಗುತ್ತಿದೆ. ಏಕೆಂದರೆ- ಅಲ್ಲಮ ಪ್ರಭುಗಳಿಗಿಂತಲೂ ಶಂಕರದಾಸಿಮಯ್ಯನು ಸುಮಾರು ೧೨೫ ವರುಷ ಮೊದಲಿಗನಾಗುತ್ತಾನೆ. ಹೀಗೆಯೆ ಅದೇ ಸಂಪಾದನೆಯ ಅದೇ ಪುಟದೊಳಗೆ, ಏಕಾಂತರಾಮಿ ತಂದೆಗಳು ಅಲ್ಲಮಪ್ರಭುಗಳನ್ನು ಸ್ತುತಿಸಿದರೆಂದು-ಏಕಾಂತವೀರಸೊಡ್ಡಳ-ಎಂಬ ಅಂಕಿತದಿಂದ ಎರಡು ವಚನಗಳನ್ನು ಸ್ವತಃ ರಚಿಸಿ ಸೇರಿಸಿದ್ದಾನೆ. ಆದರೆ ನಮಗೆ ದೊರೆತ ಎರಡು ಪ್ರತಿಗಳಲ್ಲಿಯೂ ಏಕಾಂತರಾಮಿ ತಂದೆಗಳ ವಚನವೆಂದು ಹೇಳಿ ೬ ವಚನಗಳು

---

೧ ಟಿ:— ಶಂಕರದಾಸಿಮಯ್ಯನು ಜನ್ಮತಃ ಬ್ರಾಹ್ಮಣನಾಗಿ ಗೋವಿಂದನೆಂಬ ನಾಮವುಳ್ಳವನಾಗಿದ್ದನು. ಶಿವದೀಕ್ಷೆಯಾದಬಳಿಕ ಶಂಕರದಾಸನೆಂಬ ಹೆಸರಾಯಿತು. [ಹರಿಹರನ ರಗಳೆಗಳು ೩ ಪಿ ಜಿ ಹಳಕಟ್ಟಿ.]

"ಎನ್ನಯ್ಯ ಚೆನ್ನರಾಮಾ" ಎಂಬ ಅಂಕಿತದಿಂದ ಬರೆಯಲ್ಪಟ್ಟಿವೆ. ಈ ಕಾರಣ ಶೂನ್ಯ ಸಂಪಾದನಾಕಾರರ ಮಾತನ್ನು ಪ್ರಮಾಣಿಸುವುದೇ ಆದರೆ ತೀರಾ ಅನುಚಿತವಾಗುತ್ತದೆ. ( ಈ ಶೂನ್ಯ ಸಂಪಾದನೆಯ ವಿಷಯವಾಗಿ ಪ್ರಾಯಃ ಇಂದಿನ ಎಲ್ಲಾ ಐತಿಹಾಸಿಕ ಪಂಡಿತರ ಅಭಿಪ್ರಾಯವು ಇದೇ ರೀತಿ ಇದೆ, ಎಂಬುದನ್ನು ವಾಚಕರು ಕೆಲವು ಪ್ರಮುಖ ಮಾಸಿಕ ಪತ್ರಿಕೆಗಳಲ್ಲೆಲ್ಲಾ ಓದಿ ಮನಗಂಡಿರಬಹುದು.)

ನಮಗೆ ದೊರೆತಿರುವ ಈ ತಾಡಓಲೆಯ ಪ್ರತಿಯಲ್ಲಿ ಯಾವ ವಚನಕಾರರ ಅಂಕಿತವೂ ಅಸ್ತವ್ಯಸ್ತವಾಗಿರುವುದಿಲ್ಲ. ಇದು ಕಾರಣ— ಘನ ಗುರು ಶಿವಲಿಂಗ ರಾಮನಾಥಾ— ಎಂಬುದೇ (ವೀರ) ಶಂಕರದಾಸಿಮಯ್ಯಗಳ ವಚನಾಂಕಿತವೆಂದು ನಿರ್ಧರಿಸಲಾಗುವದು.

ವಚನಗಳಲ್ಲಿ ಪ್ರಾಮಾಣ್ಯಕ್ಕಾಗಿ ಉದಾಹೃತವಾಗಿರುವ ಸಂಸ್ಕೃತ ಶ್ಲೋಕಗಳು, ಸಂಸ್ಕೃತ ಭಾಷೆಯನ್ನರಿಯದ ಕನ್ನಡದ ಬರವಣಿಗೆಗಾರರಿಂದ ಬರಬರುತ್ತ ರೂಪಾಂತರಗೊಂಡು ಅಶುದ್ಧಮಯವಾಗಿರುವುದು ವಚನಶಾಸ್ತ್ರಾಭ್ಯಾಸಿಗಳಿಗೆಲ್ಲಾ ಈಗ ಗೊತ್ತೇ ಇದೆ. ಈ ಸಾಮಾನ್ಯ ನೇಮಕ್ಕನುಸರಿಸಿ ಈ ಮುಂದಿರುವ ವಚನದಲ್ಲಿಯ ಕೆಲವು ಸಂಸ್ಕೃತ ಶ್ಲೋಕಗಳೂ ಅಶುದ್ಧಭರಿತವಾಗಿವೆ. ಆದರೂ ಮೊದಲು ಮೂಲ ಪ್ರತಿಯಲ್ಲಿದ್ದಂತೆಯೇ ಪ್ರಕಟಿಸಿ, ಇನ್ನೊಂದು ಬಾರಿಗೆ ಪರಿಶೋಧಿಸಿ ಪ್ರಕಟನೆ ಮಾಡುವುದೇ ಇಂದಿನ ಕಾಲಕ್ಕೆ ತಕ್ಕುದೆಂದು, ಅದೇ ಬಗೆಯಲ್ಲಿಯೇ ಬಿಡಲಾಗಿದೆ. ಈ ವಚನದಲ್ಲಿ ಕೆಲವು ಕಟುತರ ಶಬ್ದಗಳಿರಬಹುದು. ಅವು ಹಿಂದಿನ ಪರಿಸ್ಥಿತಿಯನ್ನು ತೋರಿಸುತ್ತವೆಯೇ ಹೊರ್ತು ಈಗಿನ ಕಾಲದಲ್ಲಿ ಅನ್ವಯಿಸುವದಿಲ್ಲೆಂದು ವಾಚಕರಿಗೆ ನಮ್ಮ ಸವಿನಯ ಅರಿಕೆ.

—ಸಂಗ್ರಾಹಕ.

## ವೀರಶಂಕರದಾಸಿಮಯ್ಯಗಳ ವಚನ.

೧

ಶಿವ ಶಿವಾ ದ್ವಿಜರೆಂಬ ಪಾತಕರು ನೀವು ಕೇಳಿರೋ! ನೀವು ಎಲ್ಲಾ, ಜಾತಿಗೂ ಮಿಗಿಲೆಂದು— ವರ್ಣಾನಾಂ ಬ್ರಾಹ್ಮಣೋಗುರು-ವೆಂದು ಬಳ್ಳಿಟ್ಟು ಬಾ(?)ಸ್ಕಳಗೆಡವುತ್ತಿಪ್ಪಿರಿ ನೋಡಾ. ಆದಿಬಿಂದೂದ್ಭವೇ ಬೀಜಂ-ಎಂಬ ಶ್ರುತಿಯಿಂ ತಿಳಿದು ನೋಡಲು, ಆದಿಯಲ್ಲಿ ನಿಮ್ಮ ಮಾತಾಪಿತರ ಕೀವು ರಕ್ತದ ಮಿಶ್ರದಿಂದ ನಿಮ್ಮ ಪಿಂಡವುದಯಿಸಿತ್ತು. ಆ ಕೀವು ರಕ್ತಕ್ಕೆ

ಆವ ಕುಲ ಹೇಳಿರೇ ? ಆದೂ ಅಲ್ಲದೆ ಪಿಂಡಪೊಂಭತ್ತುತಿಂಗಳು ಒಡ ಲೊಳಗೆ, ಕರುಳು ಮಲ ಮೂತ್ರ ಕೀವು ದುರ್ಗಂಧ ರಕ್ತ ಖಂಡ ಕಾಳಿಜ ಜಂತುಗಳೊಳಗೆ ಪಾಕುಳದೊಳಗಣ ಕ್ರಿಯೆಯಂತೆ ಹೊದಕುಳಿಯುಂ ಬಂದು ನಿವಾದ ಕುಲವ ಹೇಳಿರಿ ? ಆದೂ ಅಲ್ಲದೆ ಮೂತ್ರದ ಕುಳಿಯು ಹೊರವಡುವಾಗ, ಹೊಲೆಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ, ಹೊ. ಹುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ, ಹನ್ನೆರಡು ದಿನದಂದು ಪ್ರಾಯಶ್ಚಿತ್ತವ ನಿಕ್ಕಿಸಿಕೊಂಬಂದು ನೀವಾವ ಕುಲ ಹೇಳಿರಿ? ಮುಂಜಿಗಟ್ಟಿದ ಮುನ್ನ ಕೀಳು ಜಾತಿ, ಮುಂಜಿ ಗಟ್ಟಿದ ಬಳಿಕ ಮೇಲು ಜಾತಿಗಳು ಎಂಬ ಪಾತಕರು ನಿಮ್ಮ ನುಡಿಯು ಕೊರತೆಗೆ ನೀವು ಬಲು ನಾಚಬೇಡವೆ ? ನೀವು ನಾಚದಿದ್ದಡೆ ನಾ ನಿಮ್ಮ ಕುಲದ ಬೇರನೆತ್ತಿ ಕೆಳಗು ಮಾಡಿ ತೋರಿಹೆನು:— ನಾವು ಉತ್ತ ಮದ ಬ್ರಾಹ್ಮಣರೆಂಬ ನಿಮ್ಮ ದೇಹ ಬ್ರಾಹ್ಮವೋ ನಿಮ್ಮ ಪ್ರಾಣ ಬ್ರಹ್ಮವೊ ಆವುದು ? ಬ್ರಾಹ್ಮಣ್ಯ ಬಲ್ಲರೆ ಬಗುಳಿರಿ ? ಅರಿಯದಿದ್ದರೆ ಕೇಳು: ದೇಹ ಕುಲಜನೆಂದರೆ ಚರ್ಮಕ್ಕೆ ಕುಲವಿಲ್ಲ ಖಂಡಕ್ಕೆ ಕುಲವಿಲ್ಲ ಎಲುವಿಂಗೆ ಕುಲವಿಲ್ಲ ನರವಿಂಗೆ ಕುಲವಿಲ್ಲ ರಕ್ತಕ್ಕೆ ಕುಲವಿಲ್ಲ ಕೀವಿಂಗೆ ಕುಲವಿಲ್ಲ ಕರುಳಿಂಗೆ ಕುಲವಿಲ್ಲ ಮಲ ಮೂತ್ರಕೆಂತೂ ಕುಲವಿಲ್ಲ. ಒಡಲೆಂಬುದು ಅಪವಿತ್ರವಾಯಿತ್ತು. ಕುಲವೆಲ್ಲಿಯದೋ ಒಡಲಿಂಗೆ ? ಅವಂತಿರಲಿ. ನಿಮ್ಮ ಪ್ರಾಣಕ್ಕೆ ಕುಲವುಂಟೆಂದರೆ— ಪ್ರಾಣ ದಶವಾಯುವಾದ ಕಾರಣ ಆ ವಾಯು ಹಾರುವನಲ್ಲ. ಅದುವಲ್ಲದೆ ನಿಮ್ಮ ಒಡಲನಲಗಾಡಿಯಿರಿವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳು ಉತ್ತಮ ಕುಲ ವೆಂಬ ಅವು, ಮುನ್ನವೆ ಪಾಪಕಾರಿಗಳಾದ ಕಾರಣ ಅವಕ್ಕೆ ಕುಲವಿಲ್ಲ. ನಿಲ್ಲು ಮಾಣು, ನಿಮ್ಮೊಳಗಣ ಸಪ್ತ ವ್ಯಸನಂಗಳು ಉತ್ತಮ ಕುಲವೆಂಬ ಅವು, ಮುನ್ನವೆ ದುರ್ವ್ಯಸನಂಗಳಾದಕಾರಣ ಅವಕೆಂದೂ ಕುಲವಿಲ್ಲ. ನಿಲ್ಲು ಮಾಣು, ನಿಮ್ಮ ಅಷ್ಟಮದಂಗಳು ಉತ್ತಮ ಕುಲವೆಂಬ ಅವು, ನಿನ್ನ ಸುರೆಯು ಸವಿದ ಕೋಡಗದ ಹಾಂಗೆ ಮುಂದುಗಾಣಲಿಯ್ಯವಾದ ಕಾರಣ ಅವಕೆ ಕುಲವಿಲ್ಲ- ನಿಲ್ಲು ಬಗುಳದಿರಿ, ಇನ್ನು ಒಡಲ ತಾಪತ್ರ ಯಂಗಳು ಉತ್ತಮ ಕುಲವೆಂಬಡೆ ಅವು ನಿಮ್ಮ ಉರಿದುರಿದು ಸುಡುವ ಒಡಲಗಿಚ್ಚುಗಳು. ಕುಲವಿಲ್ಲ ನಿಲ್ಲುಮಾಣು. ನಿಮ್ಮೊಡಲ ಮುಚ್ಚಿದ ಮಲಮೂತ್ರಂಗಳಿಗೆ ಕುಲವುಂಟೇ ? ಅವು ಆರಿಕೆಯ ಮಲಮೂತ್ರಗಳಾದ ಕಾರಣ ಅವಕ್ಕೆ ಕುಲವಿಲ್ಲ, ನಿಲ್ಲುಮಾಣು. ಇನ್ನು ಉಳಿದ ಅಂತಃಕರ

ಣಂಗಳಿಗೆ ಉತ್ತಮ ಕುಲವೆಂಬಿರಿ ಅವ ನೀವು ಕಾಣಿರಿ. ನಿಮ್ಮ ಮನವು ಕಾಣದು. ಅದು ಕಾರಣ ಬಯಲ ಭ್ರಮೆಗೆ ಉತ್ತಮಕುಲವುಂಟೇ? ಇಲ್ಲ ನಿಲ್ಲು ಮಾಣು. ಇಂತು ನಿಮ್ಮ ಪಂಚಭೂತ ಸಪ್ತಧಾತು ಪಂಚೇಂದ್ರಿಯಂಗಳು ಉತ್ತಮಕುಲವೆಂಬ ಅವು, ಎಲ್ಲಾ ಜೀವರಾಶಿಗೂ ನಿಮಗೂ ಒಂದೇ ಸಮಾನ., ಅದೆಂತೆಂದೊಡೆ:— ಸಪ್ತಧಾತು ಸಮಂ ಪಿಂಡಂ ಸಮಯೋನಿಸಮುದ್ಭವಂ । ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ? ॥— ಎಂದುದಾಗಿ ನಿಮ್ಮ ದೇಹಕ್ಕೆ ಕುಲವಾವುದು ಹೇಳಿರೆ? ಇದಲ್ಲದೆ ಆತ್ಮನು ದೇಹವ ಬಿಟ್ಟು ಒಂದು ಘಳಿಗೆ ತೊಲಗಿರಲು, ಆ ದೇಹ ಹಡಿಕೆಯಾಗಿ ಹುಳಿತು ನಾಯಿ ನರಿ ತಿಂಬ ಕಾರಣ ನಿಮ್ಮ ದೇಹ ಅಪವಿತ್ರ ಕಾಣಿರೊ! ಇಂತಪ್ಪ ಅಪವಿತ್ರ ಕಾಯಕ್ಕೆ ಕುಲವಿಲ್ಲ. ಆ ಕಾಯಕ್ಕೆ ಕುಲವುಂಟೆಂದರೆ ಮೇಲುಜಾತಿಯ ದೇಹದೊಳಗೆ ಹಾಲುಳ್ಳರೆ, ಕೀಳುಜಾತಿಯ ದೇಹದೊಳಗೆ ರಕ್ತವುಳ್ಳರೆ ಅದು ಕುಲವಹುದು. ಅಂಥಾ ಗುಣ ನಿಮಗಿಲ್ಲವಾಗಿ ಎಲ್ಲಾ ಜೀವರಾಶಿಯ ದೇಹವೂ ನಿಮ್ಮ ದೇಹವೂ ಒಂದೇ ಸಮಾನವಾದ ಕಾರಣ ನಿಮಗೆ ಕುಲವಿಲ್ಲ, ನಿಲ್ಲುಮಾಣು. ಒಡಲು ಕರಣಾದಿಗಳು ಕುಲವಿಲ್ಲದೆ ಹೋದಡೂ ಎಲ್ಲವ ನರಿವ ಚೈತನ್ಯಾತ್ಮಕನೆಂಬೊಡೆ ಆತ್ಮನಾವ ಕುಲಜನೂ ಅಲ್ಲ. ಅದು ಆವ ಕುಲವೆಂದು ಹೆಸರುಗೊಂಬ ಆತ್ಮ ಹೆಣ್ಣಲ್ಲ, ಗಂಡಲ್ಲ, ನಪುಂಸಕನಲ್ಲ, ಸ್ಥೂಲನಲ್ಲ, ಸೂಕ್ಷ್ಮನಲ್ಲ, ಷಡುವರ್ಣದೊಳಗೆ ಆವ ವರ್ಣನೂ ಅಲ್ಲ. ಅದುಕಾರಣ ವರ್ಣವ ಹೊದ್ದದ ಆತ್ಮನನರಿಯುದಾಗಿ ಆ ಆತ್ಮನು ಆವ ಕುಲದೊಳಗೂ ಅಲ್ಲ. ಶರೀರ ಬೇರೆ, ಆತ್ಮ ಬೇರೆ, ಅದೆಂತೆಂದೊಡೆ: —

ಭೂಯೋಯ ಮೃದ್ಭಾಂಡಮನೇಕರೂಪಂ ಸುವರ್ಣಮೇಕಂ ಬಹುಭೂಷಣಾನಾಂ । ಗೋಕ್ಷೀರ ಮೇಕಂ ಬಹು ವರ್ಣಧೇನವಃ ಶರೀರ ಭಿಂನಂ ಪರಮಾತ್ಮಮೇಕಂ ॥— ಎಂದುದಾಗಿ ಶರೀರಂಗಳು ಅನಂತ, ಆತ್ಮನೊಬ್ಬನೆ. ಅದುಕಾರಣ ಆ ಆತ್ಮನು ಆವ ಕುಲದಲೂ ಅಲ್ಲ. ಇನ್ನು ಆವ ಠಾವಿನಲ್ಲಿ ನಿಮ್ಮ ಕುಲವ ಪ್ರತಿಷ್ಠೆಯ ಮಾಡಿ ತೋರುವಿರೊ? ದೇಹಮೃತ್ತಿಕೆ, ಆತ್ಮ ನಿರಾಕಾರನೆನುತ್ತಿರಲು, ಇನ್ನಾವ ಪರಿಯಲ್ಲಿ ನೀವು ಉತ್ತಮ ಕುಲಜರೆಂಬಿರೊ?— ಜೀವಃ ಶಿವಃ ಶಿವೋ ಜೀವಃ ಕೇವಲಃ ಶಿವಃ । ಪಾಶಬದ್ಧಸ್ಥಿತೋಜೀವಃ ಪಾಶಮುಕ್ತಃ ಸದಾಶಿವಃ ॥— ಎಂಬ

ಶೃತಿಯಂ ತಿಳಿದು ನೋಡಲು, ನೀವೆಲ್ಲಾ ಪಾಶಬದ್ಧ ಜೀವಿಗಳಾಗುತ್ತ ಯಿರಲು ನಿಮಗೆಲ್ಲಿಯು ಉತ್ತಮ ಕುಲವು? ಪಾಶಮುಕ್ತರಾದ ಎಮ್ಮ ಶಿವಭಕ್ತರೆ ಕುಲಜರಲ್ಲದೆ, ನಿಮಗೆ ಉತ್ತಮ ಕುಲವುಂಟಾದರೆ, ನಿಮ್ಮ ದೇಹದೊಳಗೆ ಹೊರಗೆ ಇಂಥಾ ಠಾವೆಂದು ಬೆರಳ ಮಡಿದು ತೋರಿ. ಅದು ಅಲ್ಲದೆ ಒಂದು ಪಕ್ಷಿಯ ತತ್ತಿಯೊಳಗೆ ಹಲವು ಮರಿ ಹುಟ್ಟಿ ದರೆ, ಒಂದರ ಮರಿಯೊ ಹಲವು ಪಕ್ಷಿಯ ಮರಿಯೊ? ತಿಳಿನೋಡಿ ಧರೆ ಅವಕ್ಕೆ ಬೇರೆ ಬೇರೆ ಪಕ್ಷಿಗಳೆಂಬ ಕುಲವಿಲ್ಲ. ಆಹಾಂಗೆ ಒಬ್ಬ ಬ್ರಹ್ಮನ ಅಂಡವೆಂಬ ತತ್ತಿಯೊಳಗೆ ಸಕಳ ಜೀವರಾಶಿಯೆಲ್ಲವೂ ಉದ ಯಿಸಿದವು. ಅದೆಂತೆಂದೊಡೆ:— ಪೃಥಿವ್ಯಾಕಾಶಮುಜಾಂಡಂ ತಸ್ಯಾಂಡಂ ಜಾಯತೇಕುಲಂ। ಅಂತ್ಯಜಾತಿ ದ್ವಿಜಾತಿ ದ್ವಿಜಾತಿಯಾಂ ಏಕಯೋ ನಿಸಹೋದರಾಃ॥— ಎಂದುದಾಗಿ ಇರುಹೆ ಮೊದಲು ಆನೆ ಕಡೆಯಾದ ಸಚರಾಚರವೆಲ್ಲವೂ ಒಬ್ಬ ಬ್ರಹ್ಮನ ಅಂಡದೊಳಗೆ ಹುಟ್ಟಿ 'ಏಕಯೋನಿ ಸಹೋದರಾಃ' ಎಂದು ಪ್ರತಿಷ್ಠಿಸುತ್ತಿರಲು ನಿಮಗೆಲ್ಲಿಯ ಕುಲವೊ? ಶಿವ ಭಕ್ತರೆ ಉತ್ತಮರು ಕುಲಜರೆಂದು, ಮಿಕ್ಕಿನವರೆಲ್ಲಾ ಕೀಳುಜಾತಿಯೆಂ ಬುದನು ಓದಿ ಬರುದೊರೆಯಾದರು. ನಾನು ನಿನಗೆ ಹೇಳಿಹೆನು ಕೇಳು:— ಶ್ವಪಚೋಽಪಿ ಮುನಿಶ್ರೇಷ್ಠಃ ಶಿವಸಂಸ್ಕಾರ ಸಂಯುತಃ। ಶಿವಸಂಸ್ಕಾರ ಹೀನಸ್ತು ವಿಪ್ರೋಽಪಿ ಶ್ವಪಚಾಧಮಃ॥ ಎಂಬ ಶೃತಿಗೆ ಇದಿರುತ್ತರವ ಕೊಟ್ಟರೆ ಬಾಯಲ್ಲಿ ಕೊಪ್ಪ ಮೂಡುವುದಾಗಿ ನೀವೆ ಕೀಳುಜಾತಿಗಳು. ಅರಿದ ಶಿವಭಕ್ತರು ಸತ್ಕುಲಜರೆಂದು ಸುಮ್ಮನಿರಿರೊ! ಅಲ್ಲದ ಅಜ್ಞಾನ ದವರಾದುದೆಲ್ಲಾ ಒಂದು ಕುಲ. ಸುಜ್ಞಾನದವರಾದುದೆಲ್ಲಾ ಒಂದು ಕುಲವೆಂದು ಶಾಸ್ತ್ರಂಗಳು ಹೇಳುತ್ತಿದ್ದಾವೆ. ಅದೆಂತೆಂದೊಡೆ:— ಆಹಾರ ನಿದ್ರಾಭಯ ಮೈಥುನಂಚ ಸಾಮಾನ್ಯ ಮೇತತ್ ಪಶುಭಿರ್ನರಾಣಾಂ। ಜ್ಞಾನಂ ನರಾಣಾಮಧಿಕೋ ವಿಶೇಷೋ ಜ್ಞಾನೇನ ಹೀನಃ ಪಶುಭಿಃ ಸಮಾನಃ॥ ಎಂದುದಾಗಿ, ಅಜ್ಞಾನ ತಂಡುಗಳು ನೀವೆಲ್ಲರೂ ಕರ್ಮ ಪಾಶಬದ್ಧರು. ನಿಮಗೆಲ್ಲಿಯದೊ ಸತ್ಕುಲ? ಇದು ಅಲ್ಲದೆ ನಿಮ್ಮ ನುಡಿ ಯೊಡನೆ ನಿಮಗೆ ಹಗೆ ಮಾಡಿ ತೋರಿಹೆನು ಕೇಳಿರೊ:— ನಿಮಗೆ ಕುಲವು ವಶಿಷ್ಠ ವಿಶ್ವಾಮಿತ್ರ ಭರದ್ವಾಜ ಕೌಂಡಿಲ್ಯ ಕಶ್ಯಪನೆಂಬ ಋಷಿ ಗಳಿಂದ ಬಂದಿತ್ತೆಂಬಿರಿ. ಅವರ ಪೂರ್ವವನೆತ್ತಿ ನುಡಿದರೆ ಹುರುಳಿಲ್ಲ. ಅವರೆಲ್ಲಾ ಕೀಳುಜಾತಿಗಳಾದ ಕಾರಣ ನೀವೆ— ಋಷಿ ಮೂಲವನು

ನದಿ ಮೂಲವನೆತ್ತಲಾಗದೆಂಬಿರಿ. ಇನ್ನು ನಿಮ್ಮ ನುಡಿ ನಿಮಗೆಯಾಯಿತ್ತೆಂದೆ ಕೇಳಿರೊ. ಆ ಋಷಿಗಳ ಸಂತಾನವಾಗಿ ನಿಮ್ಮ ಮೂಲವನೆತ್ತಿದಡೂ ಹುರುಳಿಲ್ಲ. ಅದಂತಿರಲಿ.

ನಿಮ್ಮ ಕುಲಕೆ ಗುರುವೆನಿಸುವ ಋಷಿಗಳೆಲ್ಲರೂ ಲಿಂಗವನಲ್ಲದೆ ಪೂಜಿಸರು, ವಿಭೂತಿ ರುದ್ರಾಕ್ಷಿಯನಲ್ಲದೆ ಧರಿಸರು, ಪಂಚಾಕ್ಷರಿಯನಲ್ಲದೆ ಜಪಿಸರು, ಜೆಡೆಯನಲ್ಲದೆ ಕಟ್ಟರು. ಹಾಗೆ ನೀವು ಲಿಂಗವ ಪೂಜಿಸಿ, ವಿಭೂತಿ ರುದ್ರಾಕ್ಷಿಯಧರಿಸಿ, ಪಂಚಾಕ್ಷರಿಯ ಜಪಿಸಿ, ಜೆಡೆಯ ಕಟ್ಟಿ, ಈಶ್ವರ ಲಾಂಛನವ ಧರಿಸಿದಡೆ ನೀವು ಋಷಿ ಮೂಲದವರಹುದು. ಹೇಗಾದಡೂ ಅನುಸರಿಸಿಕೊಳ್ಳಬಹುದು. ಅದು ನಿಮಗಲ್ಲದ ಮಟ್ಟಿಯನ್ನಿಟ್ಟು ವಿಷ್ಣುವಂ ಪೂಜಿಸಿ ಮುಡುಹಂ ಸುಡಿಸಿಕೊಂಡು ಸಾಲಿಗ್ರಾಮ ಶಕ್ತಿ ಲಕ್ಷುಮಿ ದುರ್ಗಿಯೆಂಬ ಕಿರುಕಳ ದೈವಮಂ ಪೂಜಿಸಿ ನರಕಕ್ಕಿಳಿದು ಹೋಹವರಾದ ಕಾರಣ, ನೀವೆ ಹೀನಜಾತಿಗಳು; ನಿಮ್ಮ ಋಷಿ ಮಾರ್ಗವ ವಿಚಾರಿಸಿ ನಡೆಯರಾಗಿ ನೀವೇ ಗುರುದ್ರೋಹಿಗಳು; ಲಿಂಗವೆ ದೈವವೆಂದು ಏಕನಿಷ್ಠೆಯಿಂದಲಿರರಾಗಿ ನೀವೆ ಗುರುಲಿಂಗದ್ರೋಹಿಗಳು; ಪಂಚಾಕ್ಷರಿಯ ನೆನೆಯಿರಾಗಿ ಮಂತ್ರದ್ರೋಹಿಗಳು, ರುದ್ರಾಕ್ಷಿಯ ಧರಿಸರಾದ ಕಾರಣ ನೀವು ಶಿವಲಾಂಛನ ದ್ರೋಹಿಗಳು, ಶಿವಭಕ್ತರಿಗೆ ಎರಗದ ಕಾರಣ ನೀವು ಶಿವಭಕ್ತರಿಗೆ ದ್ರೋಹಿಗಳು. ನಿಮ್ಮ ಮುಖವ ನೋಡಲಾಗದು. ಬರಿದೆ ಬ್ರಹ್ಮವನಾಚರಿಸಿ ನಾವು ಬ್ರಹ್ಮರೆಂಬಿರಿ. ಬ್ರಹ್ಮವೆಂತಿಪ್ಪುದೆಂದರಿಯಿರಿ. ಬ್ರಹ್ಮಕ್ಕೂ ನಿಮಗೂ ಸಂಬಂಧವೇನೊ— ಸತ್ಯಂ ಬ್ರಹ್ಮ ಶೌಚಂ ಬ್ರಹ್ಮಚೇಂದ್ರಿಯನಿಗ್ರಹಂ । ಸರ್ವಜೀವದಯಾ ಬ್ರಹ್ಮ ಇತ್ಯೇತತ್ ಬ್ರಹ್ಮಲಕ್ಷಣಂ ॥ ಸತ್ಯಂ ನಾಸ್ತಿ ಶೌಚಂ ನಾಸ್ತಿ ನಾಸ್ತಿಚೇಂದ್ರಿಯ ನಿಗ್ರಹಃ । ಸರ್ವಜೀವದಯಾನಾಸ್ತೀತ್ಯೇತಚ್ಚಾಂಡಾಲ ಲಕ್ಷಣಂ ॥ ಬ್ರಹ್ಮಕ್ಕೂ ನಿಮಗೂ ಸಂಬಂಧವೇನೊ! ಬ್ರಹ್ಮವೆ ನಿಃಕರ್ಮ; ನೀವೆ ಕರ್ಮಿಗಳು. ಮತ್ತೆಂತೊ— ಬ್ರಹ್ಮ ಚರತೀತಿ ಬ್ರಾಹ್ಮಣಃ ಎಂದು ಗೆಡಹುತಿಪ್ಪಿರಿ. ಗಾಯತ್ರಿಯ ಜಪಿಸಿ ನಾವು ಕುಲಜರೆಂಬಿರಿ. ಆ ಗಾಯತ್ರಿ ಕರ್ಮವಲ್ಲದೆ ಮುಕ್ತಿಗೆ ಕಾರಣವಿಲ್ಲ. ಅಂತೂ ನೀವು ಗಾಯತ್ರಿಯಿಂದ ಕುಲಜರಲ್ಲ. ವೇದವನೋದಿ, ನಾವೆ ಬ್ರಹ್ಮರಾದೆವೆಂಬಿರಿ. ವೇದ ಹೇಳಿದ್ದ ಹಾಂಗೆ ನಡೆಯಿರಿ. ಅದೆಂತೆಂದೊಡೆ:— ದೇವಾ ಭೂಮಿಜನಯಂ ದೇವಾ ಏಕೋ— ಎಂದೋದಿ ಮರೆದು ವಿಷ್ಣುವನೆ

ಭಜಿಸುವಿರಿ. ನೀವೆ ವೇದ ವಿರುದ್ಧಿಗಳು.— ವಿಶ್ವತೋಮುಖಂ ವಿಶ್ವತ ಶ್ಚಕ್ಷುರ್ವಿಶ್ವತೋಬಾಹು— ಎಂದೊರೆವುತ್ತಂ— ಏಕೋರುದ್ರೋನದ್ವಿತೀ ಯಾಯ ತಸ್ಥೇ— ಎಂದು ಮರೆದು ಬೇರೊಬ್ಬ ದೈವವುಂಟೆಂದು ಗಳ ಹುತ್ತಿಪ್ಪಿರಿ. ನೀವೆ ವೇದ ದ್ರೋಹಿಗಳು.— ಏಕಮೇವಾದ್ವಿತೀಯಂ ಬ್ರಹ್ಮಂ ಎಂದೋದಿ ಕರ್ಮದಲ್ಲಿ ಸಿಕ್ಕಿಪ್ಪಿರಿ. ನೀವೆ ದುಃಕರ್ಮಿಗಳು.— ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಂ— ಎಂದೋದಿ ಅನ್ಯಪೂಜೆಯಂ ಮಾಡುತ್ತಿಪ್ಪಿರಿ. ನೀವೆ ಪತಿತರು.— ಶಿವೌಮೇಪಿತರೌ— ಎಂದೋದಿ, ಸಂನ್ಯಾಸಿಗಳಿಗೆ ಮಕ್ಕಳೆಂಬಿರಿ. ನೀವೆ ಶಾಸ್ತ್ರವಿರುದ್ಧಿಗಳು ಸದ್ಯೋಜಾತಾದ್ಭವೇದ್ಭೂಮಿರ್ವಾಮದೇವಾತ್ತದಾಜಲಂ। ಅಘೋರಾದಗ್ನಿ ಮಿತ್ಯಾಹುಸ್ತತ್ಪುರುಷಾದ್ವಾಯುರುಚ್ಯತೇ। ಈಶಾನಾದ್ಗಗನಾಕಾರಂ ಪಂಚ ಬ್ರಹ್ಮಮಯಂ ಜಗತ್॥ ಎಂದೋದಿ— ಸರ್ವಂ ವಿಷ್ಣುಮಯಂ— ಎನು ತಿಪ್ಪಿರಿ. ನಿಮ್ಮಿಂದ ಶಿವದ್ರೋಹಿಗಳಾರೋ? ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ— ಎಂದೋದಿ ಮರವು, ವಿಭೂತಿಯ ನಿಡಲೊಲ್ಲದೆ ಮಟ್ಟಿಯನ್ನಿಡುವಿರಿ. ನಿಮ್ಮಿಂದ ಪತಿತರಿನ್ನಾರೋ ? ರುದ್ರಾಕ್ಷ ಧಾರಣಂ ರುದ್ರ— ಎಂಬುದನ್ನೋದಿ ರುದ್ರಾಕ್ಷಿಯಂ ಧರಿಸಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯಂ ಕಟ್ಟಿಕೊಂಬಿರಿ. ನಿಮ್ಮಿಂದ ಪಾಪಿಗಳಿ ನ್ನಾರೋ?— ಪಂಚಾಕ್ಷರ ಸಮೋಮಂತ್ರೋ ನಾಸ್ತಿ ತತ್ವಂ ಮಹಾ ಮುನೇ ಎಂಬುದನೋದಿ ಪಂಚಾಕ್ಷರಿಯ ಜಪಿಸಲೊಲ್ಲದೆ, ಗೋಪಾಳ ಮಂತ್ರವ ನೆನವಿರಿ ಎಂತೋ? ನಿಮ್ಮ ನುಡಿ ನಿಮಗೆ ವಿರುದ್ಧವಾಗಿರಲು, ನೀವು ಓದುವ ವೇದ ನಿಮಗೆ ವಿರುದ್ಧವಾಗಿರಲು, ನಿಮ್ಮ ಉತ್ತಮ ಕುಲಜರೆಂದು ವಂದಿ ಸಿದವರಿಗೆ ಸೂಕರ ಜನ್ಮದಲ್ಲಿ ಬಪ್ಪುದು ತಪ್ಪದು ನೋಡಿರೆ.

ವಿಪ್ರಾಣಾಂ ದರ್ಶನೇನೈವ ಪಾಪಂ ಭುಂಜಂತು ಪುಂಜರ। ವಿಪ್ರಾಣಾಂ ವಂದನಂಚೈವ ಕೋಟಿ ಜನ್ಮಸು ಸೂಕರಾಃ॥— ಇಂತೆಂದು ದಾಗಿ ನಿಮ್ಮೊಡನೆ ಮಾತನಾಡಿದೊಡನೆ ಪಂಚಮಹಾ ಪಾತಕ. ನಿಮ್ಮ ಮುಖವ ನೋಡಿದರೆ ಅಘೋರ ನರಕ. ಅದೆಂತೆಂದೊಡೆ:— ಒಬ್ಬ ಹಾರು ವನ ದಾರಿಯಲ್ಲಿ ಕಂಡರೆ ಇರಿದು ಕೆಡಹಿದಲ್ಲದೆ ಹೋಗಬಾರದೆಂದು ನಿಮ್ಮ ವಾಕ್ಯವೆಂಬ ನೇಣಿಂದ ಹೆಡಗುಡಿಯ ಕಟ್ಟಿಸಿಕೊಳುತಿಪ್ಪಿರಿ. ಮತ್ತಂ ನಿಮ್ಮ ದುಶ್ಚರಿತ್ರವ ನಾನೆಣಿಸುವರೆ,— ಅಣೋರಣೀಯಾನ್ ಮಹತೋ ಮಹೀ ಯಾನ್— ಎಂಬುದ ನೀವೆ ಓದಿ, ಪ್ರಾಣಿಯಂ ಕೊಂದು ಯಾಗವನ್ನಿಕ್ಕಿ

ದೇವರ್ಕಳುಗಳಿಗೆ ಹೋಮದ ಹೊಗೆಯಂ ತೋರಿ ಕೊಬ್ಬಿ ಬೆಳೆದ ಸವಿಯುಳ್ಳ ಖಂಡವನೆ ತಿಂದು ಸೋಮಪಾನವೆಂಬ ಸುರೆಯನೆ ಕುಡಿದು, ವೈವುರೆದು ನೊಸಲಕಂಣ ತೋರುವಂತಹ ಶಿವಭಕ್ತನನ್ನಾದರೂ ನಿಂದಿಸಿ ನುಡಿಯುತಿಪ್ಪಿರಿ. ನಿವ್ಮೊಡನೆ ನುಡಿವರೇ? ಗುರುಲಿಂಗವಿಲ್ಲದವರು ನುಡಿವರಲ್ಲದೆ, ಗುರುಲಿಂಗವುಳ್ಳವರು ನುಡಿವರೇ? ಇದು ಶೃತ ದೃಷ್ಟ ಅನುಮಾನದಿಂದ ವಿಚಾರಿಸಿ ನೋಡಲು ನೀವೆ ಪಂಚ ಮಹಾಪಾತಕರು. ಶಿವಭಕ್ತಿಯನರಿಯದ ನರ ರೂಪಿನ ನರಿಗಳು. ನಿಮ್ಮಿಂದ (ಎಳುಬೆಲೆ?) ಹೊರಗಾದ ಹೊಲೆಯನೆ ಉತ್ತಮ ಕುಲಜನೆಂದು ಮುಡಿಗೆಯ ಹಾಕಿದೆನು; ಎತ್ತಿರೋ? ಉತ್ತಮ ಶಿವಭಕ್ತರೇ ಅಧಿಕರು ಎಂದು, ಶಿವಭಕ್ತರೇ ಕುಲಜರು ಎಂದು, ಶಿವಭಕ್ತರೆ ಸದಾಚಾರಿಗಳು ಶಿವಭಕ್ತರೆ ಪಾಪರಹಿತರು ಎಂದು, ಎಮ್ಮ ಶಿವಭಕ್ತರೆ ಸರ್ವ ಜೀವ ದಯಾಪಾರಿಗಳು ಎಂದು, ಶಿವಭಕ್ತರೇ ಸದ್ಯೋನ್ಮುಕ್ತರಯ್ಯ ಘನಗುರು ಶಿವಲಿಂಗ ರಾಮನಾಥಾ.

---

## ಸಂಗೀತ ವಚನಗಳು.

(ಪಿ. ಪ್ಹಿ. ಪಾಟೀಲ, ಸಂಗೀತ ಶಿಕ್ಷಕ ವಿಜಾಪುರ.)

---

೬೯

ರಾಗಃ— ಮಿಶ್ರಪಹಾಡಿ ತಾಲಃ— ಕವಾಲಿ

(ರಾಮವನಿಜಾಯಿ... ಎಂಬಂತೆ)

ತನುವ ಬೇಡಿದಡೀವೆ । ಅಯ್ಯಾ ॥
ಮನವ ಬೇಡಿದಡೀವೆ । ಅಯ್ಯಾ ॥ಪ॥

ಧನವಬೇಡಿದಡೀವೆ ನಿಮ್ಮ ಶರಣರಿಗೆ ।
ಎನಗೆ ಬೇಕೆಂಬ ಭಾವ ।
ಮನದಲ್ಲಿ ಹೊಳೆದರೆ ಘನಮಹಿಮ ।
ನಿಮ್ಮ ಶರಣರ ಪಾದದಾಣೆ, ಅಯ್ಯಾ ॥೧॥

ಮನವಚನ ಕಾಯದೊಳು ನೀನಲ್ಲದೆ ।
ಮತ್ತೊಂದನರಿದಡೆ ।

ಕೂಡಲಸಂಗಮದೇವಾ ಮತ್ತೆ ।
ಮರಳಿ ಭವವೆಂಬ ಘೋರದಲ್ಲಿಕ್ಕಯ್ಯಾ ॥೨॥

(ಬಸವಣ್ಣ)

೭೦

ರಾಗಃ— ಮಿಶ್ರಪಹಾಡಿ ತಾಲಃ— ಕವಾಲಿ

(ಜಮುನಾಮೆ ಕೈಸೆ ಜಾವು... ಎಂಬಂತೆ)

ತಾಳಮಾನ ಸರಸವನರಿಯೆ ॥ಪ॥

ಓಜೆ ಬಜಾವಣಿಯ ಲೆಕ್ಕವನರಿಯೆ ।
ಅಮೃತಗಣ ದೇವಗಣವನರಿಯೆ ॥೧॥

ಕೂಡಲಸಂಗಮದೇವ ನಿನಗೆ ।
ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ ॥೨॥

[ಬಸವಣ್ಣ]

೭೧

ರಾಗಿಣಿಃ— ಜಯಜಯವಂತಿ ತಾಲಃ— ತ್ರಿತಾಲ

(ಮೋರೆ ಮಂದರ ಅಬಹು ನಹಿ ಆಯೆ... ಎಂಬಂತೆ)

ಎನ್ನ ಕಾಯವ ದಂಡಿಗೆಯ ಮಾಡಯ್ಯಾ ।
ಎನ್ನ ಶಿರವ ಸೋರೆಯ ಮಾಡಯ್ಯಾ ॥ಪ॥

ಎನ್ನ ನರವ ತಂತಿಯ ಮಾಡಯ್ಯಾ ।
ಎನ್ನ ಬೆರಳ ಕಡ್ಡಿಯ ಮಾಡಯ್ಯಾ ॥ ೧ ॥

ಬತ್ತೀಸ ರಾಗವ ಹಾಡಯ್ಯಾ ।
ಉರದಲೊತ್ತಿ ಬಾರಿಸು ಕೂಡಲ ಸಂಗಮದೇವಾ ॥ ೨ ॥

( ಬಸವಣ್ಣ )

---

# ಆತ್ಮನಿವೇದನವು.



ಈಗಿನ ಸಂಚಿಕೆಯಿಂದ ಶಿವಾನುಭವ ಪತ್ರಿಕೆಯು ೧೫ನೆಯ ವರ್ಷವು ಪ್ರಾರಂಭವಾಗುತ್ತದೆ. ಹೋದ ೧೪ ವರ್ಷಗಳಿಂದಲೂ ಶಿವಾನುಭವ ಪತ್ರಿಕೆಯು ಜರುಗಿಸುತ್ತ ಬಂದ ವಾಙ್ಮಯ ಸಂಶೋಧನ ಕಾರ್ಯವು ಬಹುಶಃ ಎಲ್ಲರಿಗೂ ಗೊತ್ತಾಗಿಯೇ ಇರುತ್ತದೆ. ಇದರ ಸಂಚಿಕೆಗಳಲ್ಲಿ ವೀರಶೈವ ಸಮಾಜದ ಸಂಸ್ಕೃತಿಗೆ ತಳಹದಿಯಾಗಿರುವ ಅನೇಕ ಧರ್ಮ ಗ್ರಂಥಗಳೂ ಅನೇಕ ರಗಳೆಗಳೂ ಪ್ರಕಟವಾಗಿವೆ. ಅಲ್ಲದೆ ಅನೇಕ ಮಹಾಕವಿಗಳ ವಿಮರ್ಶಾತ್ಮಕ ಲೇಖಗಳೂ, ವೀರಶೈವ ಮಹಾಪುರುಷರ ಚರಿತ್ರೆಗಳೂ, ಸ್ಥಳ ವರ್ಣನೆಗಳೂ ವಿಪುಲವಾಗಿ ಬಂದಿರುತ್ತವೆ. ಈ ಕಾರ್ಯದಲ್ಲಿ ನಮಗೆ ಈ ವರೆಗೆ ಸಹಾಯ ಮಾಡುತ್ತ ಬಂದ ಲೇಖಕರಿಗೂ ನಮ್ಮ ವಾಚಕ ವೃಂದಕ್ಕೂ ನಮ್ಮ ಹೃತ್ಪೂರ್ವಕ ಆಭಾರವನ್ನು ಎಣಿಸುತ್ತೇವೆ.

ಈಚೆಗೆ ನಾವು ವೀರಶೈವ ಸಮಾಜೇತಿಹಾಸವನ್ನು ಕುರಿತು ಹೆಚ್ಚಾಗಿ ಲಕ್ಷಿಸುತ್ತ ಬಂದಿರುವ ಸಂಗತಿಯು ನಮ್ಮ ವಾಚಕರಿಗೆ ತಿಳಿಯದೆ ಇರಲಾರದು. ಇದಾದರೂ ಅತ್ಯಂತ ಮಹತ್ವದ ಸಂಶೋಧನ ಕಾರ್ಯವಾಗಿರುತ್ತದೆ. ವೀರಶೈವ ವಾಙ್ಮಯದ ಬಗ್ಗೆ ಮತ್ತು ಅದರ ನಿಜತತ್ವಗಳ ಬಗ್ಗೆ ಅನೇಕ ತಪ್ಪು ತಿಳುವಳಿಕೆಗಳು ಮೊದಲು ಕರ್ನಾಟಕದಲ್ಲಿ ರೂಢವಾಗಿದ್ದವು. ಆದರೆ ಶಿವಶರಣರ ಶ್ರೇಷ್ಠ ವಿಚಾರಗಳನ್ನು ಅವರ ವಚನಗಳ ದ್ವಾರ ನಾವು ಪ್ರಕಟಿಸುತ್ತ ಬಂದಂದಿನಿಂದ ಅವರ ಬಗ್ಗೆ ಆದರವೂ, ಪ್ರೇಮವೂ ವ್ಯಕ್ತವಾಗಹತ್ತಿವೆ. ಆದರೆ ಅವರ ಚರಿತ್ರೆಗಳ ಬಗ್ಗೆ ತಪ್ಪು ಕಲ್ಪನೆಗಳು ಇನ್ನೂ ಪ್ರಕಟವಾಗಹತ್ತಿರುತ್ತವೆಂಬುದು ಬಹು ವಿಷಾದಕರವಾದದ್ದು. ಬಸವೇಶ್ವರನು ಐತಿಹಾಸಿಕ ಪುರುಷನೋ ಹೇಗೆ, ಅವನ ಕಾಲದಲ್ಲಿ ವೀರಶೈವ ವಾಙ್ಮಯವು ಇದ್ದಿತೋ ಹೇಗೆ, ಶಿವಶರಣರು ಕಾಲ್ಪನಿಕ ಪುರುಷರೋ ಹೇಗೆ, ಎಂಬ ಶಂಕೆಗಳನ್ನು ಅನೇಕರು ಈಗ ಪ್ರಕಟ ಮಾಡುತ್ತಲಿದ್ದಾರೆ. ಆದರೆ ಈ ತರದ ವಿಧಾನಗಳಲ್ಲಿ ನಿಜತ್ವವು ಎಷ್ಟಿದೆ ಎಂಬುದನ್ನು ಹೊರಪಡಿಸಿಸಲು ನಾವು ಶಿವಶರಣರ ನಿಜೇತಿಹಾಸವನ್ನು ಕುರಿತು ಅನೇಕ ಲೇಖಗಳನ್ನು ಹೋದ ವರುಷ ಬರೆಯಬೇಕಾಯಿತು.

ಬಸವೇಶ್ವರ, ಅಮುಗಿದೇವ, ದೇವರದಾಸಿಮಯ್ಯ, ಸಿದ್ಧರಾಮ ಇವರ ಉಲ್ಲೇಖವಿದ್ದ ಶಿಲಾಶಾಸನಗಳು ಪ್ರಕಟವಾಗಿದ್ದರಿಂದ ಅವರು ಐತಿಹಾಸಿಕ ಪುರುಷರೆಂಬುದು ಸಿದ್ಧವಾಗುತ್ತಿದೆ. ಇವರಲ್ಲದೆ ಅನೇಕ ಶಿವಶರಣರ ಕಾಲವನ್ನು ನಿಶ್ಚಯಿಸುವ ಕುರಿತು ಅನೇಕ ಲೇಖ ಮಾಲೆಗಳನ್ನು ನಾವು ಈ ಪತ್ರಿಕೆಯಲ್ಲಿ ಪ್ರಕಟಿಸಿದೆವು. ಅವರ ವಾಸಸ್ಥಳಗಳು ಆವವೆಂಬುದು ಕಂಡುಹಿಡಿಯಲ್ಪಟ್ಟು ಅವುಗಳಲ್ಲಿ ಈಗಲೂ ಕಂಡು ಬರುವ ವಿಶೇಷ ತರಹದ ಕುರುಹುಗಳು ಹೊರಗೆಡವಲ್ಪಟ್ಟವು. ಇವೆಲ್ಲ ಸಂಗತಿಗಳನ್ನು ನಾವು ನೋಡಿದಲ್ಲಿ ಬಸವೇಶ್ವರನ ಕಾಲದಲ್ಲಿ ಒಂದು ಅದ್ಭುತವಾದ ಸಾಮಾಜಿಕ, ರಾಜಕೀಯ, ವಾಙ್ಮಯಾತ್ಮಕ ಕ್ರಾಂತಿಯುದ್ಭವಿಸಿದ್ದು ನಿಜವೆಂಬುದನ್ನು ವಾಚಕರ ನಿದರ್ಶನಕ್ಕೆ ತಂದಿದ್ದೇವೆ.

ವೀರಶೈವರಲ್ಲಿ ಉದ್ಭವಿಸಿದ ಈ ಆಂದೋಲನವು ಬಸವೇಶ್ವರನಕಿಂತಲೂ ಪೂರ್ವದಲ್ಲಿತ್ತೆಂಬುದನ್ನು ಸಹ ನಾವು ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟಿಸಿದ್ದೇವೆ. ಈ ಕಾಲದಲ್ಲಿ ರೇವಣಸಿದ್ಧೇಶ್ವರನು ಮಾಡಿದ ಮಹತ್ಕೃತ್ಯಗಳನ್ನು ಕುರಿತು ಲೇಖಗಳನ್ನು ಲಿಖಿಸಿದ್ದೇವೆ. ರೇವಣಸಿದ್ಧೇಶ್ವರನ ಮಗನು ರುದ್ರಮುನಿಯು. ಇವನಾದರೂ ಕೂಡ ಬಸವೇಶ್ವರನ ಕಾಲದಲ್ಲಿಯೂ ಅವನ ತರುವಾಯದಲ್ಲಿಯೂ, ಧರ್ಮೋದ್ಧಾರ ಕಾರ್ಯ ಮಾಡುವಲ್ಲಿ ಅನೇಕ ಸಾಹಸ ಕೃತ್ಯಗಳನ್ನು ಮಾಡಿದ್ದನ್ನು ವಿವರಿಸಿದ್ದೇವೆ. ಈ ಎಲ್ಲ ಸಂಗತಿಗಳಿಂದ ೧೧-೧೨ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ಉಂಟಾದ ವೀರಶೈವ ಧರ್ಮದ ಚಳವಳಿಯು ಎಂಥ ಘನತರವಾದದ್ದಿತ್ತೆಂಬುದು ತಿಳಿದುಬರದೆ ಇರಲಾರದು. ಈ ಸಂಬಂಧವಾಗಿ ನಾವು ವೀರಶೈವ ಗ್ರಂಥಗಳೂ ಶಿಲಾ ಶಾಸನಗಳೂ ಶಿವಶರಣರ ಸ್ಥಾನಿಕ ಅವಶೇಷಗಳೂ ಇವೇ ಮೊದಲಾದ ಆಧಾರಗಳನ್ನು ತೆಗೆದುಕೊಂಡು ಅನೇಕ ವಿಷಯಗಳನ್ನು ಪ್ರತಿಪಾದಿಸಿದ್ದೇವೆ. ಈ ಎಲ್ಲ ಐತಿಹಾಸಿಕ ಸಂಗತಿಗಳು ಸಂಭವಿಸಿ ಇಂದಿಗೆ ಸುಮಾರು ೯೦೦-೧೦೦೦ ವರುಷಗಳಾದವು. ಇಷ್ಟು ದೀರ್ಘಕಾಲವಾದ್ದರಿಂದ ನಾವು ಮಾಡಿದ ಊಹೆಗಳಲ್ಲಿ ದೋಷಗಳು ಇರಬಹುದೆಂದು ನಾವು ತಿಳಿದಿದ್ದೇವೆ. ಆದರೆ ಸಂಶೋಧಕರು ಅವುಗಳ ಬಗ್ಗೆ ಇನ್ನು ಹೆಚ್ಚಾಗಿ ಸಂಶೋಧನ ಮಾಡಲೆಂಬ ಉದ್ದೇಶದಿಂದ ನಾವು ಆ ಲೇಖಗಳನ್ನು ಪ್ರಕಟಿಸಿದ್ದೇವೆ. ಆ ರೀತಿ ಅವರಾದರೂ ಪ್ರವೃತ್ತರಾದಲ್ಲಿ ಕರ್ನಾಟಕದ ಸಮಾಜೇತಿಹಾಸದ ಮೇಲೆ ಒಂದು ಮಹತ್ವದ ಪ್ರಕಾಶವು ಬೀಳದೆ ಇರಲಾರದೆಂದು ಭಾವಿಸಿದ್ದೇವೆ.

ಈಚೆಗೆ ನಾವು ಅನೇಕ ವಚನಗಳನ್ನು ಶಿವಾನುಭವದಲ್ಲಿ ಪ್ರಕಟಪಡಿಸಿದ್ದೇವೆ. ಅವುಗಳನ್ನು ರಚಿಸಿದ ಶಿವಶರಣರೆಲ್ಲರೂ ಬಸವನ ಕಾಲದವರೇ ಇದ್ದಾರೆ. ಅವರ ಹೆಸರುಗಳು ಯಾವವೆಂದರೆ-ಹಾವಿನಹಾಳ ಕಲ್ಲಿದೇವ, ಮಧುವರಸ, ಸತ್ಯಕ್ಕ, ಶಿವಲೆಂಕ ಮಂಚಣ್ಣ, ಉರಿಲಿಂಗದೇವ ಮತ್ತು ಬಾಹೂರು ಬೊಮ್ಮಯ್ಯ ಇವರೇ ಇದ್ದಾರೆ.

ಈ ವರ್ಷ ನಾವು ಹರಿಹರನ ರಗಳೆಗಳನ್ನು ಪ್ರಕಟಪಡಿಸುವ ಕಾರ್ಯವನ್ನಾದರೂ ಮುಂದುವರಿಸುತ್ತ ಬಂದಿದ್ದೇವೆ. ಅವನ ರಗಳೆಗಳು ಎಷ್ಟು ರಸಭರಿತವೂ, ಭಕ್ತಿಭಾವಪೂರಿತವೂ, ಇರುತ್ತವೆಂಬುದು ಕರ್ನಾಟಕಸ್ಥರ ನಿದರ್ಶನಕ್ಕೆ ಈಗ ಬಂದಿರುತ್ತದೆ. ಅವನ ರಗಳೆಗಳನ್ನು ಆಯ್ದು ಹರಿಹರನ ರಗಳೆಗಳು ಭಾಗ ೭ ಈ ಗ್ರಂಥದಲ್ಲಿ ನಾವು ಪ್ರಕಟಿಸಿದ್ದೇವೆ.

ಮುಂದಿನ ವರ್ಷದಲ್ಲಿಯೂ ನಾವು ವೀರಶೈವೇತಿಹಾಸದ ಬಗ್ಗೆ ಅನೇಕ ಲೇಖಗಳನ್ನು ಪ್ರಕಟಿಸುವವರಿದ್ದೇವೆ. ಇದಕ್ಕೋಸ್ಕರ ಶಿವಶರಣರ ಚರಿತ್ರೆಗಳನ್ನು ನಾವು ಈಗ ಸಂಗ್ರಹಿಸುತ್ತಾ ಇದ್ದೇವೆ. ಈ ಶಿವಶರಣರ ಸಂಖ್ಯೆಯು ಕನಿಷ್ಟ ಒಂದು ಸಾವಿರದ ಮೇಲ್ಪಟ್ಟು ಇದ್ದದ್ದು ಕಂಡುಬರುತ್ತಿದೆ. ಇವರು ಇಡೀ ದಕ್ಷಿಣ ಹಿಂದುಸ್ತಾನ, ಕರ್ನಾಟಕ ಮತ್ತು ಆಂಧ್ರದೇಶಗಳಲ್ಲಿ, ಉದ್ಭವಿಸಿರುತ್ತಾರೆ. ಇವರ ಚರಿತ್ರೆಗಳನ್ನು ಹೊರಪಡಿಸುವದು ಬಹು ಅವಶ್ಯವಾಗಿರುತ್ತದೆ. ಈ ಸಂಶೋಧನ ಕಾರ್ಯವನ್ನು ಈಗ ನಾವು ಕೈಕೊಂಡಿದ್ದು ಇವರ ಉಲ್ಲೇಖಗಳು ವೀರಶೈವ, ಆಂಧ್ರ, ಮತ್ತು ತಮಿಳು, ವಾಙ್ಮಯಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಅವುಗಳನ್ನು ಸಂಗ್ರಹಿಸಿ ಪ್ರಕಟಪಡಿಸಿದಲ್ಲಿ ವೀರಶೈವ ಧರ್ಮದ ಪ್ರಸಾರಕ್ಕೋಸ್ಕರ ಶಿವಶರಣರು ಒಂದು ಕಾಲದಲ್ಲಿ ಎಂಥ ಅಗಾಧವಾದ ಕಾರ್ಯಗಳನ್ನು ನಡೆಯಿಸಿದರೆಂಬುದು ಗೊತ್ತಾಗದೆ ಇರದು. ಆದರೆ ವೀರಶೈವ ಸಮಾಜದ ದುರ್ದೈವದಿಂದ ಈ ಎಲ್ಲ ಸಂಗತಿಗಳು ಇನ್ನುವರೆಗೂ ಪ್ರಕಟವಾಗದೆ ಉಳಿದಿರುತ್ತವೆ.

ನಾವು ಹೋದ ವರ್ಷ ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ ಎಂಬ ಗ್ರಂಥವನ್ನು ಪೂರೈಸಿದೆವು. ಇದರಲ್ಲಿ ವೀರಶೈವಾಚಾರಗಳೂ ಅಷ್ಟಾವರಣಗಳಲ್ಲಿ ಮುಖ್ಯವಾದ ಗುರುಲಿಂಗಜಂಗಮ ಈ ವಿಷಯಗಳೂ, ನಿರೂಪಿಸಲ್ಪಟ್ಟಿವೆ.

ಹೋದ ವರುಷ ನಾವು ಮೇಲ್ಕಂಡ ಕಾರ್ಯಗಳಲ್ಲದೆ 'ಶಿವಾನುಭವ ಶಬ್ದಕೋಶ' ಎಂಬ ಗ್ರಂಥವನ್ನು ಹೊಸದಾಗಿ ಪ್ರಕಟಿಸಲು ಉಪಕ್ರಮಿಸಿದ್ದೇವೆ. ವಚನಶಾಸ್ತ್ರದಲ್ಲಿ ಅನೇಕ ಪಾರಿಭಾಷಿಕ ಶಬ್ದಗಳು ಬರುತ್ತಿದ್ದು, ಅವುಗಳ ಅರ್ಥವು ಜನರಿಗೆ ಅಪರಿಚಿತವಾಗಿರುವದರಿಂದ ವೀರಶೈವ ಸಿದ್ಧಾಂತವನ್ನು ತಿಳಿಯುವದು ಬಹಳ ದುಸ್ತರವಾಗುತ್ತದೆ. ಈ ತೊಂದರೆಯನ್ನು ತಪ್ಪಿಸುವ ಉದ್ದೇಶದಿಂದ ನಾವು ಈ ಕಾರ್ಯವನ್ನು ಈಚೆಗೆ ಪ್ರಾರಂಭಿಸಿದ್ದೇವೆ. ಇದನ್ನು ಕೈಕೊಂಡ ಬಳಿಕ ಇದು ಬಹಳ ಕಠಿಣ ಕೆಲಸವೆಂದು ನಮಗೆ ತೋರಹತ್ತಿದೆ. ಸಂದರ್ಭಾನುಸಾರ ಶಬ್ದಗಳ ಅರ್ಥವು ಬದಲಾಗುವದರಿಂದ ಈ ತೊಂದರೆಯು ಉಂಟಾಗಹತ್ತಿರುತ್ತದೆ. ಬರೇ ಶಬ್ದಾರ್ಥಗಳನ್ನು ಕೊಡುವದು ಶಕ್ಯವಲ್ಲೆಂದು ನಮಗೆ ತೋರಿತು. ಆದ್ದರಿಂದ ಹೆಚ್ಚಿಗೆ ವಿವರಣೆಗಳನ್ನು ಬರೆಯಬೇಕಾಯಿತು. ಈ ಕ್ರಮವನ್ನು ಈಗ ಅನುಸರಿಸಿದ್ದರಿಂದ ಈ ಗ್ರಂಥವು ಎಲ್ಲಿಗೆ ಮುಗಿಯುವದು ಮತ್ತು ಅದು ಹೇಗೆ ಮುಗಿಯುವದು ಎಂಬದರ ತಿಳವಳಿಕೆಯು ನಮಗೆ ಏನೂ ಆಗದಂತಾಗಿದೆ. ಆದರೂ ಈ ಕಾರ್ಯವನ್ನು ನಾವು ಯಥಾಮತಿ ಮುಂದುವರಿಸಲು ಎಣಿಸಿದ್ದೇವೆ. ಇದರಲ್ಲಿ ನಾವು ಕೊಟ್ಟ ವಿವರಣೆಗಳಲ್ಲಿ ವಾಚಕರಿಗೆ ಸಂಶಯಗಳು ತೋರಿಬಂದರೆ ಅವರು ಅವುಗಳನ್ನು ನಮಗೆ ತೀವ್ರವೇ ತಿಳಿಸಬೇಕೆಂದು ವಿನಂತಿ ಇದೆ. ಅಂದರೆ ನಾವು ಅವುಗಳನ್ನು ಸರಿಪಡಿಸಿಕೊಳ್ಳುವೆವು. ಈ ಗ್ರಂಥದ ಬಹಳ ಸ್ವಲ್ಪ ಪ್ರತಿಗಳನ್ನು ನಾವು ಈಗ ಹೊರಡಿಸಿದ್ದೇವೆ. ಅದರ ಮುಂದಿನ ಆವೃತ್ತಿಯನ್ನು ನಾವು ಹೆಚ್ಚಿಗೆ ಸುಧಾರಿಸಿ ಬೇಗನೆ ಹೊರಡಿಸಬೇಕೆಂದು ನಾವು ಈ ರೀತಿ ಮಾಡಿದ್ದೇವೆ.

ಈ ಮೇರೆಗೆ ಹೋದ ವರ್ಷ ನಾವು ನಡಿಸಿದ ಸಂಶೋಧನ ಕಾರ್ಯಗಳಲ್ಲಿ ಮುಖ್ಯವಾದವುಗಳನ್ನು ನಮ್ಮ ವಾಚಕರ ಇದಿರಿಗೆ ಇಟ್ಟಿದ್ದೇವೆ. ಈ ಕಾರ್ಯದಲ್ಲಿ ವಾಚಕರಿಗೆ ತೋರಿಬಂದ ಲೋಪದೋಷಗಳನ್ನು ನಮಗೆ ಅರುಹಿ ಇದರಲ್ಲಿ ಸಹಾಯಕರಾಗಬೇಕೆಂದು ನಮ್ಮ ವಿನಂತಿ ಇದೆ.

## ಶಿವಾನುಭವ ಸಂಘಗಳು

ಶಿವಶರಣರ ವಾಙ್ಮಯವು ೧೦-೧೫ ವರ್ಷಗಳಿಂದ ಈ ವರೆಗೂ ಪ್ರಕಟವಾಗುತ್ತ ಬಂದರೂ ಕೂಡ ಅದರ ಅಭ್ಯಾಸವು ವೀರಶೈವ ಸಮಾ

ಜದಲ್ಲಿ ಸಾಕಷ್ಟು ಆಗಿರುವದಿಲ್ಲೆಂಬುದು ಯಾರಿಗಾದರೂ ನಿದರ್ಶನಕ್ಕೆ ಬರುವ ಸಂಗತಿಯಾಗಿದೆ. ವೀರಶೈವರಲ್ಲಿ ಲೇಖಕರು ಬಹಳ ಕಡಿಮೆ ಮತ್ತು ವಾಚನಾಭಿರುಚಿಯುಳ್ಳವರೂ ಕೂಡ ಕಡಿಮೆ. ಆದುದರಿಂದ ವಚನಗಳ ಅಭ್ಯಾಸವು ಸಮಾಜದಲ್ಲಿ ಸಾಕಷ್ಟು ಉಂಟಾಗಿರುವದಿಲ್ಲ.

ವಚನ ವಾಙ್ಮಯ ಪ್ರಚಾರ ಕಾರ್ಯವು ಮುಂಬಯಿ ವಿಶ್ವವಿದ್ಯಾಲಯದ ಮತ್ತು ಹಾಯಸ್ಕೂಲಿನ ಪಠ್ಯ ಪುಸ್ತಕಗಳ ಮೂಲಕ ಮೊದಲು ಆರಂಭವಾಯಿತೆಂದು ಹೇಳಬಹುದು. ವಚನ ವಾಙ್ಮಯದಲ್ಲಿಯ ಅವತರಣಿಕೆಗಳು ಇವುಗಳಲ್ಲಿ ಸೇರ್ಪಡೆ ಮಾಡಲ್ಪಟ್ಟವು. ಮತ್ತು ಕೆಲವು ಮಹತ್ವದ ತರಗತಿಗಳಲ್ಲಿ ಅಂದರೆ ಬಿ. ಎ. ಮತ್ತು ಎಮ್. ಎ. ಕ್ಲಾಸುಗಳಲ್ಲಿ ಅವುಗಳ ಸ್ವತಂತ್ರ ಗ್ರಂಥಗಳನ್ನು ವಿಶ್ವವಿದ್ಯಾಲಯದ ಅಭ್ಯಾಸ ನಿಯಾಮಕ ಮಂಡಳಿಯವರು ನಿಯಮಿಸುತ್ತಬಂದರು. ಇದರಿಂದ ಕಾಲೇಜುಗಳಲ್ಲಿಯ ಕನ್ನಡ ಪ್ರೊಫೆಸರರು ಇವುಗಳ ಅಭ್ಯಾಸ ಮಾಡಿ ವಿಮರ್ಶಾತ್ಮಕ ಕೆಲವು ಮಹತ್ವದ ಗ್ರಂಥಗಳನ್ನು ರಚಿಸಿದ್ದಾರೆ. ಇದು ಅವರ ಸ್ತುತ್ಯ ಪ್ರಯತ್ನವಾಗಿದೆ. ವಿದ್ಯಾರ್ಥಿಗಳಾದರೂ ಈ ಗ್ರಂಥಗಳನ್ನು ಚನ್ನಾಗಿ ಅಭ್ಯಾಸ ಮಾಡಬೇಕಾಯಿತು. ಇದರಿಂದ ವಚನ ಗ್ರಂಥಗಳು ನಮ್ಮ ನಾಡಿನಲ್ಲಿಯ ವಿದ್ವಾಂಸರಲ್ಲಿ ಪ್ರಚಾರದಲ್ಲಿ ಮೊದಲು ಬರಲು ಕಾರಣವಾಯಿತು.

ಶಿವಶರಣರ ವಿಚಾರಗಳಲ್ಲಿ ಸ್ಪೃಶ್ಯಾಸ್ಪೃಶ್ಯತೆಯ ವಿಚಾರಗಳಿರುವದಿಲ್ಲ. ಅವರಿಂದ ಜಾತಿ ಭೇದಗಳು ಅಂಗೀಕರಿಸಲ್ಪಟ್ಟಿಲ್ಲ. ವಿಶ್ವ ಧರ್ಮಕ್ಕೆ ಬೇಕಾಗುವ ಲಕ್ಷಣಗಳು ಅವರ ಗ್ರಂಥಗಳಲ್ಲಿರುತ್ತವೆ. ಆದ್ದರಿಂದ ವೀರಶೈವೇತರ ರಾಜಕೀಯ ಮತ್ತು ಸಾಮಾಜಿಕ ಚಳವಳಿಗಾರರೆಲ್ಲರೂ ಶಿವಶರಣರ ಉಕ್ತಿಗಳನ್ನು ಉಪಯೋಗಿಸುತ್ತಲೂ ಲೇಖಗಳನ್ನೂ ಬರೆಯುತ್ತಲೂ ಬಂದರು. ಇದರಿಂದ ಎಲ್ಲ ತರದ ಜನರಲ್ಲಿ ಶಿವಶರಣರ ವಾಙ್ಮಯದ ಬಗ್ಗೆ ಸಹಾನುಭೂತಿಯು ಉತ್ಪನ್ನವಾಯಿತು.

ಆದರೆ ೧೦-೧೫ ವರ್ಷಗಳ ಹಿಂದೆ ನಾಲ್ಕೈದು ಜನ ಶಿವಶರಣರಕ್ಕಿಂತಲೂ ಹೆಚ್ಚಿಗೆ ವಚನಗಳನ್ನು ಬರೆದ ಶಿವಶರಣ ಹೆಸರುಗಳೇ ಗೊತ್ತಿರಲಿಲ್ಲ. ಮತ್ತು ಅವರು ರಚಿಸಿದ ವಚನಗಳಂತೂ ಯಾರಿಗೂ ಗೊತ್ತಿರಲಿಲ್ಲ. ಆದರೆ ವಚನ ಶಾಸ್ತ್ರಸಾರದಲ್ಲಿಯ ಗ್ರಂಥಗಳ ಮೂಲಕ ನೂರಾರು ಜನ ಶಿವಶರಣರ ಹೆಸರುಗಳು ಮಾತ್ರವಲ್ಲದೆ ಅವರ ಉದ್ಬೋಧಕ ವಚನಗಳೂ ಕೂಡ ಜನರ ತಿಳುವಳಿಕೆಗೆ ಬಂದವು. ಇದರಿಂದ ವಚನ

ಗ್ರಂಥಗಳು ಒಂದು ಉಚ್ಚ ವಾಙ್ಮಯವನ್ನು ಉಂಟುಮಾಡಿರುತ್ತವೆಂಬುದು ಕನ್ನಡ ಸಾಹಿತಿಗಳಿಗೆ ತಿಳಿದು ಅವರು ಇವುಗಳನ್ನು ಆದರಿಸ ಹತ್ತಿದರು ಮತ್ತು ಇವುಗಳಿಗೆ ಆ ಮೇರೆಗೆ ಅವರು ತಮ್ಮ ವಿವೇಚನೆಗಳಲ್ಲಿ ಉಚ್ಚಸ್ಥಾನವನ್ನು ಕೊಡಲಿಕ್ಕೆ ಹತ್ತಿದರು. ಇದರಿಂದ ಈ ವಚನಗಳ ಮಹತ್ವವು ಮತ್ತಿಷ್ಟು ಹೆಚ್ಚಾಯಿತು.

ಮೇಲ್ಕಂಡ ಕಾರಣಗಳ ಮೂಲಕ ಈ ಮಹತ್ವದ ವೀರಶೈವ ವಚನ ವಾಙ್ಮಯಕ್ಕೋಸ್ಕರ ಅನುಕೂಲ ವಾತಾವರಣವು ಕರ್ನಾಟಕದಲ್ಲೆಲ್ಲ ಉಂಟಾಗಿರುವದೇನೋ ನಿಜವು. ಅವರೆ ವೀರಶೈವರು ಇಷ್ಟರಿಂದಲೇ ತಮ್ಮ ಕಾರ್ಯವಾಯಿತೆಂದು ಭಾವಿಸಬಾರದು. ಅವರು ವಚನಗಳನ್ನು ಇತರ ಸಮಾಜದವರಂತೆ ಮನ್ನಿಸುವದಷ್ಟೇ ಅಲ್ಲ, ಅವುಗಳಲ್ಲಿ ಅಡಕವಾಗಿರುವ ಸಿದ್ಧಾಂತವನ್ನು ಅವರು ಅರಿಯತಕ್ಕದ್ದು, ಮತ್ತು ಅದನ್ನು ಅರಿತು ಅದರಂತೆ ಆಚರಿಸತಕ್ಕದ್ದು ಅವರ ಕರ್ತವ್ಯವಾಗಿದೆ. ಇದು ವೀರಶೈವೇತರರಾದ ಇತರ ಸಮಾಜದವರಿಗೆ ಅನ್ವಯಿಸುವದಿಲ್ಲ. ಯಾಕಂದರೆ ಅವರು ತಮ್ಮ ತಮ್ಮ ಧರ್ಮಗಳಂತೆ ನಡೆಯುವವರು. ವಚನಕಾರರ ಆಚರಣೆಗೆ ಅವರು ಬದ್ಧರಲ್ಲ. ಹೀಗೆ ಬದ್ಧರಾದವರು ವೀರಶೈವರೇ ಇದ್ದಾರೆ. ಈ ದೃಷ್ಟಿಯಿಂದ ವಚನ ಶಾಸ್ತ್ರದ ಪ್ರಸಾರ ಮಾಡುವ ಬಹು ದೊಡ್ಡ ಜವಾಬದಾರಿಯು ಅವರ ಮೇಲೆ ಇರುತ್ತದೆಂಬದು ಸ್ಪಷ್ಟವದೆ. ಈ ಉದ್ದೇಶವನ್ನಿಟ್ಟುಕೊಂಡು ನಾವು ಎಲ್ಲ ಕಡೆಗೆ ಶಿವಾನುಭವ ಸಂಘಗಳನ್ನು ಸ್ಥಾಪಿಸಲು ಈಚೆಗೆ ಪ್ರಯತ್ನಿಸುತ್ತಾ ಇದ್ದೇವೆ.

ಆದರೆ ಈ ಪ್ರಯತ್ನವು ನಾವು ಹೊಸದಾಗಿ ಕೈಕೊಂಡದ್ದಲ್ಲ. ಯಾವ ಬಸವಾದಿ ಪ್ರಮಥರು ಧರ್ಮಜಾಗ್ರತಿಯ ಕಾರ್ಯಗಳನ್ನು ಶಿವಾನುಭವ ಮಂಟಪಗಳ ದ್ವಾರಾ ಜರಗಿಸಿದರೋ, ಅದೇ ಮಾರ್ಗವನ್ನು ಅನುಸರಿಸುವದೇ ಈ ಸಂಘಗಳ ಮುಖ್ಯ ಧ್ಯೇಯವಾಗಿರುತ್ತದೆ. ಈ ಸಂಘಗಳ ಮುಖಾಂತರ ಗ್ರಾಮಾಂತರಗಳಲ್ಲಿ ವಚನ ಶಾಸ್ತ್ರದ ಅಭ್ಯಾಸಕ್ಕೆ ಉತ್ತೇಜನ ಕೊಡಬೇಕು ಮತ್ತು ವಚನಗಳಲ್ಲಿ ಹೇಳಿದ ಆಚರಣೆಗಳನ್ನು ಶಕ್ಯವಿದ್ದಷ್ಟರ ಮಟ್ಟಿಗೆ ಸಭಾಸದರು ಕೃತಿಯಲ್ಲಿ ತರಬೇಕು ಈ ಉದ್ದೇಶಗಳೇ ಇವುಗಳಿಗೆ ಮುಖ್ಯವಾಗಿರುತ್ತವೆ. ಈ ಸಂಘಗಳಲ್ಲಿರುವವರು ಶಿವಶರಣರ ತತ್ವಗಳನ್ನು ತಾವು ಮೊದಲು ತಿಳಿದುಕೊಳ್ಳಬೇಕು, ತಿಳಿದುಕೊಂಡು ಶಕ್ಯವಿದ್ದಷ್ಟರಮಟ್ಟಿಗೆ ಆಚರಿಬೇಕು, ಹೀಗೆ ಆಚರಿಸಿ ತಮ್ಮ

ಈ ಆಚರಣೆಗಳ ಮೂಲಕ ಅವುಗಳನ್ನು ಸಮಾಜದಲ್ಲಿ ಪ್ರಸಾರ ಮಾಡಬೇಕು, ಇವುಗಳೇ ಶಿವಾನುಭವ ಸಂಘಗಳ ಉದ್ದೇಶಗಳಾಗಿವೆ. ಬರೇ ವಿದ್ವತ್ಪೂರಿತ ವ್ಯಾಖ್ಯಾನಗಳನ್ನು ಕೊಡುವದರಿಂದ ಶಿವಾನುಭವದ ಆಚರಣೆಯು ಉಂಟಾಗಲಾರದು. ಇಂಥವರಕಿಂತಲೂ ಅದರ ತತ್ವಗಳಂತೆ ತಿಳಿದಷ್ಟರ ಮಟ್ಟಿಗೆ ನಡೆಯುವವರು ಹೆಚ್ಚಿಗೆ ಈ ಕಾರ್ಯದಲ್ಲಿ ಸಹಾಯ ಕರಾಗುವರು. ಆದ್ದರಿಂದ ವೇತನಗಳನ್ನು ತೆಗೆದುಕೊಂಡು ಬರೇ ಸಂಚಾರ ವನ್ನು ಮಾಡುತ್ತ ಜನರಲ್ಲಿ ತತ್ವಗಳನ್ನು ಹೇಳುತ್ತ ಹೋಗುವ ಬೋಧಕ ರಿಂದ ಆಗುವ ಪರಿಣಾಮಗಳು ಬಹಳ ದಿವಸ ನಿಲ್ಲಲಾರವು. ಆದರೆ ಭಕ್ತಿ ವಿಶ್ವಾಸವುಳ್ಳ ಕೆಲ ಜನರು ಕೂಡಿಕೊಂಡು ಪ್ರಮಥರ ವಿಚಾರಗಳನ್ನು ತಿಳಿಯಲಿಕ್ಕೆ ಮನಸ್ಸು ಮಾಡಿ ಆ ರೀತಿ ಸ್ವತಃ ಪ್ರಯತ್ನಿಸಬೇಕು ಮತ್ತು ಹಾಗೆ ಅರಿತು ನಡೆಯಲು ಅವರು ತಮ್ಮ ಶಕ್ಯವಿದ್ದಷ್ಟರ ಮಟ್ಟಿಗೆ ಯತ್ನಿಸ ಬೇಕು, ಇಂಥವರೇ ಈ ಕಾರ್ಯದಲ್ಲಿ ಉಪಯೋಗವುಳ್ಳವರಾಗುವರು. ಈ ತರದ ಪ್ರವೃತ್ತಿಯನ್ನು ಗ್ರಾಮಾಂತರಗಳಲ್ಲಿ ಉಂಟು ಮಾಡುವದೇ ನಾವು ಏರ್ಪಡಿಸಲು ಎಣಿಸಿರುವ ಶಿವಾನುಭವ ಸಂಘಗಳ ಉದ್ದೇಶವಾಗಿರು ತ್ತದೆ. ಈ ಕಾರ್ಯಕ್ಕೋಸ್ಕರ ಗ್ರಾಮಗಳಲ್ಲಿ ಓದುವವರಿಗೆ ಸಾಕಷ್ಟು ಗ್ರಂಥಗಳು ಮಾತ್ರ ಬೇಕು. ಇವುಗಳಿಗೋಸ್ಕರ ಬೇಕಾಗುವಷ್ಟು ಧನ ಸಹಾಯವನ್ನು ಇವುಗಳು ಮಾಡಿಕೊಳ್ಳಬೇಕು. ಮತ್ತು ಅವುಗಳನ್ನು ತಿಳಿಯಲಪೇಕ್ಷಿಸುವ ಕೆಲವು ಉತ್ತಮ ನಡತೆಯುಳ್ಳ ಜನರನ್ನು ತಮ್ಮ ಗ್ರಾಮದಲ್ಲಿಯೇ ದೊರಕಿಸಿಕೊಳ್ಳಬೇಕು. ಈ ತರದ ವಿಶೇಷ ಪ್ರಯತ್ನ ಗಳಿಂದ ಗ್ರಾಮಗಳಲ್ಲಿ ಬಲವಾದ ಶಿವಾನುಭವ ಸಂಘಗಳು ಉತ್ಪನ್ನವಾಗು ವವು. ಆದರೆ ಕೆಲವರು ರಾಜಕೀಯ ಪರಿಷತ್ತುಗಳನ್ನು ನೆರೆಯಿಸುವಂತೆ ಈ ಬಗ್ಗೆ ದೊಡ್ಡ ಸಮ್ಮೇಲನಗಳನ್ನು ನೆರೆಯಿಸಬೇಕೆಂದು ಅನೇಕರು ನಮಗೆ ಸೂಚಿಸುತ್ತಾರೆ. ಆದರೆ ವ್ಯವಸ್ಥಿತವಾಗಿ ನಡೆದ ಗ್ರಾಮ ಶಿವಾನುಭವ ಸಂಸ್ಥೆಗಳು ಆಗದೆ ಹೋದಲ್ಲಿ ಇಂಥ ಸಮ್ಮೇಲನಗಳಲ್ಲಿ ಬರೇ ಮಾತುಗಾ ರರು ಮತ್ತು ಪ್ರತಿಷ್ಠೆಯನ್ನು ಬಯಸುವವರು ಮಾತ್ರ ಪ್ರಮುಖ ಸ್ಥಾನ ವನ್ನು ಹೊಂದಿ ನಿಜವಾದ ಕೆಲಸಗಾರರು ಹಿಂದುಳಿಯುವರು. ಕೆಲಸಗಾ ರರು ಹಿಂದುಳಿಯುವದರಿಂದ ಸುಧಾರಣೆಯ ಕಾರ್ಯಗಳು ಅಲ್ಲಿಯೇ ನಿಂತು ಹೋಗುತ್ತವೆ.

ಮೇಲ್ಕಂಡ ರೀತಿಯಿಂದ ಶಿವಾನುಭವ ಸಂಘಗಳನ್ನು ಸ್ಥಾಪಿಸಲು ಕೆಲವು ತಿಂಗಳುಗಳ ಹಿಂದೆ ಶಿವಾನುಭವ ಪತ್ರಿಕೆಯ ದ್ವಾರಾ ನಮ್ಮ

ಸೂಚನೆಗಳನ್ನು ಪ್ರಕಟಿಸಿದೆವು. ಅವುಗಳಿಗನುಸರಿಸಿ ೬೫ ಗ್ರಾಮಗಳಲ್ಲಿ ಕಾರ್ಯ ಮಾಡಲು ಒಪ್ಪಿದವರ ಕಡೆಯಿಂದ ಪತ್ರಿಕೆಗಳು ನಮ್ಮ ಕಡೆಗೆ ಬಂದಿರುತ್ತವೆ. ಆದರೆ ಪ್ರತಿಯೊಂದು ಗ್ರಾಮದಲ್ಲಿ ಶಿಕ್ಷಣ ಕೊಡತಕ್ಕವರ ಕೊರತೆಯು ಬಹಳ ಇದ್ದದ್ದು ಕಂಡು ಬರುತ್ತದೆ. ಈಗ ಈ ಗ್ರಾಮಗಳಲ್ಲಿಯ ಜನರು ತಮ್ಮಲ್ಲಿ ಒಬ್ಬರನ್ನು ಆರಿಸಿಕೊಂಡು ಒಂದು ವಸನೆರೆದು ಗ್ರಂಥಗಳನ್ನು ಓದುತ್ತಲಿರುವರು. ಕೆಲವು ಗ್ರಾಮಗಳನ್ನು ವು ಬೇರೆ ಗ್ರಾಮಗಳಲ್ಲಿ ಈ ಬಗ್ಗೆ ಯೋಜನೆಯು ಅಷ್ಟು ಸಮರ್ಪಕವಾಗಿರುವದಿಲ್ಲ. ಈ ತೊಂದರೆಯನ್ನು ಹೋಗಲಾಡಿಸುವದಕ್ಕೋಸ್ಕರ ಒಂದು ಶಿವಾನುಭವ ಬೋಧಕ ವರ್ಗವನ್ನು ಪ್ರಾರಂಭಿಸಬೇಕೆಂದು ಯೋಚಿಸಿದ್ದೇವೆ. ಆದರೆ ಈ ಕಾರ್ಯವನ್ನು ಕೈಕೊಳ್ಳುವದರಕ್ಕಿಂತ ... ಮೊದಲು ಬೇರೆ ಬೇರೆ ಪ್ರಾಂತಗಳಲ್ಲಿ ಇನ್ನೂ ಹೆಚ್ಚಾಗಿ ಶಿವಾನುಭವ ಸಂಘಗಳು ಸ್ಥಾಪಿಸಲ್ಪಡುವದು ಅವಶ್ಯವದೆ. ಆದ್ದರಿಂದ ಶಿವಾನುಭವ ಪತ್ರಿಕೆಯ ವಾಚಕರು ಈ ಕಾರ್ಯದಲ್ಲಿ ಮುಂದಾಗಿ ಈ ಬಗ್ಗೆ ತಿಳಿಸಬೇಕೆಂದು ನಮ್ಮ ವಿನಂತಿ ಇದೆ. ಯಾರು ಈ ಕಾರ್ಯ ಮಾಡಲಿಚ್ಛಿಸುವರೋ ಅವರು ತಮ್ಮ ಅಭಿಪ್ರಾಯಗಳನ್ನು ನಮಗೆ ತಿಳಿಸಿದಲ್ಲಿ ಅವರಿಗೆ ಆವಶ್ಯಕ ಮಾಹಿತಿಯು ಪೂರೈಸಲ್ಪಡುವದು.

---

ಸ್ಥಿತಿ ಇವುಗಳ ನಡುವಿನದೆಂದು ಹೇಳಬಹುದು. ಇಲ್ಲಿಂದಲೇ ದೃಶ್ಯ ಜಗತ್ತಿನ ಉದಯವು. ಇದು ಗೋಳಕಾಕಾರವೆಂದು ವರ್ಣಿಸಲ್ಪಡುತ್ತಿದೆ.

(೨೩) ಸಾದಾಖ್ಯಗಳು:— ಇವು ಮೇಲೆ ನಂ॥ ೨೨ ನೆಯದರಲ್ಲಿ ವಿವರಿಸಿದ ಮಹಾಲಿಂಗದೊಳಗಿಂದ ಉದ್ಭವಿಸುತ್ತವೆ. ಮಹಾಲಿಂಗದಲ್ಲಿ ಜಗತ್ತು ಇನ್ನೂ ಪ್ರಕಟವಾಗಿರುವುದಿಲ್ಲ. ಆದರೆ ಪ್ರಕಟವಾಗಲು ಬೇಕಾಗುವ ಪರಿಸ್ಥಿತಿಯು ಅದರೊಳಗುಂಟಾಗಿರುತ್ತದೆ. ಈ ಮಹಾಲಿಂಗದೊಳಗಿಂದ ಸಾದಾಖ್ಯಗಳು ಜಗತ್ತಿನಲ್ಲಿ ಕ್ರಮೇಣ ತೋರಹತ್ತುತ್ತವೆ. ಈ ಸಾದಾಖ್ಯಗಳಲ್ಲಿ ಜಗತ್ತು ಪ್ರಕಟವಾಗಲು ಬೇಕಾಗುವ ಸಾಧನ ಸಾಮಗ್ರಿಗಳೆಲ್ಲ [illegible] ಪಡುತ್ತವೆ. ದೃಶ್ಯ ಪದಾರ್ಥಗಳಿಗೆಲ್ಲ ಬೇಕಾಗುವ ಸಾಮಗ್ರಿಗಳು ಸ್ವಾಭಾವಿಕವಾಗಿ ಅಸಂಖ್ಯವಾಗಿರುತ್ತವೆ. ಯಾಕೆಂದರೆ ಒಂದೊಂದು ಪದಾರ್ಥಕ್ಕೆ ಅನೇಕ ಬಗೆಯ ಸಾಮಗ್ರಿಗಳು ಬೇಕು. ಹೀಗೆ ಇಂಥ ಪದಾರ್ಥಗಳು ಅಗಣಿತವಾಗಿದ್ದರೂ ಕೂಡ ಅವುಗಳಿಗೆ ಬೇಕಾಗುವ ವಸ್ತುಗಳಲ್ಲಿ ವಚನಕಾರರು ಐದೇ ಮುಖ್ಯ ವರ್ಗಗಳನ್ನು ಮಾಡುವದುಂಟು. ಇವುಗಳೆಲ್ಲವೂ ಐದು ಸಾದಾಖ್ಯಗಳಲ್ಲಿಯೇ ಇರುತ್ತವೆ. ಈ ಸಾದಾಖ್ಯಗಳು ಮಹಾ ಸಾದಾಖ್ಯ, ಶಿವಸಾದಾಖ್ಯ, ಅಮೂರ್ತಿ ಸಾದಾಖ್ಯ, ಮೂರ್ತಿ ಸಾದಾಖ್ಯ, ಕರ್ತೃ ಸಾದಾಖ್ಯ, ಕರ್ಮ ಸಾದಾಖ್ಯ ಎಂದು ಇವೆ. ಅವು ಅನುಕ್ರಮವಾಗಿ ಒಂದರ ತರುವಾಯ ಒಂದು ಹೊರಡುತ್ತವೆ. ಮಹಾ ಸಾದಾಖ್ಯದಲ್ಲಿ ಹೊರಪಡುವ ಸಾಮಗ್ರಿಗಳು ಅತ್ಯಂತ ಸೂಕ್ಷ್ಮವಾದವುಗಳು. ಆ ಮೇಲೆ ಕ್ರಮವಾಗಿ ಹೊರಹೊರಡುವ ಸಾದಾಖ್ಯಗಳೊಳಗಿಂದ ಕ್ರಮೇಣ ಹೆಚ್ಚು ಹೆಚ್ಚು ಸ್ಥೂಲತರವಾದ ಸಾಮಗ್ರಿಗಳು ಉಂಟಾಗುತ್ತವೆ. ಈ ಸಾಮಗ್ರಿಗಳೆಂದರೆ ಶಕ್ತಿಗಳು, ಪಂಚಮಹಾಭೂತಗಳು, ಕಲೆಗಳು, ಪ್ರಣಮಗಳು, ತತ್ವಗಳು ಇವೇ ಮುಖ್ಯವಾದವುಗಳಿರುತ್ತವೆ. ಇವುಗಳಲ್ಲಿ ಆವ ಆವವು, ಆವ ಆವ ಸಾದಾಖ್ಯಗಳಲ್ಲಿ ಪ್ರಕಟವಾಗುತ್ತವೆಂಬುದನ್ನು ವಚನಕಾರರು ತಮ್ಮ ವಚನಗಳಲ್ಲಿ ವಿವರಿಸುತ್ತಾರೆ. ಉದಾಹರಣಾರ್ಥವಾಗಿ, ಮಹಾಲಿಂಗವು ಓಂಕಾರ ಸ್ವರೂಪವಾಗಿರುತ್ತದೆ. ಈ ಓಂಕಾರದಿಂದ ಬೇರೆ ೫ ಪ್ರಣವಾಕ್ಷರಗಳು ಉಂಟಾಗುತ್ತವೆ. ಈ ಅಕ್ಷರಗಳಿಂದ ಪಂಚಕಲೆಗಳು ಉದ್ಭವಿಸುತ್ತದೆ. ಈ ಕಲೆಗಳಲ್ಲಿ ಪಂಚಶಕ್ತಿಗಳು ಪ್ರಕಟವಾಗುತ್ತವೆ. ಪಂಚಭೂತಗಳು ಒಂದು ಬಗೆಯ ಶಕ್ತಿಗಳಿದ್ದು ಇವು ಕೂಡ ಇವುಗಳೊಳಗಿಂದ ಹೊರಡುತ್ತವೆ. ಇವೆಲ್ಲವೂ

ಜಗತ್ತು ನಿರ್ಮಾಣವಾಗಲು ಬೇಕಾಗುವ ಸಾಧನಸಾಮಗ್ರಿಗಳೇ ಇರುತ್ತವೆ. ಇವುಗಳೆಲ್ಲ ಕ್ರಮವಾಗಿ ಮೇಲೆ ಹೇಳಿದ ಪಂಚ ಸಾದಾಖ್ಯಗಳಲ್ಲಿ ತಲೆದೋರುತ್ತವೆ. ಮೊದಲಿನ ಮೂರು ಸಾದಾಖ್ಯಗಳಾದ ಮಹ, ಶಿವ, ಅಮೂರ್ತಿ ಇವು ಅತ್ಯಂತ ಸೂಕ್ಷ್ಮವಾದವುಗಳು. ಮುಂದಿನ ಮೂರು ಸಾದಾಖ್ಯಗಳಾದ ಮೂರ್ತಿ, ಕರ್ತೃ, ಕರ್ಮ ಇವು ಹೆಚ್ಚಿಗೆ ಸ್ಥೂಲವಾದವುಗಳು. ಇವಗಳು ಲಿಂಗಗಳ ಪ್ರಕಾಶಗಳೆಂತಲೂ ಹೇಳಲ್ಪಡುತ್ತವೆ. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಈ ಲಿಂಗಗಳ ಪ್ರಕಾಶವೇ ಸಾದಾಖ್ಯಗಳೆಂತಲೂ ವರ್ಣಿಸಲ್ಪಡುವದುಂಟು.

ಈ ಸಾದಾಖ್ಯಗಳು ಶಿವಾಗಮಗಳಲ್ಲಿ ಉಲ್ಲೇಖವಾಗಿರೂದೇ. ವಚನಕಾರರು ಅವುಗಳನ್ನೇ ತಮ್ಮ ವಚನಗಳಲ್ಲಿ ಪ್ರತಿಪಾದಿಸುತ್ತಾರೆ. ಈ ಸಾದಾಖ್ಯಗಳು ಬ್ರಹ್ಮಾಂಡದಲ್ಲಿರುವಂತೆಯೇ ವ್ಯಕ್ತಿಯಲ್ಲಿಯೂ ಅಂದರೆ ಪಿಂಡಾಂಡದಲ್ಲಿಯೂ ಇರುತ್ತವೆ. ಆಗ ಅವುಗಳ ವಿವರಣೆಯನ್ನು ಷಟ್‌ಸ್ಥಲಾತ್ಮಕವಾಗಿ ವಚನಕಾರರು ಮಾಡುವದುಂಟು. ಅವುಗಳು ಆಗ ಸ್ಥಲ, ಚಕ್ರ, ಲಿಂಗ ಈ ಮೊದಲಾದ ಶಬ್ದಗಳಿಂದ ವಿವೇಚಿಸಲ್ಪಡುತ್ತವೆ. ಆದರೆ ಸಾದಾಖ್ಯ ಈ ಶಬ್ದವನ್ನು ವಿಶ್ವಕ್ಕೆ ಸಂಬಂಧಿಸಿ ವಚನಕಾರರು ತಮ್ಮ ವಚನಗಳಲ್ಲಿ ಬಹುತರವಾಗಿ ನಿರೂಪಿಸುವದುಂಟು.

(೨೪) ಪ್ರಣವಃ— ಪ್ರಣವವು ಅಂದರೆ ಓಂಕಾರವು. ಇದು ಮೇಲೆ ನಂ॥ ೨೨ ಇದರಲ್ಲಿ ಹೇಳಿದಂತೆ ಮಹಾಲಿಂಗವಾಗಿರುತ್ತದೆ. ಮೇಲೆ ೧೧ನೆಯದರಲ್ಲಿ ನಾದ ಬಿಂದು ಕಲೆಗಳು ವಿವರಿಸಲ್ಪಟ್ಟಿವೆ. ಇವುಗಳು ದೃಶ್ಯಪದಾರ್ಥಗಳಿಗೆ ಕಾರಣವಾದವುಗಳು. ಇವುಗಳ ಅತ್ಯಂತ ಆರಂಭದ ಸ್ವರೂಪಗಳು ಅಂದರೆ ಚಿತ್‌ಸ್ವರೂಪಗಳು- ಇವುಗಳು ಚಿನ್ನಾದ ಚಿದ್ಬಿಂದು ಚಿತ್ಕಲೆಗಳೇ—ಇದ್ದು ಅವು ಅನುಕ್ರಮವಾಗಿ ಅಕಾರ, ಉಕಾರ, ಮಕಾರಗಳೆಂದು ಹೇಳಲ್ಪಡುತ್ತವೆ. ಇವುಗಳಿಗೆ ಬೀಜಾಕ್ಷರಗಳೆಂಬ ಹೆಸರೂ ಇದೆ. ಇವುಗಳೊಡನೆ ಮೂಲಚಿತ್ತು (ಮೇಲೆ ನಂ॥ ೧೯ ನೋಡಿರಿ) ಬೆರೆತೊಡನೆಯೇ ಓಂಕಾರವು ಅಂದರೆ ಪ್ರಣವವು ಉದ್ಭವಿಸುತ್ತದೆ. ಆದುದರಿಂದ ಅ, ಉ, ಮ ಇವುಗಳ ಬೆರಿಕೆಯೇ ಓಂಕಾರವೆಂದು ಹೇಳಲ್ಪಡುತ್ತಿದೆ. ನಾದ ಬಿಂದು ಕಲೆಗಳು ಜಗತ್ತಿನಲ್ಲೆಲ್ಲ ವ್ಯವಹರಿಸುತ್ತವೆಂದು ಹೇಳಿದ್ದರಿಂದ ಈ ಅ ಉ ಮ ಅಕ್ಷರಗಳಿಂದ ಕೂಡಿದ ಓಂಕಾರವು ಅಥವಾ ಮೂಲ ಪ್ರಣವವಾದರೂ ಈ ಜಗತ್ತಿನಲ್ಲೆಲ್ಲ ತುಂಬಿ

ಕೊಂಡಿರುತ್ತದೆ. ಅದು ಅತ್ಯಂತ ಸೂಕ್ಷ್ಮವಾದುದರಿಂದ ಸ್ಥೂಲ ಶರೀರಿಯಾದ ಮಾನವನ ಶ್ರೋತ್ರಕ್ಕೆ ಕೇಳಬರುವುದಿಲ್ಲ. ಹಾಗೆ ಕೇಳಬರದಿದ್ದರೂ ಅದು ವಿಶ್ವವನ್ನು ಆವರಿಸಿದೆ. ಈ ಅ, ಉ, ಮ ಅಕ್ಷರಗಳು ಬೀಜಾಕ್ಷರಗಳೆಂಬ ಹೆಸರಿನಿಂದ ಹೇಳಲ್ಪಡುವದಲ್ಲದೆ ಅವು ಅನುಕ್ರಮವಾಗಿ ರುದ್ರ, ಈಶ್ವರ, ಸದಾಶಿವ, ಎಂಬ ಅಧಿದೇವತೆಗಳ ಸ್ಥಾನಗಳೆಂತಲೂ ಹೇಳಲ್ಪಡುವದುಂಟು. ಅಲ್ಲದೆ ಅವು ಅನುಕ್ರಮವಾಗಿ ಬ, ಸ, ವ, ಈ ಮೂರು ಅಕ್ಷರಗಳಿಂದ ಸಹ ಉಚ್ಚರಿಸಲ್ಪಡುವದುಂಟು. ಆಗ ಇವಾದರೂ ಪ್ರಣವಾಕ್ಷರ ಅಥವಾ ಬೀಜಾಕ್ಷರಗಳೆಂದು ವಚನಕಾರರು ಹೇಳಿರುತ್ತಾರೆ. ಆದರೆ ಇಲ್ಲಿ ಬಸವ ಎಂದರೆ ಬಿಜ್ಜಳನ ಮಂತ್ರಿಯಾದ ಬಸವ ಎಂಬ ಭಾವವಿರದೆ ಯಾವ ಅ, ಉ, ಮ ಬೀಜಾಕ್ಷರಗಳನ್ನು ಉಚ್ಚರಿಸುವಲ್ಲಿ ಯಾವ ಭಾವವಿರಬೇಕೋ ಆ ಭಾವವೇ ಮುಖ್ಯವಾಗಿದ್ದುಕೊಂಡು ಈ ಮೂರು ಬ, ಸ, ವ ಅಕ್ಷರಗಳನ್ನು ಉಚ್ಚರಿಸಿದಲ್ಲಿ ಪರಿಣಾಮದಲ್ಲಿ ಮೂಲ ಅ, ಉ, ಮ ಈ ಬೀಜಾಕ್ಷರಗಳಷ್ಟೇ ಇವಾದರೂ ಪರಿಣಾಮಕಾರಿಗಳು ಮತ್ತು ಅರ್ಥಬೋಧಕವಾದವುಗಳು ಎಂದು ತಿಳಿಯಬೇಕು.

(೨೫) ಷಟ್‌ಸ್ಥಲ ಬ್ರಹ್ಮಮೂರ್ತಿಗಳು:— ಒಂದೊಂದು ಸಾದಾಖ್ಯಕ್ಕೆ ಒಬ್ಬೊಬ್ಬ ಅಧಿದೇವತೆಗಳಿರುತ್ತಾರೆ. ಪರಶಿವನ ಸ್ವರೂಪಗಳೇ ಇವರು ಎಂದು ಹೇಳಬಹುದು. ಸಾದಾಖ್ಯಗಳಲ್ಲಿ ಹೊರಡುವ ಶಕ್ತಿಗಳು, ತತ್ವಗಳು, ಮೊದಲಾದವುಗಳನ್ನು ನಿಯಂತ್ರಣ ಮಾಡುವ ಕಾರ್ಯವನ್ನು ಈ ಅಧಿದೇವತೆಗಳು ಮಾಡುತ್ತಾರೆ. ಅವರ ಹೆಸರುಗಳು ಅನುಕ್ರಮವಾಗಿ (೧) ಪರಬ್ರಹ್ಮ ಅಥವಾ ಪರಶಿವ (೨) ವಿಜ್ಞಾನಬ್ರಹ್ಮ (೩) ಬ್ರಹ್ಮಾನಂದ ಬ್ರಹ್ಮ (೪) ಕಲಾಬ್ರಹ್ಮ (೫) ಪಿಂಡಬ್ರಹ್ಮ (೬) ಮೂರ್ತಿಬ್ರಹ್ಮ ಎಂದು ಇರುತ್ತವೆ. ಆದರೆ ಈ ಶಬ್ದಗಳನ್ನು ವಚನಕಾರರು ಬಹಳ ಉಪಯೋಗಿಸುವದಿಲ್ಲ. ಇವುಗಳ ಬದಲು ಅವರು ಉಪಯೋಗಿಸುವ ಶಬ್ದಗಳು ಅನುಕ್ರಮವಾಗಿ (೧) ಪರಶಿವ, ಅಥವಾ ಶರಣ, ಅಥವಾ ಜಂಗಮ ಅಥವಾ ಆತ್ಮ (೨) ಸದಾಶಿವ (೩) ಶಿವ (೪) ರುದ್ರ (೫) ವಿಷ್ಣು (೬) ಬ್ರಹ್ಮ ಇವುಗಳು ಇರುತ್ತವೆ. ಇವುಗಳಲ್ಲಿ ಬ್ರಹ್ಮನು ಉತ್ಪತ್ತಿಗೆ ಕರ್ತನು, ವಿಷ್ಣುವು ರಕ್ಷಿಸುವದಕ್ಕೆ ಕರ್ತನು, ರುದ್ರನು ಸಂಹಾರಕ್ಕೆ ಕರ್ತನು, ಈಶ್ವರನು ತಿರೋಧಾನಕ್ಕೆ ಕರ್ತನು, ಸದಾಶಿವನು

ಅನುಗ್ರಹಕ್ಕೆ ಕರ್ತನು. ಈ ಮೇರೆಗೆ ಭಾವಿಸಲ್ಪಟ್ಟಿವೆ. ಸೃಷ್ಟಿಯ ಕಾರ್ಯ ಗಳಲ್ಲಿ ಈ ಎಲ್ಲ ಕಾರ್ಯಗಳು ಬೇಕೇಬೇಕು. ಈ ಬ್ರಹ್ಮರು ಅಥವಾ ಅಧಿದೇವತೆಗಳು ಸೃಷ್ಟಿಯ ಪ್ರಕಟನೆಯ ಕಾರ್ಯದಲ್ಲಿ ಸರಾಗತೆಯನ್ನು ಉಂಟುಮಾಡಲು ಕಾರಣೀಭೂತರಾಗಿದ್ದಾರೆ. ಶಿವಶರಣರು ಈ ಹೆಸರು ಗಳ ಬದಲು ಬೇರೆ ರೀತಿಯ ಹೆಸರುಗಳನ್ನು ಉಪಯೋಗಿಸುವದೂ ಉಂಟು. ಪರಶಿವನಿಗೆ ಪಂಚಮುಖಗಳೆಂದು ಹೇಳಲ್ಪಡುವವಷ್ಟೇ. ಅವರು ಈ ಪಂಚಬ್ರಹ್ಮದ ಬದಲು ಈ ಮುಖಗಳ ಹೆಸರುಗಳನ್ನೇ ಉಪಯೋ ಗಿಸುತ್ತಾರೆ. ಆ ಮುಖಗಳು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಇವುಗಳು ಇರುತ್ತವೆ. ಪರಶಿವನು ಈ ತನ್ನ ಮುಖ ಗಳ ಮುಖಾಂತರವಾಗಿಯೇ ಜಗತ್ತಿನ ನಾನಾವಿಧ ಕಾರ್ಯಗಳನ್ನು ನಡಿಸುವನೆಂದು ಅವರ ವಚನಗಳು ಹೇಳುತ್ತಿವೆ. ಆದರೆ ಶಿವನ ಪಂಚ ಮುಖದ್ಯೋತಕನಾದ ಈ ಹೆಸರುಗಳು ನಾವು ಈ ಬಗ್ಗೆ ಇಲ್ಲಿಯೇ ಮೇಲೆ ಹೇಳಿದ ಬೇರೆ ಹೆಸರುಗಳಿಗಿಂತ ಭಿನ್ನವಾದುವಲ್ಲ.

(೨೬) ಷಡಧ್ವಗಳು:- ಅಧ್ವಗಳೆಂದರೆ ಮಾರ್ಗಗಳು. ಆರು ಮಾರ್ಗ ಗಳಿರುವದರಿಂದ ಷಡಧ್ವಗಳೆಂದೆನಿಸಿಕೊಳ್ಳುತ್ತವೆ. ಅವು ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ಭುವನಾಧ್ವ, ತತ್ವಾಧ್ವ ಮತ್ತು ಕಲಾಧ್ವ ಎಂದಿ ರುತ್ತವೆ. ಹಿಂದೆ ನಂ॥ ೨೩ ರಲ್ಲಿ ಸಾದಾಖ್ಯಗಳ ವಿವರಣೆ ಇರುತ್ತದಷ್ಟೇ. ಇವುಗಳು ಪ್ರಕಟವಾಗುವಲ್ಲಿ ವಿಶ್ವದಲ್ಲಿ ಒಂದು ಸಂಚಲನೆಯುಂಟಾಗು ತ್ತದೆ. ಈ ಸಂಚಲನೆಯು ಯಾವ ಮಾರ್ಗಗಳಿಂದ ಪ್ರವಹಿಸುತ್ತದೋ ಅವೇ ಅಧ್ವಗಳೆನಿಸಿಕೊಳ್ಳುತ್ತವೆ. ಈ ಅಧ್ವಗಳ ಮೂಲಕವೇ ಸಂಚಲನೆಗಳು ಅಂದರೆ ಶಕ್ತಿ ಮೊದಲಾದವುಗಳು ಜಗತ್ತಿನಲ್ಲೆಲ್ಲ ವ್ಯವ ಸ್ಥಿತವಾಗಿ ಪ್ರವಹಿಸುತ್ತವೆ. ಆದ್ದರಿಂದ ವಿಶ್ವವು ಪ್ರಕಟವಾಗಲು ಅವು ಸಹಾಯಕಾರಿಗಳಾಗಿವೆ. ಕಂಬಿಗಳ ಮೂಲಕ ಎಂಜಿನು ರೇಲ್ವೆ ಡಬ್ಬಿ ಗಳನ್ನು ಮುಂದುವರಿಸುತ್ತ ಹೇಗೆ ಹೋಗುತ್ತದೋ ಹಾಗೆಯೇ ಅಧ್ವಗ ಳೆಂಬ ಕಂಬಿಗಳ ಮೂಲಕ ಜಗತ್ತು ಮುಂದುವರಿಯುತ್ತದೆ. ಇವುಗಳ ಜ್ಞಾನದಿಂದ ಮನುಷ್ಯನಿಗೆ ಪ್ರಗತಿಯ ದ್ವಾರವು ತೋರುತ್ತಿದೆ ಮತ್ತು ಅವನ ಮಾಯೆಯು ದೂರಾಗುತ್ತದೆ. ಮಂತ್ರಾಧ್ವ, ಪದಾಧ್ವ, ವರ್ಣಾ ಧ್ವಗಳು ನಾದಾತ್ಮಕವಾಗಿವೆ. ಭುವನಾಧ್ವ, ತತ್ವಾಧ್ವ, ಕಲಾಧ್ವಗಳು ಬಿಂದುರೂಪವಾಗಿರುತ್ತವೆ. ಐವತ್ತೆರಡಕ್ಷರಗಳೇ ವರ್ಣಾಧ್ವ. ಈ ವರ್ಣ

ಗಳ ಮೂಲಕ ಪದಗಳು ಉಂಟಾಗುತ್ತವೆ. ಇವೇ ಪದಾಧ್ವ. ಈ ಪದ ಗಳ ಮೂಲಕ ಮಂತ್ರಗಳು ಉತ್ಪನ್ನವಾಗುತ್ತವೆ. ಇವೇ ಮಂತ್ರಾಧ್ವ. ವರ್ಣ, ಪದಗಳನ್ನೊಳಕೊಂಡ ಮಂತ್ರಗಳು ಎಲ್ಲೆಲ್ಲಿಯೂ ತುಂಬಿವೆ. ಭುವನಾಧ್ವಗಳು ೨೨೪ ಇವೆ. ಅವು ಬ್ರಹ್ಮಾಂಡದಲ್ಲೆಲ್ಲ ಪಸರಿಸಿವೆ. ತತ್ವಾಧ್ವ ೩೬ ಇವೆ. ಇವುಗಳು ದೃಶ್ಯ ಜಗತ್ತಿನ ಕಾರ್ಯಗಳಿಗೆ ಕಾರ ಣವಾಗುತ್ತವೆ. ಕಲಾಧ್ವಗಳು ಆರು ಇದ್ದು ಅವು ಪದಾರ್ಥಗಳಲ್ಲಿ ಬೆರೆದು ಅನೇಕ ತರದ ಪರಿಣಾಮಗಳನ್ನುಂಟು ಮಾಡುತ್ತವೆ. ಈ ಎಲ್ಲ ಅಧ್ವಗಳ ಮೂಲಕವಾಗಿಯೇ ವಿಶ್ವದ ವ್ಯವಹಾರಗಳು ನಡೆಯುತ್ತವೆ. ಇವು ಬ್ರಹ್ಮಾಂಡದಲ್ಲಿರುವಂತೆಯೇ ಪಿಂಡಾಂಡ ಅಂದರೆ ವ್ಯಕ್ತಿಯಲ್ಲಿಯೂ ಇರುತ್ತವೆ. ಅವುಗಳ ಶುದ್ಧತೆಯ ಮೇಲೆ ಮನುಷ್ಯನ ಪ್ರಗತಿಯು ಅವ ಲಂಬಿಸಿರುತ್ತದೆ. ಇವುಗಳ ವಿವರಣೆಗಳು ಶಿವಸಿದ್ಧಾಂತಿಗಳ ಗ್ರಂಥಗಳಲ್ಲಿ ಹೆಚ್ಚಾಗಿ ಬರುತ್ತಿವೆ. ದ್ರಾವಿಡ ಶೈವರು ಇವುಗಳಿಗೆ ಬಹಳ ಮಹತ್ವ ಕೊಟ್ಟಿರುತ್ತಾರೆ. ಆದರೆ ವಚನಕಾರರು ತಮ್ಮ ಷಟ್‌ಸ್ಥಲಗಳ ನಿರೂಪಣೆ ಯಲ್ಲಿ ಇವುಗಳ ತತ್ವಗಳನ್ನು ಅವುಗಳಲ್ಲಿ ಸೇರ್ಪಡೆ ಮಾಡುತ್ತಾರೆ. ಇದ ರಲ್ಲಿ ಅವರು ಶಿವಸಿದ್ಧಾಂತಿಗಳ ವಿವೇಚನೆಯಲ್ಲಿ ಕೆಲಮಟ್ಟಿಗೆ ಬದಲಾವಣೆ ಗಳನ್ನು ಮಾಡಿದ್ದು ಕಂಡುಬರುತ್ತಿದೆ. ಈ ವಿಷಯಗಳು ವಚನಶಾಸ್ತ್ರಸಾರ ಭಾಗ ೨ ಅನುಬಂಧ ೨ ಇದರಲ್ಲಿ ಹೆಚ್ಚಾಗಿ ನಿರೂಪಿಸಲ್ಪಟ್ಟಿವೆ.

(೨೭) ಪಂಚಮಹಾಭೂತಗಳುಃ— ಇವು ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಎಂಬಿವುಗಳು ಇವೆ. ಇವು ನಮಗೆ ಪ್ರತ್ಯಕ್ಷ ಕಾಣುವ ಮಣ್ಣು, ನೀರು, ಬೆಂಕಿ, ಗಾಳಿ, ಮುಗಿಲು ಎಂದು ತಿಳಿಯಬಾರದು. ಅವುಗಳಿಗೆ ಈ ಅರ್ಥವು ಶಿವಾನುಭವ ಶಾಸ್ತ್ರದಲ್ಲಿಲ್ಲ. ಜಗತ್ತಿನಲ್ಲಿರುವ ಎಲ್ಲ ವಸ್ತುಗಳಿಗೆ ವಿಶಿಷ್ಟ ಕ್ರಿಯೆಗಳು, ಗುಣ ಧರ್ಮ ಕರ್ಮಗಳು ಇರುವ ವಷ್ಟೇ. ಅವುಗಳನ್ನುಂಟು ಮಾಡಲು ಯಾವ ತತ್ವಗಳು ಕಾರಣವಾಗು ತ್ತವೋ ಅವುಗಳಲ್ಲಿ ವಚನಕಾರರು ೫ ವಿಭಾಗಗಳನ್ನು ಮಾಡಿ ಅವುಗಳು ಪೃಥ್ವೀ ತತ್ವ, ಅಪ್ಪು ತತ್ವ, ಅಗ್ನಿ ತತ್ವ, ವಾಯುತತ್ವ, ಆಕಾಶತತ್ವ ಇವು ಗಳಿಂದ ಉಂಟಾಗುವವೆಂದು ಹೇಳುವದುಂಟು. ಉದಾಃ— ಪೃಥ್ವಿಗೆ ಭಾರತಳೆಯುವದು, ಅಪ್ಪುವಿಗೆ ದ್ರವದಿಂದ ಮುದ್ದೆ ಮಾಡುವದು, ಅಗ್ನಿಗೆ ಸುಡುವುದು, ವಾಯುವಿಗೆ ಸ್ಥಳಾಂತರ ಮಾಡುವುದು, ಆಕಾಶಕ್ಕೆ ಚರಿ ಸುವುದಕ್ಕೆ ತೆರವುಗುಡುವುದು, ಹೀಗೆ ಗುಣಗಳಿವೆಂದು ಅವರು ಹೇಳು

ತ್ತಾರೆ. ಈ ಗುಣಗಳೆಲ್ಲ ಜಗತ್ತಿನಲ್ಲಿಯ ಪದಾರ್ಥಗಳಲ್ಲೆಲ್ಲ ಹೆಚ್ಚು ಕಡಿಮೆ ಪ್ರಮಾಣಗಳಿಂದ ಇರುತ್ತವೆ. ಅಲ್ಲದೆ ಪೃಥ್ವಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿವೆ. ಅಪ್ಪುವಿಗೆ ಶಬ್ದ, ಸ್ಪರ್ಶ, ರೂಪ, ರಸ ಎಂದು ೪ ಗುಣ ಗಳಿವೆ. ಅಗ್ನಿಗೆ ಶಬ್ದ, ಸ್ಪರ್ಶ, ರೂಪು ಮಾತ್ರಗಳಿವೆ. ವಾಯುವಿಗೆ ಶಬ್ದ ಸ್ಪರ್ಶಗಳಿವೆ. ಆಕಾಶಕ್ಕೆ ಶಬ್ದ ಮಾತ್ರವಿದೆ. ಇವುಗಳ ನಾನಾವಿಧ ಮಿಶ್ರ ಣಗಳಿಂದ ವಿಧವಿಧವಾದ ಗುಣ ಧರ್ಮಗಳು ಪದಾರ್ಥಗಳಲ್ಲಿ ಉಂಟಾ ಗುತ್ತವೆ. ಇವೆಲ್ಲವುಗಳು ಈ ಪಂಚಮಹಾಭೂತಗಳ ಮೂಲಕವಾಗಿಯೇ ಉತ್ಪನ್ನವಾಗುತ್ತವೆಂದು ವಚನಕಾರರು ಬಗೆಯುತ್ತಾರೆ. ಆದ್ದರಿಂದ ಯಾವ ಯಾವ ವಸ್ತುಗಳಲ್ಲಿ ಯಾವ ಯಾವ ಗುಣಗಳಿರುತ್ತವೋ ಅವೆ ಲ್ಲವೂ ಆ ಗುಣಗಳಿಗೆ ಸಂಬಂಧಿಸಿದ ಮಹಾಭೂತಗಳಿಂದ ಉಂಟಾಗು ತ್ತವೆಂದು ತಿಳಿಯಲ್ಪಟ್ಟಿದೆ. ಒಂದು ವಸ್ತುವಿನಲ್ಲಿ ಅನೇಕ ತರದ ಗುಣ ಗಳಿರಬಹುದು. ಈ ಎಲ್ಲ ಗುಣಗಳಿಗೆ ಕಾರಣವಾದವುಗಳು ಈ ಪಂಚ ಮಹಾಭೂತಗಳೇ ಇರುತ್ತವೆ. ಆದರೆ ಇವುಗಳು ಹೆಚ್ಚು ಕಡಿಮೆ ಪ್ರಮಾ ಣದಿಂದ ಪರಸ್ಪರ ಕೂಡುವದರಿಂದ ಪದಾರ್ಥಗಳ ವೈಶಿಷ್ಟ್ಯಗಳು ಉಂಟಾ ಗುತ್ತವೆ. ಉದಾಃ- ಒಂದು ಪದಾರ್ಥವು ಅತ್ಯಂತ ಬಿರಿಸು, ಮತ್ತೊಂದು ಆದಕ್ಕೂ ಕಡಿಮೆ ಬಿರಿಸು, ಆಥವಾ ಪ್ರವಾಹಿ, ಅಥವಾ ಉಗೆ ರೂಪು ಳ್ಳದ್ದು ಇರಬಹುದು. ಪಂಚಮಹಾ ಭೂತಗಳು ಬೇರೆ ಬೇರೆ ಪ್ರಮಾಣಗ ಳಿಂದ ಆಯಾ ವಸ್ತುಗಳಲ್ಲಿ ಪರಸ್ಪರ ಕೂಡುವದರಿಂದ ಈ ವಿವಿಧತೆಯು ಅವುಗಳಲ್ಲಿ ಉಂಟಾಗುತ್ತದೆ. ಈ ಪಂಚಮಹಾಭೂತಗಳು ಪಂಚಸಾದಾ ಖ್ಯಗಳಲ್ಲಿಯೇ ಅನುಕ್ರಮವಾಗಿ ಹುಟ್ಟುತ್ತವೆ. ಅಥವಾ ಅವೇ ಭಾವವುಳ್ಳ ಶಿವನ ಪಂಚ ಮುಖಗಳಿಂದಲೂ ಹುಟ್ಟುತ್ತವೆಂದು ಹೇಳಲ್ಪಡುವದುಂಟು.

(೨೮) ಪಂಚೀಕರಣಃ- ಪಂಚಮಹಾಭೂತಗಳಲ್ಲಿಯ ಪ್ರತಿಯೊಂದು ತತ್ವವು ಅವೇ ಎಲ್ಲ ಐದು ತತ್ವಗಳಲ್ಲಿ ಕೂಡುತ್ತದೆ. ಉದಾಃ— ಪೃಥ್ವಿ ಯಲ್ಲಿ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ತತ್ವಗಳು ಕೂಡುತ್ತವೆ. ಅಪ್ಪು ತತ್ವದಲ್ಲಿ ಪೃಥ್ವಿ, ಅಪ್ಪು ತೇಜ, ವಾಯು, ಆಕಾಶ ತತ್ವಗಳು ಕೂಡುತ್ತವೆ. ಹೀಗೆ ಕೂಡುವದರಿಂದ ಮನುಷ್ಯನ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ವಾಯುಗಳು, ಪಂಚವಿಷಯಗಳು, ಕರುಣಚತು ಷ್ಟಯಗಳು ಹುಟ್ಟುತ್ತಿವೆ. ಇದಕ್ಕೆ ಮಹಾಭೂತಗಳ ಪಂಚೀಕರಣವೆಂದು ಹೇಳಲ್ಪಡುತ್ತಿದೆ. ಪೃಥ್ವಿಯ ಪಂಚೀಕೃತಿ, ಉದಕದ ಪಂಚೀಕೃತಿ, ಅಗ್ನಿಯ

ಪಂಚೀಕೃತಿ, ವಾಯುವಿನ ಪಂಚೀಕೃತಿ, ಆಕಾಶದ ಪಂಚೀಕೃತಿ, ಎಂದು ಹೇಳಲ್ಪಡುವದುಂಟು. ಒಂದೊಂದು ಪಂಚೀಕೃತಿಯಲ್ಲಿ ಮನುಷ್ಯನ ಅವಯವಗಳೂ, ಇಂದ್ರಿಯಗಳೂ, ಅವನ ಕರಣಗಳೂ ಉಂಟಾಗುತ್ತವೆ. ಪೃಥ್ವಿಯ ಪಂಚೀ ಕೃತಿಯಿಂದ ಪಾಯು, ಗಂಧ, ಘ್ರಾಣೇಂದ್ರಿಯ, ಪ್ರಾಣ ವಾಯು, ಅಹಂಕಾರ ಇವು ಹುಟ್ಟುತ್ತವೆ. ಉದಕದ ಪಂಚೀ ಕೃತಿಯಿಂದ ಗುಹ್ಯೇಂದ್ರಿಯ, ರಸ, ಜಿಹ್ವೇಂದ್ರಿಯ, ಅಪಾನವಾಯು, ಚಿತ್ತ, ಇವು ಹುಟ್ಟುತ್ತವೆ. ಅಗ್ನಿಯ ಪಂಚೀಕೃತಿಯಿಂದ ಪಾದೇಂದ್ರಿಯ, ರೂಪು, ನೇತ್ರೇಂದ್ರಿಯ, ಉದಾನವಾಯು, ಬುದ್ಧಿ ಇವುಗಳು ಹುಟ್ಟುತ್ತವೆ. ವಾಯುವಿನ ಪಂಚೀಕೃತಿಯಿಂದ ಪಾಣೀಂದ್ರಿಯ, ಸ್ಪರ್ಶನ, ತ್ವಗಿಂದ್ರಿಯ, ವ್ಯಾನವಾಯು, ಮನಸ್ಸು ಹುಟ್ಟುತ್ತವೆ. ಆಕಾಶದ ಪಂಚೀ ಕೃತಿಯಿಂದ ವಾಗಿಂದ್ರಿಯ, ಶಬ್ದ, ಶ್ರೋತ್ರೇಂದ್ರಿಯ, ಸಮಾನವಾಯು, ಜ್ಞಾತೃ ತತ್ವ ಇವುಗಳು ಉಂಟಾಗುತ್ತವೆ.

(೨೯) ತತ್ವಗಳು:— ಇವು ೩೬ ಇವೆ. ಇವುಗಳ ಜ್ಞಾನದಿಂದ ಮನುಷ್ಯನು ತಾನಾರೆಂಬುದನ್ನು ಅರಿತು ತನ್ನ ಅಂತಃ ಶಕ್ತಿಗಳನ್ನು ಬೆಳಿಸಿಕೊಂಡು ಸಾಮರಸ್ಯವನ್ನು ಹೊಂದುವನು. ೩೬ ತತ್ವಗಳಲ್ಲಿ ೨೫ ತತ್ವಗಳಿದ್ದು ಅವುಗಳ ಜ್ಞಾನದಿಂದ ಮನುಷ್ಯನು ತನ್ನನ್ನು ತಾನು ತಿಳಿಯಲು ಶಕ್ತನಾಗುತ್ತಾನೆ. ಇವು ಐದು ಕರ್ಮೇಂದ್ರಿಯಗಳು ಐದು ಜ್ಞಾನೇಂದ್ರಿಯಗಳು ಐದು ಪ್ರಾಣಾದಿವಾಯುಗಳು ಐದು ಶಬ್ದಾದಿ ವಿಷಯಗಳು ನಾಲ್ಕು ಚಿತ್ತ ಮನ ಬುದ್ಧಿ ಅಹಂಕಾರಗಳು ಮತ್ತು ಜೀವನು ೧ ಹೀಗೆ ೨೫ ತತ್ವಗಳಿವೆ. ಇವುಗಳಿಗೆ ಆತ್ಮತತ್ವಗಳೆಂದು ಹೆಸರು. ಇವುಗಳನ್ನು ಅರಿತಾಗಳೇ ಮನುಷ್ಯನು ತಾನು ಹೇಗೆ ಆಚರಿಸಬೇಕೆಂಬುದನ್ನು ತಿಳಿಯುತ್ತಾನೆ. ಇವುಗಳಲ್ಲದೆ ಲಿಂಗ ತತ್ವಗಳು ೧೦ ಇವೆ. ಇವುಗಳಿಗೆ ವಿದ್ಯಾತತ್ವಗಳೆಂತಲೂ ಹೆಸರು ಇದೆ. ಇವು ಪಂಚ ಸಾದಾಖ್ಯಗಳು ಮತ್ತು ಪಂಚ ಕಲೆಗಳು ಇವೆ. ಪಂಚ ಸಾದಾಖ್ಯಗಳು ಹಿಂದೆ ನಂ॥ ೨೩ ರಲ್ಲಿ ಹೇಳಲ್ಪಟ್ಟಿವೆ. ಪಂಚಕಲೆಗಳು ಮುಂದೆ ನಂ॥ ೩೦ ರಲ್ಲಿ ಹೇಳಲ್ಪಡುವವು. ಇವುಗಳ ಜ್ಞಾನದ ಮೂಲಕವೇ ಮನುಷ್ಯನು ಉತ್ಕ್ರಾಂತಿಯನ್ನು ಹೇಗೆ ಹೊಂದಬೇಕೆಂಬುದು ತಿಳಿಯುತ್ತಿದೆ. ಕಲೆಗಳು ಶಾಂತ್ಯಾತೀತ, ಶಾಂತಿ, ವಿದ್ಯಾ, ಪ್ರತಿಷ್ಠೆ, ನಿವೃತ್ತಿ ಇವುಗಳು ಇರುತ್ತವೆ. ಇವುಗಳಿಗೆ ತೂರ್ಯ ತತ್ವಗಳೆಂತಲೂ ಬೇರೊಂದು ಹೆಸರು ಇದೆ. ಇವೆಲ್ಲಕ್ಕೆ ಉತ್ತರವಾಗಿ ಶಿವ

ತತ್ವವು ಇದೆ. ಮನುಷ್ಯನು ಈ ೧೦ ತತ್ವಗಳ ಸಹಾಯದಿಂದಲೂ ಕೂಡ ಶಿವತತ್ವದಲ್ಲಿ ಬೆರೆಯಬೇಕು. ಇದೇ ಲಿಂಗಾಂಗ ಸಾಮರಸ್ಯವು. ಬೆರೆಯುವ ಕ್ರಮವು ಹೇಗೆಂದರೆ:— ನಿವೃತ್ತಿಕಲೆಯನ್ನು ಹೊಂದಿ ವಾಗಾದಿ ಕರ್ಮೇಂದ್ರಿಯಗಳು ಕರ್ಮಸಾದಾಖ್ಯವನ್ನು ಒಡಗೂಡಬೇಕು. ಆಗ ಪೃಥ್ವೀ ತತ್ವವು ಬಯಲಾಗುತ್ತದೆ. ಪ್ರತಿಷ್ಠಾ ಕಲೆಯನ್ನು ಹೊಂದಿ ಶಬ್ದವಿಷಯಂಗಳು ಐದು ಕರ್ತೃ ಸಾದಾಖ್ಯವನ್ನು ಕೂಡಿದಲ್ಲಿ ಅಪ್ಪುತತ್ವ ಬಯಲಾಗುತ್ತದೆ. ವಿದ್ಯಾಕಲೆಯನ್ನು ಹೊಂದಿ ಶ್ರೋತ್ರಾದಿ ಜ್ಞಾನೇಂದ್ರಿಯಗಳು ಮೂರ್ತಿಸಾದಾಖ್ಯವನ್ನು ಕೂಡಿದಲ್ಲಿ ತೇಜತತ್ವವು ಬಯಲಾಗುತ್ತದೆ. ಶಾಂತಿಕಲೆಯನ್ನು ಹೊಂದಿ ಪ್ರಾಣಾದಿ ವಾಯುಗಳು ಅಮೂರ್ತಿ ಸಾದಾಖ್ಯವನ್ನು ಒಡಗೂಡಿದಲ್ಲಿ ವಾಯು ತತ್ವವು ಬಯಲಾಗುತ್ತದೆ. ಶಾಂತ್ಯಾತೀತ ಕಲೆಯನ್ನು ಕೂಡಿ ಮನ ಬುದ್ಧಿ ಚಿತ್ತ ಅಹಂಕಾರ ಜೀವಗಳು ಶಿವಸಾದಾಖ್ಯವನ್ನು ಕೂಡಿದಲ್ಲಿ ಆಕಾಶತತ್ವ ಬಯಲಾಗುತ್ತದೆ. ಹೀಗೆ ೨೫ ತತ್ವಗಳು ಲಿಂಗೈಕ್ಯವಾದಲ್ಲಿ ಆ ಲಿಂಗತತ್ವಗಳು ಹನ್ನೊಂದು ತಾವು ಪರಸ್ಪರ ಕೂಡಿಕೊಂಡು ಹೋಗುವವು. ಹೀಗೆ ಕೂಡಿದಲ್ಲಿ ಸರ್ವಶೂನ್ಯ ಸ್ಥಿತಿಯು ಪ್ರಾಪ್ತವಾಗುವದು.

(೩೦) ಕಲೆಗಳು:— ಇವು ಐದು ಇವೆ. ಅವು ಯಾವವೆಂದರೆ ಶಾಂತ್ಯಾತೀತ, ಶಾಂತಿ, ವಿದ್ಯಾ, ಪ್ರತಿಷ್ಠಾ, ಮತ್ತು ನಿವೃತ್ತಿ. ಅಲ್ಲದೆ ಶಾಂತ್ಯಾತೀತೋತ್ತರ ಎಂತಲೂ ಬೇರೊಂದು ಕಲೆಯನ್ನು ಹೇಳುವದುಂಟು. ಅದು ಓಂಕಾರ ರೂಪವಾದ ಮಹಾಲಿಂಗದಲ್ಲಿ ಶೂನ್ಯಸ್ಥಿತಿಯಲ್ಲಿರುತ್ತದೆ. ಆದ್ದರಿಂದ ಅದನ್ನು ಬಿಟ್ಟು ಪಂಚಕಲೆಗಳೆಂತಲೇ ಹೇಳುವ ವಾಡಿಕೆಯೂ ಉಂಟು. ನಾದ ಬಿಂದು ಕಲೆಗಳು ಮೂಲಚಿತ್ತುವಿನೊಡನೆ ಕೂಡಿಕೊಂಡು ಪ್ರಣವುವಾಗುತ್ತದಷ್ಟೇ (ನಂ॥ ೨೪ ಪ್ರಣವು ನೋಡಿರಿ.) ಈ ಪ್ರಣವುದಲ್ಲಿ ಯ, ವ, ಶಿ, ಮ, ನ ಎಂಬ ಮಂತ್ರಾಕ್ಷರಗಳು ಕ್ರಮೇಣ ಉತ್ಪನ್ನವಾಗುತ್ತವೆ. 'ಯ' ಇದು ಅತ್ಯಂತ ಸೂಕ್ಷ್ಮವು. ಮುಂದೆ ಅದರ ಸ್ಥೂಲರೂಪಗಳು ಕ್ರಮೇಣ ವ, ಶಿ, ಮ, ನ ಎಂದು ಇರುತ್ತವೆ. ಈ ಪಂಚಾಕ್ಷರಗಳಿಂದ ಶಾಂತ್ಯಾತೀತ, ಶಾಂತಿ, ವಿದ್ಯಾ, ಪ್ರತಿಷ್ಠಾ ಮತ್ತು ನಿವೃತ್ತಿ ಈ ಕಲೆಗಳು ಅನುಕ್ರಮವಾಗಿ ಉದಯವಾಗುತ್ತವೆ. ಈ ಐದು ಕಲೆಗಳಿಂದ ಐದು ಶಕ್ತಿಗಳು ಅಂದರೆ ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಮತ್ತು ಕ್ರಿಯಾಶಕ್ತಿ ಇವುಗಳು ಉದಯವಾಗುತ್ತವೆ.

ನಾದಾತ್ಮಕ ಲಿಂಗದಲ್ಲಿ ಓಂ ಎಂಬ ಮಹಾ ಬಯಲೊಳಗೆ ಲಯಮಾಡಿ ದೊಡೆ ಅದೇ ಸರ್ವ ಪ್ರಾಣಿಗಳೊಳಹೊರಗೆಲ್ಲಿಯು ಹೊದ್ದಿಸಿಕೊಂಡಿರು ವದನು ಪ್ರತ್ಯಕ್ಷವಂ ಮಾಡಿಕೊಂಡಿರುವದೇ ಮಂತ್ರಕೂಟವೆಂಬುದೀಗ ದೇಹ ಮಧ್ಯ ಪರಪ್ರಕೃತಿಯಲ್ಲಿ ಪ್ರಾಣವಾಯು ತಾಗಿ ನಿವೃತ್ತಿ ಪ್ರವೃತ್ತಿ ಯಾಗಿ ಚರಿಸುವುದು. ಅಲ್ಲಿ ೨೧೬೦೦ ಜೀವ ಜಪವನು ಜಪಿಸುವದನು ಶ್ರೀಗುರೂಪದೇಶದಿಂದರಿದೊಡೆ ಅಂತ್ಯವಾದಿಯಾಗಿ ಆದಿ ಅಂತ್ಯವಾಗಿ ನಡೆದು ಆ ಜಪವೆನಿಸಿತ್ತು. ಆ ಜಪ ದಹರಾಕಾಶದ ನಾದಾತ್ಮಕ ಲಿಂಗ ದಲ್ಲಿ ಕೂಡಿದುದೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನಲ್ಲಿ ಮಂತ್ರ ಯೋಗವೆಂಬುದರ್ಥವು.

ಇಂತು ಶ್ರೀಗುರು ಶಿಷ್ಯ ಸಂಯೋಗ ಹೇಳಿದ ನಂತರದಲ್ಲಿ ಆ ಗುರು ಶಿಷ್ಯತ್ವವು ತನಗೆ ಅಳವಟ್ಟಿತೆಂದು ಪೇಳುತಿರ್ದಪೆಂ.

(೧೨) ಶ್ರೀಗುರುವ ಬೆಸಗೊಳಹೋದರೆ ಗುರುವೆನ್ನಂತರಂಗವನ ರಿದು ಜೀವ ಪರಮರೇಕವಮಾಡಿ ತೋರಿ ಕಾಯದ ಕಂಗಳಲ್ಲಿರಿಸಿ ಮನದ ಕೊನೆಯಲ್ಲಿ ನೆಲೆಗೊಳಿಸಿ ಸರ್ವಾಂಗದಲ್ಲಿಯೂ ಲಿಂಗ ಸಂಬಂಧವ ಮಾಡಿ ತೋರಿದನೈಯ್ಯ ಎನ್ನ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಟೀಕು:— ಗುರುವಿನ ಕೈಯ್ಯಲುಪದೇಶವ ಹಡೆವೆನೆಂದು ಹೋದಲ್ಲಿ ಆ ಗುರು ಶಿಷ್ಯನ ಹೃದಯದಲ್ಲಿ ತಾನೇ ಬೋಧಾಸ್ವರೂಪನಾಗಿ ನಿಂತನು. ಅದೇಕೆಂದಡೆ ಅಂತರಂಗವೆಂದಡೆ ಲಿಂಗ ಶರೀರ, ಆ ಲಿಂಗ ಶರೀರವು ನಾಶವಲ್ಲದೆ ಆ ಆತ್ಮಂಗೆ ಮಹಾಲಿಂಗದ ಕೂಟವಿಲ್ಲವಾಗಿ ಆ ಲಿಂಗದ ಶರೀರದಲ್ಲಿ ಅನುಗ್ರಹ ಶಕ್ತಿ ಸ್ವರೂಪಿನಿಂದ ಶ್ರೀಗುರುವೈದಿಹನೆಂಬು ದೀಗ ಗುರು ಬೆಸಗೊಳ್ಳಹೋದರೆ ಗುರುವಿನ ಅಂತರಂಗವನರಿದು ಎಂಬು ದರ್ಥ. ಹೀಗೆ ಗೆದ್ದಲೆ ಮಾಡಿದ ಹುತ್ತದೊಳಗೆ ಸರ್ಪ ಸೇರಿದ ಪರಿ ಹಾಗೆ ಜೀವನದ ಮನೆಯು ಲಿಂಗ ಶರೀರದಲ್ಲಿ ಅನುಗ್ರಹಶಕ್ತಿ ನೆಲೆಗೊಳ್ಳಲು ಆ ವಿವೇಕವೇ ಸೋಹಂ ಸ್ವರೂಪವಾದಡೆ ಪರಮಾತ್ಮನು ಆ ಲಿಂಗ ಶರೀರದ ವಿವೇಕವೇ ಹಂಸ ಸ್ವರೂಪು. ಈ ಉಭಯ ವಿವೇಕ ಮಧ್ಯದಲ್ಲಿ ಜ್ಞಾನಾಗ್ನಿಯು ಗುರುವಾಜ್ಞೆಯಿಂದ ಪುಟ್ಟಿ ಆ ಅಗ್ನಿ ಉಭಯಕಾಷ್ಠವನು ಸುಟ್ಟು ತಾನುಪಶಮನವಾಗುವದು ಹೇಗೋ ಹಾಗೆ ಜೀವ ಪರಮರ ವಿವೇ ಕವನ್ನುಟ್ಟು ತಾನುಪಶಮನವಾಗುವದು. ಅದೀಗ ಜೀವ ಪರಮರ ಏಕ

ಮಾಡಿ ತೋರಿದನೆಂಬರ್ಥ. ಆ ಉಪಶಮನವಾದ ಅಗ್ನಿಯದ್ದ್ರಷ್ಟಂ ತನ್ನಷ್ಟಂ ಎಂದು ಆ ಗುರುವೆಂಬ ಶುದ್ಧ ಪ್ರಸಾದ ಮಹಾಬಯಲು ಕೂಡಿತ್ತು. ಆ ಮಹದಾಕಾರವೇ ತಾನೆಂದು ತಿಳಿದ ಶಿಷ್ಯನ ವಾಮದಕ್ಷಿಣ ನೇತ್ರಂಗಳು ಜೀವಪರಮರಾಗಿ ಪ್ರತ್ಯಕ್ಷದಿಂದ ಈರ್ವರೂ ಆತನ ಮನದ ಗ್ರದಲ್ಲಿ ಆ ಜೀವಪರಮರ ಕೂಟವೇ ಸಿದ್ಧವಾಗಿಹುದು. ಇಂತಾಗಲು ಆ ಪಾದ ಮಸ್ತಕದೊಳ ಹೊರಗೆಲ್ಲಿಯೂ ಶುದ್ಧ ಪ್ರಸಾದವೆಡೆಗೊಂಡು ಘಟ ಕಾಸಿದ್ಧಿಯ ಪ್ರಕಾರದ ಹಾಗೆ ಮಾಡಿ ಕಾಣಿಸಿದನೆಂಬುದೀಗ ಜೀವ ಪರಮರ ಏಕ ಮಾಡಿ ಕಾಯದ ಕಂಗಳಲ್ಲಿಯೂ ಲಿಂಗ ಸಂಬಂಧವ ಮಾಡಿ ತೋರಿದನಯ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಜ್ಞಾನಗುರು ಕೊಟ್ಟ ಲಿಂಗವಾವುದು ಎಂದಡೆ ಹೇಳುತ್ತಿದ್ದೆನು.

(೧೩) ಹುಸಿ ಇಲ್ಲದ ಶಿಷ್ಯನು ಮರವಿಲ್ಲದ ಗುರುವಿನ ಪಾದವ ಹಿಡಿ ದೊಡೆ ಕುರುಹಿಲ್ಲದ ಲಿಂಗ ಕೊಡಲಿಕ್ಕಾಗಿ ತೆರಹಿಲ್ಲದಿಪ್ಪಲೊಡನೆ ಬರಿದಾ ದವು ತನುಮನ ಪ್ರಾಣಂಗಳೆಲ್ಲವು. ಈ ಬೆಡಗಿನುಪದೇಶವ ಪಡೆದ ಶಿಷ್ಯ ನಲ್ಲಿ ಗುರುವಡಗಿ ಗುರು ಶಿಷ್ಯನಾಗಿ ಎರಡು ಒಂದಾದ ಪರಿಯನು ಏನೆಂದುಪಮಿಸುವೆನಯ್ಯ ನಿಜಗುರು ಸ್ವತಂತ್ರ ಸಿದ್ದಲಿಂಗೇಶ್ವರನಲ್ಲಿ ಒಂದಾದ ಗುರು ಶಿಷ್ಯನು ?

ಟೀಕು:— ಹುಸಿ ಎಂದಡೆ ಪಂಚಭೂತದಿಂ ಪಂಚೀಕರಿಸಿದ ತನು, ಆ ತನುವ ಅತಿಗಳೆಯುತಿದ್ದ ಕಾರಣ ಅಂಥ ತನುವಿಲ್ಲದಾತ ಶಿಷ್ಯ ನೆಂಬುದರ್ಥ. ಮರವೆ ಎಂದಡೆ ಸ್ಥೂಲ ಸೂಕ್ಷ್ಮ ಶರೀರವೆರಡನು ಹುಟ್ಟಿಸಿ ತನ್ನ ತೋರದಿಹುದಾದ ಕಾರಣ ಶರೀರ. ಅಂಥ ಶರೀರವಿಲ್ಲದಾತನೇ ಗುರುವೆಂಬುದೀಗ ಮರಹಿಲ್ಲದ ಗುರುವಿನ ಪಾದವ ಹಿಡಿದಡೆ ಎಂಬು ದಕ್ಕರ್ಥ. ಬಚ್ಚ ಬರಿಯ ಅರಿವನೇ ಘನಲಿಂಗವೆಂದು ತೋರಿದನಾಗಿ ಆ ಲಿಂಗ ಗ್ರಹಿಸಬೇಕಾದಡೆ ಸಚ್ಚಿದಾನಂದ ನಿತ್ಯ ಪರಿಪೂರ್ಣ ತಾನಾದ ವಂಗಲ್ಲದಾಗದಾಗಿ ಅದೀಗ ಕುರುಹಿಲ್ಲದ ಲಿಂಗವ ಕೊಡಲಿಕ್ಕಾಗಿ ತೆರ ಹಿಲ್ಲದಪ್ಪಲೊಡನೆ ಎಂಬುದಕ್ಕೆರ್ಥ. ಈ ಬಗೆಯ ಉಪದೇಶವ ಕೊಂಡ ಶಿಷ್ಯನು ತಾನೇ ಗುರುವಾಗಿ ಗುರುವಾದನೆಂದು ಇದಿರಿಟ್ಟುನೋಡದೆ ಇದ್ದು ತನುಮನದ ಪ್ರಪಂಚ ಮುನ್ನವೇ ನಾಸ್ತಿಯಾಗಿ ಬಯ ಲೊಳಗೆ ಬಯಲಾಗಿ ಆಕಾಶ ಪ್ರಕಾಶ ಯೋಗವಾದಂತೆ ಇದ್ದರೆಂಬು

ವೀಗ ಬರಿದಾದವು ತನುಮನ ಪ್ರಾಣಂಗಳೆಲ್ಲವು ಈ ಬೆಡಗಿನುಪದೇಶವಂ ಪಡೆದ ಶಿಷ್ಯನಲ್ಲಿ ಗುರುವಡಗಿ ಗುರು ಶಿಷ್ಯನಾಗಿ ಎರಡು ಒಂದಾದ ಪರಿಯನು ಏನೆಂದುಪಮಿಸುವೆನಯ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನಲ್ಲಿ ಒಂದಾದ ಗುರು ಶಿಷ್ಯನು ಎಂಬುದಕ್ಕರ್ಥ.

ಗುರು ಮುಖದಿಂ ಬಂದ ಲಿಂಗವು ಪ್ರಣವ ರೂಪಿನಿಂದೆ ಧ್ಯಾನಿಸು ಎಂದು ಹೇಳುತ್ತಿರ್ದಪಂ.

(೧೪) ಆದಿ ಬಿಂದು ಬೀಜವನರಿದು ಬಿಂದುಪರಿ ಅನಾಹತ ನಾದವನರಿದು ಆ ಪ್ರಣವ್ನದ ಸೂತ್ರವಿಡಿದು ಶಿವಧ್ಯಾನವ ಮಾಡಲು ಆ ಧ್ಯಾನಾಗ್ನಿಯಿಂದ ಯೋಜನಾಂತರ ಶೈಲಸಮಾನ ಪಾಪ ಬೆಂದು ಹೋಹುದು ನೋಡಯ್ಯ. ನಿಜಗುರುಸ್ವತಂತ್ರಸಿದ್ಧೇಲಿಂಗೇಶ್ವರನೆಂಬ ನಿಜ ಪದವಿಯನೈದುವುದು ಬಳಿಕ ನೋಡಯ್ಯ.

ಟೀಕು :– ಪರನಾದ, ಪರಬಿಂದು, ಪರಕಳೆಗಳನು ಪಡೆಯದ ಅಖಂಡಗೋಳಕಾಕಾರ ಸಾಕಲ್ಯ ಪ್ರಣವುವೆಂಬುದೀಗ ಆದಿ ಬಿಂದು ಬೀಜವನರಿದು ಎಂಬುದಕ್ಕರ್ಥ. ಆ ಸಾಕಲ್ಯ ಪ್ರಣವುವು ಷಟ್ಕೃತಿಯನು ತಳೆದು ಊರ್ಧ್ವಸ್ವರ ಕೇಡಿಲ್ಲದೆ ಘೋಷಿಸುತ್ತಿದ್ದಿತೆಂಬುದೀಗ ಬಿಂದು ಪರಿ ಅನಾಹತ ನಾದವನರಿದು ಎಂಬುದಕ್ಕರ್ಥ. ಗುರುಕರುಣದಿಂದೆ ಓಂ ಎಂಬ ಪ್ರಣವ ತಿಳಿದು ಆ ಪ್ರಣವದ ತಾರಕಾಕೃತಿ ದಂಡಕಾಕೃತಿಗಳನೊಳಕೊಂಡು ನಾದವಿರುವುದು. ಕುಂಡಲಾಕೃತಿ ಅರ್ಧಚಂದ್ರಾಕೃತಿಗಳನೊಳಕೊಂಡು ಬಿಂದುವಿರುವುದು. ದರ್ಪಣಾಕೃತಿ ಜ್ಯೋತಿರಾಕೃತಿಗಳನೊಳಕೊಂಡು ಕಳೆ ಇರುವದು. ನಾದ ಬಿಂದು ಕಳೆಗಳೇ ಶಿವನ ದಿವ್ಯಶರೀರವು. ಆ ಶರೀರ ಧ್ಯಾನವೇ ಚಿದಗ್ನಿ. ಅಂತದನು ಧ್ಯಾನಿಸಿ ಪೂಜಿಸಿದಾತಂಗೆ ವಾಕ್ಕಾಯ ಮಾನಸಗಳಿಂದೆ ಹುಟ್ಟಿದ ಪಾಪವೆಂಬ ಕುಲಾದ್ರಿಗೆ ಪಾವಕನಾಗಿದ್ದಿತೆಂಬುದೀಗ ಆ ಪ್ರಣವ ಸೂತ್ರವಿಡಿದು ಶಿವಧ್ಯಾನವಂ ಮಾಡಲು ಆ ದಾವಾಗ್ನಿಯಿಂದ ಯೋಜನಾಂತರ ಶೈಲ ಸಮಾನವಾದ ಪಾಪ ಬೆಂದು ಹೋಹುದು ನೋಡಯ್ಯ ಎಂಬುದಕ್ಕರ್ಥ. 'ಯಾತೆ ರುದ್ರ ಶಿವಾತನೂರ ಘೋರಾ ಪಾಪ ಕಾಶಿನೀ' ಎಂದೊಡೆ ಭಯಂಕರವಲ್ಲದಂಥ ಶಿವತನು ಪಾಪರಹಿತವಾದವರಲ್ಲಿ ಪ್ರಕಾಶಿಸುವದೆಂಬ ಶ್ರುತಿಯಿಂದೆ ಅಂತಪ್ಪ ಶಿವಧ್ಯಾನಿಗಳು ಶಿವನಲ್ಲಿ ಕೂಡಿರ್ಪರು ಎಂಬುದೀಗ ನಿಜಗುರು

ಸ್ವತಂತ್ರ ಸಿದ್ಧಲಿಂಗೇಶ್ವರನೆಂಬ ನಿಜಪದವಿಯನೈದುವದು ಬಳಿಕ ನೋಡಯ್ಯ ಎಂಬುದಕ್ಕರ್ಥ.

ಗುರುಕೃಪೆಯಿಂದ ಲಿಂಗಾಂಗ ಸಂಬಂಧವ ತಿಳಿವುದೆಂದು ಪೇಳುತ್ತಿರ್ದಪಂ.

(೧೫) ಷಡಧ್ವಾಶ್ರಯುವಾದ ಪರಬಿಂದುಸ್ಥಾನದ ಮೇಲಿರ್ದ ಷಟ್‌ಸ್ಥಲ ಲಿಂಗಾಂಗ ಜನಿಸಿ ತೋರಿತ್ತೆಂದೊಡೆ, ಅಂಗ ಲಿಂಗಕ್ಕೆ ಭೇದ ಉಂಟೇ? ಇಲ್ಲವಾಗಿ ಬೀಜಾಂಕುರದಂತೆ ಒಂದು ಬಿಟ್ಟೊಂದು ತೋರದು. ಇಂತಪ್ಪ ಲಿಂಗಾಂಗ ಸಂಬಂಧದ ಸಕೀಲವನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮ ಶರಣ ಬಲ್ಲ.

ಟೀಕು:—ಷಡಧ್ವಾಶ್ರಯ ಪರಬಿಂದುವು ಅವಸ್ಥಾತ್ಮಕವೆಂದು ಶಬ್ದಾತ್ಮಕವೆಂದು ಎರಡು ಪ್ರಕಾರದ ಸ್ವರೂಪವನುಳ್ಳುದು, ಅನ್ಯಾತ್ಮಕವಲ್ಲ. ಅದು ಹೇಗೆಂದೊಡೆ ವರ್ಣ, ಪದ, ಮಂತ್ರ ಈ ಮೂರು ಶಬ್ದಾತ್ಮಕಂಗಳು. ಭುವನ, ತತ್ವ, ಕಲೆ ಈ ಮೂರು ಅವಸ್ಥಾತ್ಮಕಂಗಳು. ಅದುದರಿಂದ ಮೂರು ದ್ವಯಂಗಳು ಭುವನ ಶರೀರವನಾಶ್ರೈಯಿಸಿಹವು. ಆ ಶರೀರವು ತತ್ವವನಾಶ್ರಯಿಸಿಹುದು. ಆತ್ರತತ್ವಂಗಳು ಕಲೆಯನಾಶ್ರಯಿಸಿಹವು. ಆ ಕಲೆ ಪರಬಿಂದುವನಾಶ್ರಯಿಸಿಹುದು. ಆ ಬಿಂದು ಸಭಾಜ್ಯೋತಿಯಂತೆ ಸರ್ವಾತ್ಮಕ ಭ್ರೂಮಧ್ಯದೊಳಗೆ ಬೆಳಗುತ್ತಿರ್ಪುದು. ಗುರುಕರುಣದಿಂದೆ ಜ್ಞಾನೋದಯುವಾದ ಜೀವನ್ಮುಕ್ತರುಗಳ ಬಿಂದು ಪೀಠದ ಮೇಲೆ ಒಳಹೊರಗೆನ್ನದೆ ದೇಹಾಳಿಯ ದೀಪದಂತೆ ನಾದಾತ್ಮಕ ಶುದ್ಧ ಪ್ರಸಾದ ಮೂರ್ತಿ ಇರುತಿಪ್ಪನೆಂಬುದೀಗ ಷಡಧ್ವಾಶ್ರಯುವಾದ ಪರಬಿಂದು ಪೀಠದ ಮೇಲಿರ್ದ ಎಂಬುದಕ್ಕರ್ಥ. ಅನಾಹತನಾದೋಯುವಾದ ಶುದ್ಧ ಪ್ರಸಾದವೇ ಮಹಾಲಿಂಗವೆನಿಸಿ, ಆಚಾರಾದಿ ಪಂಚಲಿಂಗಂಗಳನು ಆತನ ತನುವಿನಲ್ಲಿ ಸಂಬಂಧವಾಗಿ ಬಿಂದುವೆನಿಸಿ ಆ ಬಿಂದುವೇ ಮಹಾಲಿಂಗವೆನಿಸಿ ಲಯಾಭಿಧಾನವನುಳ್ಳದರಿಂದೆ ಐಕ್ಯನಾಗಿ, ಭಕ್ತಾದಿ ಪಂಚ ಅಂಗಂಗಳನೆ ತನ್ನೊಳಗೆ ತಳೆದು ಮಹಾಲಿಂಗಾದಿ ಆಚಾರಾಂತವಾದ ಷಡ್ಲಿಂಗಂಗಳನು ಕೂಡಿ ಭ್ರಮರ ಚಂಪಕದಂತೆ ನಿಶ್ಶಬ್ದಾತ್ಮಕ ಶಿವತತ್ವವೆನಿಸಿ ಆ ಬಿಂದುವೇ ತೋರುತ್ತಿರ್ಪುದೆಂಬುದೀಗ ಷಟ್‌ಸ್ಥಲವಾದ ಪರಶಿವತತ್ವದೊಳು ಷಟ್ಸ್ಥಲ ಲಿಂಗಾಂಗ ಜನಿಸಿ ತೋರಿತೆಂಬುದಕ್ಕರ್ಥ. ಅಂತಪ್ಪ

ಚಿಚ್ಛಕ್ತಿ ಸ್ವರೂಪವಾದ ಬಿಂದುವೇ ಚಿದಂಗವೆನಿಸಿ ಆ ಶುದ್ಧಪ್ರಸಾದವೇ
ಚಿಲ್ಲಿಂಗವೆನಿಸಿ ಕನಕಕಾಂತಿಯುರತ ಒಂದಕ್ಕೊಂದು ವಿರಳವಿಲ್ಲದೆ ಇದ್ದ
ವೆಂಬುದೀಗ ಅಂಗಕ್ಕೆ ಲಿಂಗಕ್ಕೆ ಭೇದವುಂಟೆ? ಇಲ್ಲವಾಗಿ ಬೀಜಾಂಕು
ರದಂತೆ ಒಂದ ಬಿಟ್ಟೊಂದು ತೋರದು ಎಂಬುದಕ್ಕರ್ಥ. ಜಗದ್ವೈಭ
ವವ ನಟಿಪ ಮೂಲಚಿತ್ತುವಿನ ಸಗುಣ ನಿರ್ಗುಣವೆನಿಪ ಪರನಾದ,
ಪರಬಿಂದು, ಪರಕಳೆಗಳೇ ಅಂಗತ್ರಯಂಗಳಾಗಿ ಚಿನ್ನಾದ, ಚಿದ್ಬಿಂದು,
ಚಿತ್ಕಳೆಗಳೇ ಲಿಂಗತ್ರಯಂಗಳಾಗಿ ಈ ಉಭಯ ರೂಪವೇ ಮೂಲ
ಚಿತ್ತುವಾಗಿ, ಇಂತಪ್ಪ ಸಚ್ಚಿದಾನಂದ ನಿತ್ಯಪರಿಪೂರ್ಣ ಅಖಂಡ
ನೆಂಬ ಷಟ್‌ಸ್ಥಲ ಲಕ್ಷಣಂಗಳ ತಳೆದು ಗೋಳಕಾಕಾರವಾದ ತೇಜೋ
ಮೂರ್ತಿಯಪ್ಪ ಮಹಾಲಿಂಗವಾಯಿತ್ತೆಂಬುದೀಗ ಇಂತಪ್ಪ ಲಿಂಗಾಂಗ
ಸಂಬಂಧದ ಸಕೀಲವನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ
ಶರಣ ಬಲ್ಲನು ಎಂಬುದಕ್ಕರ್ಥ:

ಇನ್ನು ಜ್ಞಾನೋದಯದ ಊರ್ಧ್ವ ಕುಂಡಲಿ ಎನಿಸಿದ ವಿವರವಂ
ಹೇಳುತ್ತಿರ್ದಪಂ.

(೧೬) ಊರ್ಧ್ವಮುಖವಾದ ಅನಂತೇಶನೆಂಬ ವಾಸುಕಿಯ ಶಿರದ
ಮೇಲಿಹ ಅಷ್ಟದಳಾಬ್ಜ ಮಧ್ಯದಲ್ಲಿ ಒಪ್ಪುತ್ತಿಹ ಶುದ್ಧವಿದ್ಯೆಯೇ ಪೀಠ
ವಾದ ಶಿವಲಿಂಗ ಒಂದರಲ್ಲಿ ದೃಢಭಕ್ತಿಯುಳ್ಳಾತನ ದೇಹವೇ ಲಿಂಗ
ದೇಹವು. ಆ ಚಿದ್ರೂಪವಾದ ಪರಮಸ್ವರೂಪನ ಮೂರ್ತಿ ತಾನೇ ಇಷ್ಟ
ಲಿಂಗವು. ಆ ಇಷ್ಟಲಿಂಗದಲ್ಲಿ ದೇಹವನಡಗಿಸಿದ ಮಹಾತ್ಮನನ್ನು ಬುದ್ಧಿ
ಅಹಂಕಾರ ಇಂದ್ರಿಯಾದಿ ಗುಣಂಗಳು ಜನನಾದಿ ವಿಕಾರಂಗಳು ಹೊದ್ದ
ವಾಗಿ ಆತ ನಿರ್ದೇಹಿ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ ಶರ
ಣನುಪಮಾತೀತನು.

ಟೀಕು:— ಪಶ್ಚಿಮ ಪದ್ಮಾಸನದಲ್ಲಿ ಕುಳಿತು ಅತ್ತಿತ್ತ ಚಲಿಸದೆ
ನಿಜಜ್ಯೋತಿಗಳೆರಡನೂ ದೃಢವಾಗಿ ಪಿಡಿದು, ಶಿವಾನುಭವಯೋಗದಿಂ
ಕುಂಡಲಾಗ್ನಿಯಂ ಒಲಿದೆತ್ತಲು ನಾಭಿಯಲ್ಲಿ ತನ್ನ ತೆಕ್ಕೆಯನಿಟ್ಟು ನಾಡೀ
ಕಂದದಧೋರಂಧ್ರದಲ್ಲಿ ಪಡೆಯಂ ಮಡಗಿ ಬ್ರಹ್ಮರಂಧ್ರ ಪರ್ಯಂತರ
ಪಶ್ಚಿಮದಿಂ ದೃಢವಾಗಿ ಬಂಧಿಸಿ ಪಶ್ಚಿಮವಾಯುವನು ನಿಲಿಸಿ, ಪ್ರಾಣ
ವಾಯುವನು ಭಕ್ಷಿಸಿ ಕಂಡು ಆ ಶಿವಜ್ಞಾನ ಸ್ವರೂಪವಾದಗ್ನಿಯಮೆಸೆಯಿಂದೆ

ಕುಂಡಲಿಸರ್ಪನು ಎದ್ದು ಊರ್ಧ್ವಮುಖವಾಗಿ ಉನ್ಮನಿಯಲ್ಲಿ ಉಸಿರ ಬಿಡುತ್ತಿರಲು, ಆಗ ಷಟ್‌ಚಕ್ರದ ಕಮಲಂಗಳೆಲ್ಲ ಊರ್ಧ್ವಮುಖವಾಗಿ, ಈಡಾ ಪಿಂಗಳ ಸುಷುಮ್ನ ನಾಳಂಗಳು ಕ ೩ ಸೂರ್ಯಚಂದ್ರಾಗ್ನಿ ಯೆಂಬ ಮಂಡಲತ್ರಯಂಗಳಾಗಿ ಒಪ್ಪುತ್ತಿಹವು. ಆ ಮಂಡಲತ್ರಯಂ ಗಳೇ ಅಷ್ಟದಳವಾಗಿ, ಆ ಅಷ್ಟದಳದ ಮಧ್ಯದಲ್ಲಿ ಶುದ್ಧವಿದ್ಯೆಯೆಂಬ ಸೂಕ್ಷ್ಮ ಕರ್ಣಿಕೆಯ ಚೌಪೀಠಾಗ್ರದಲ್ಲಿ ನಾದಾತ್ಮಕ ಸ್ವರೂಪವಪ್ಪ ಲಿಂಗವನು ಪ್ರತ್ಯಕ್ಷವ ಮಾಡಿಕೊಂಡು ಶಿವಯೋಗೀಶ್ವರನ ಶರೀರವೇ ಉನ್ಮನಿಯ ಸ್ವರೂಪವಾಗಿ ಒಪ್ಪುತ್ತಿರ್ದುದೆಂಬುದೀಗ. ಊರ್ಧ್ವಮುಖ ವಾದ ಅನಂತೇಶನೆಂಬ ವಾಸುಕಿಯ ಶಿರದ ಮೇಲಿಪ್ಪ ಅಷ್ಟದಳಾಬ್ಜ ಮಧ್ಯದಲ್ಲಿ ಒಪ್ಪುತ್ತಿಹ ಶುದ್ಧ ವಿದ್ಯೆಯೇ ಪೀಠವಾದ ಶಿವಲಿಂಗ ಒಂದ ರಲ್ಲಿ ದೃಢಭಕ್ತಿಯುಳ್ಳಾತನ ದೇಹವೇ ಶಿವಲಿಂಗ ದೇಹವು, ಎಂಬುದ ಕ್ಕರ್ಥ. ಆ ಉನ್ಮನಿಯ ಸ್ವರೂಪವಾದ ಶಿವಯೋಗೀಶ್ವರನ ಕಾಯವೇ ಕ್ರಿಯಾಲಿಂಗವಾಗಲು, ಅದೆಂತೆಂದೊಡೆ ಆತ ಮಾಡುವ ವ್ಯವಹಾರವೆ ಲ್ಲವೂ ಉನ್ಮನಿಯ ಸ್ವರೂಪವಾದ ಕಾರಣ ಆ ಲಿಂಗದಲ್ಲಿ ಕಾಲೋಚಿತಕ್ಕೆ ಹುಟ್ಟಿದ ದೇಹಾದಿ ಗುಣಂಗಳು, ಹಂಸಸ್ವರೂಪವನೈದಿ ಉನ್ಮನಿಯಲ್ಲಿ ಲಯವಾಗಿ, ಜೀವನ್ಮುಕ್ತಿಯ ಸುಖವು ಫಲಿಸಿ ದಗ್ಧಪಟನ್ಯಾಯ ದಿಂ ತೋರಲ್ಪಟ್ಟ ಲಿಂಗವೆಂಬುದೀಗ, ಆ ಚಿದ್ರೂಪವಾ ಪರಮಸ್ವರೂಪನ ಮೂರ್ತಿ ತಾನೇ ಇಷ್ಟಲಿಂಗವು, ಆ ಇಷ್ಟಲಿಂಗದಲ್ಲಿ ದೇಹವನಡಗಿಸಿದ ಮಹಾತ್ಮನ ಬುದ್ಧಿ ಅಹಂಕಾರ ಇಂದ್ರಿಯಾದಿ ಗುಣಂಗಳು ಜನನಾದಿ ವಿಕಾರಂಗಳು ಹೊದ್ದವಾಗಿ ಆತನು ನಿರ್ದೇಹಿ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ ಶರಣನುಪಮಾತೀತನು ಎಂಬುದಕ್ಕರ್ಥ.

ಶರಣನ ಅಂಗದಲ್ಲಿ ಮಹಾಲಿಂಗ ಹೇಗೆ ಇದ್ದಿತೆಂದೊಡೆ ಹೇಳು ತ್ತಿರ್ದಪಂ.

(೧೭) ಪ್ರಕಾಶದ್ವಾರ, ಗಂಧದ್ವಾರ, ಶಬ್ದದ್ವಾರಗಳೆಂಬಾರು ದ್ವಾರಂಗಳು ಕೂಡಿದ ಠಾವಿನಲ್ಲಿ, ನಾದ ಬಿಂದು ಕಳೆಗಳೆಂಬ ಸಿಂಹಾಸನದ ಮೇಲೆ ಮೂರ್ತಿಗೊಂಡು ಶಬ್ದ ರೂಪ ಗಂಧಂಗಳಂ ಗ್ರಹಿಸುವಾತ ನೀನಲ್ಲದೆ ಮತ್ತಾರು ಹೇಳಾ? ಜಿಹ್ವೆಯಲ್ಲಿ ನಿಂದು ಷಡ್ರಸಾನ್ನದ ರುಚಿಯನಾಸ್ವಾದಿ ಸುವಾತ ನೀನಲ್ಲದೆ ಮತ್ತಾರು ಹೇಳಾ? ಸರ್ವಾಂಗದಲ್ಲಿ ನಿಂದು ತ್ವಗಿಂದ್ರಿಯ

ಮುಖದಲ್ಲಿ ಸ್ಪರ್ಶನವ ತೊಳೆದುಕೊಂಬಾತ ನೀನಲ್ಲದೆ ಮತ್ತಾರು ಹೇಳಾ ? ಮನವೆಂಬ ಮುಖದಲ್ಲಿ ನಿಂದು ಪರಿಣಾಮುವನನುಭವಿಸುವಾತ ನೀನಲ್ಲದೆ ಮತ್ತಾರು ಹೇಳಾ ? ಸರ್ವಾವಯವಂಗಳೇ ಸರ್ವತೋ ಮುಖ ವಾಗಿ ಭೋಗಿಸುವ ಪ್ರಸಾದವಂ ಕರುಣಿದ ಕೃಪಾಮೂರ್ತಿ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ನೀನಲ್ಲದೆ ಮತ್ತಾರು ಹೇಳಾ ?

ಟೀಕು: – ಪ್ರಕಾಶದ್ವಾರ, ಗಂಧದ್ವಾರ, ಶಬ್ದದ್ವಾರಗಳೆಂಬ ಮೂರು ದ್ವಾರಂಗಳು ಕೂಡಿದ ಠಾವಾವುದೆಂದೊಡೆ ಭ್ರೂಮಧ್ಯಕ್ಕೆ ಪೆಸರು. ಅದು ಹೇಗೆಂದೊಡೆ ಆರು ದ್ವಾರಂಗಳು ತಮ್ಮ ತಮ್ಮ ಸ್ಥಾನದಲ್ಲಿ ವ್ಯವಹಾರ ಮಾಡುತ್ತಿದ್ದ ಕಾರಣ ವ್ಯವಹಾರದಲ್ಲಿ ಕೂಟವಿಲ್ಲವಾಗಿ ನಾಸಾಗ್ರವರ್ತೀ ನಯನಾಗ್ರ ವರ್ತೀ ಎಂದು ನಾಸಿಕಾಗ್ರ ನಯನಾಗ್ರಗಳಲ್ಲಿ ವರ್ತಿಸುತ್ತಿದ್ದ ಜೀವನು ಆವ ಕಾಲಕ್ಕೆ ಮಹಾಲಿಂಗದಲ್ಲಿ ಕೂಡಿಹನೋ ಆ ಕಾಲಕ್ಕೆ ಆರು ದ್ವಾರಂಗಳು ಕೂಡಿ ಯೋಗಪೀಠ, ಮಂತ್ರಪೀಠ, ಬಿಂದುಪೀಠವೆಂದುಭ್ರೂ ಮಧ್ಯವೇಹೇಳಿಕೊಳ್ಳುತಿರ್ಪುದಾಗಿ, ಅದು ರಹಸ್ಯವಾಗಿಪ್ಪುದು ಎಂಬು ದೀಗ, ಪ್ರಕಾಶದ್ವಾರ, ಗಂಧದ್ವಾರ, ಶಬ್ದದ್ವಾರಂಗಳು ಕೂಡಿದ ಠಾವಿನಲ್ಲಿ ಎಂಬುದಕ್ಕರ್ಥ. ಅಂತಪ್ಪ ಭ್ರೂಮಧ್ಯದಲ್ಲಿ ಪರನಾದ ಪರಬಿಂದು ಪರಕಳೆ ಗಳೇಕವಾಗಿ, ಬಿಂದು ಶಕ್ತಿಯು ಪೀಠಾಗ್ರದಲ್ಲಿ ಚಿನ್ನಾದ ಚಿದ್ಬಿಂದು, ಚಿತ್ಕಳೆ, ಮೂಲಚಿತ್ತು ಈ ಚತುರ್ವಿಧವೂ ಗಟ್ಟಿಗೊಂಡು ಮಹಾಲಿಂಗ ವಾಗಿ ಮೂರ್ತಿಗೊಂಡು ಆರುದ್ವಾರವೆಂಬ ಜಾಳೀಂಧ್ರದಲ್ಲಿ ರೂಪು, ಗಂಧ, ಶಬ್ದಗಳೆಂಬ ಪದಾರ್ಥವನ್ನು ಹಿಡಿದು ಜಿಹ್ವೆಯಲ್ಲಿ ನಿಂದು ಷಡುರಸಾನ್ನದ ರುಚಿಯಂ ಸ್ವೀಕರಿಸಿ ಸರ್ವಾಂಗದಲ್ಲಿ ನಿಂದು ತ್ವಗಿಂದ್ರಿಯ ಮುಖದಲ್ಲಿ ಸ್ಪರ್ಶನವ ತಳೆದು ಮನವೆಂಬ ಮುಖದಲ್ಲಿ ನಿಂದು ಪರಿ ಣಾಮವನನುಭವಿಸುವ ಕ್ರಮವೆಂತೆಂದೊಡೆ:- ಗುರುಕೃಪೆಯಿಂದೆ ಘ್ರಾಣಾ ಕ್ಷರ ನ್ಯಾಯದ ಹಾಗೆ ನಾಸಿಕನಯನ ಮಧ್ಯದಲ್ಲಿ ಸಂಚಾರವನುಳ್ಳ ಜೀವ ಹಂಸನು ಭ್ರೂಮಧ್ಯದಲ್ಲಿ ಕೂಡಿದಾಕ್ಷಣವೇ ತನ್ನ ಪೂರ್ವವಳಿದು ಮಹಾಲಿಂಗದಲ್ಲಿ ಸಮರಸವಾಗಲು, ಆ ಸಮರಸವೇ ಐಕ್ಯನೆಂದು ಹೆಸರಂ ಪಡೆದು ಚಿಚ್ಛಕ್ತಿ ಸ್ವರೂಪವಾದ ಶಿವಶರಣನ ಕರಚರಣಾದ್ಯವಯ ವಂಗಳೆಲ್ಲವಂ ಭಕ್ತರ ಮಾಡಿ ಆ ಭಕ್ತಿ ಕಾಯದಲ್ಲಿ ಸರ್ವತೋಮುಖ ವಾಗಿ ಬಂದ ಪದಾರ್ಥವೆಲ್ಲವನ್ನು ಮಹಾಲಿಂಗಕ್ಕೆ ದಿವಾರಾತ್ರೆ ಎನ್ನದೆ

ಎಲ್ಲಾ ಕಾಲದಲ್ಲಿಯೂ ತಾನೇ ಸಮರ್ಪಣವ ಮಾಡಲು ಆ ಮಹಾ ಲಿಂಗವು ಪ್ರಸನ್ನ ಪ್ರಸಾದವ ಕರುಣಿಸಿದ ಶರಣನ ಸರ್ವಾಂಗವನು ಪ್ರಸಾದಕಾಯುವ ಮಾಡಿದನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

ಮುಂದೆ ಜೀವ ಪರಮರ ಭೇದವನು ಹೇಳಿ ಆ ಜೀವ ಪರಮರ ಮಧ್ಯದಲ್ಲಿ ನೀನು ನಿನ್ನ ಪ್ರಾಣಲಿಂಗವನು ನಿನ್ನನುಭಾವವನು ನೋಡೆಂದು ಪೇಳುತ್ತಿರ್ದಪಂ.

(೧೮) ಊರ್ಧ್ವಮೂಲ ಅಧೋಶಾಖೆಯುನುಳ್ಳ ವೃಕ್ಷದ ಮೂಲದಲ್ಲಿ ಒಬ್ಬ ಯೋಗಿ ಇದ್ದಾನೆ. ಆ ಯೋಗಿಯ ಕೈಯ್ಯಲ್ಲೊಂದು ಅಮೃತಫಲವಿದೆ ನೋಡಾ. ಆ ಫಲವ ಮೆದ್ದವರೆಲ್ಲ ಅಮರರಾದುದಂ ಕಂಡು ನಾನು ಬೆರ ಗಾದೆನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಟೀಕು:— ಊರ್ಧ್ವಮೂಲ ಅಧೋಶಾಖೆಯಾದ ವೃಕ್ಷವೆಂದೊಡೆ ಅಧೋಮೂಲ ಊರ್ಧ್ವಶಾಖೆಯಾಗಿರುವದು ಸಹಜಗುಣ. ಶರೀರವೆಂಬ ವೃಕ್ಷಕ್ಕೆ ಅಧೋಮೂಲ ಊರ್ಧ್ವಶಾಖೆ ಉಂಟು. ಊರ್ಧ್ವಮೂಲ ಅಧೋ ಶಾಖೆಯುಂಟು. ಅದು ಹೇಗಯ್ಯ ಎಂದೊಡೆ ಶರೀರವೆಂಬ ವೃಕ್ಷಕ್ಕೆ ಮೂಲಾ ಹಂಕಾರವೇ ಬೇರುಗಳಾದ ಕಾರಣ ಆ ಮೂಲಾಹಂಕಾರವು ಪ್ರಾಣ ವಾಯುವಿನೊಡನೆ ಕೂಡಿ ಮನಸಪವನಗಳೆಂಬ ರೆಕ್ಕೆಗಳ ಮಾಡಿಕೊಂಡು ಷಡಾಧಾರ ಚಕ್ರಂಗಳೊಳ್ಪೈವತ್ತುದಳಂಗಳ ಮೇಲೆ ರೋಹಾರೋಹಂಗ ಳಿಂದ ತಿರುಗುತ್ತಿರ್ದ ಜೀವಹಂಸನೆಂಬುದೀಗ ಅಧೋಮೂಲ ಊರ್ಧ್ವ ಶಾಖೆ ಎನಿಸುವದು. ಶ್ರೀಗುರು ಕರುಣದಿಂದೆ ಜ್ಞಾನೋದಯವಾದ ಮಹಾ ಪುರುಷಂಗೆ ಆ ಮೂಲಾಹಂಕಾರವು ಚಿದಹಂಕಾರವೆನಿಸಿ ಸಂ, ಹಂ ಅನುಗ್ರಹಶಕ್ತಿಯಿಂದ ಭೇದಾಖ್ಯವಾದ ಜೀವ ತತ್ವ ಸ್ವರೂಪು ಅಹಮಿತಿ ನಾನು ಎಂದು ಸೋಹಂ ಎಂಬ ಪದವ ವ್ಯಕ್ತೀಕರಿಸಿ ಉಸಿರಲು ಉನ್ಮನಿಯ ನೆಯ್ದಿ ಷಟ್‌ಚಕ್ರ ಕಮಲಕರ್ಣಿಕೆಯಲ್ಲಿ ಅಚಲನಾಗಿರ್ಪುದೀಗ ಊರ್ಧ್ವ ಮೂಲ ಅಧೋಶಾಖೆಯಾದ ವೃಕ್ಷದ ಮೂಲದಲ್ಲಿ ಎಂಬುದರ್ಥ. ಉಚ್ಛ್ವಾಸ ನಿಚ್ಛ್ವಾಸವಿಲ್ಲದಂತೆ ಅಚಲನಾಗಿರ್ದ ವಿವೇಕವೇ ಜೀವಪರಮರ ಕೂಟ ವನುಳ್ಳ ಯೋಗೀಶ್ವರನು ಆ ಯೋಗಿಯ ಸುವಿಚಾರವೆಂಬ ಹಸ್ತದಲ್ಲಿ ಮಹಾಲಿಂಗವಿಹುದು ಎಂಬುದೀಗ ಒಬ್ಬ ಯೋಗಿ ಇದ್ದಾನೆ. ಆ ಯೋಗಿಯ

೪೭. ನಲ್ಲನ ಕೂಡುವನ್ನಕ್ಕ ಸುಖದ ಸುಗ್ಗಿಯನೇನೆಂದರಿಯೆ ಕೇಳಾ ಕೆಳದಿ. ಸುಖದ ಸವಿಗೆ ಸವಿಸಿ ಕೂಡಿವೆ ನೋಡವ್ವ! ತವಕಕ್ಕೆ ತವಕ ಮಿಗೆ ಮೇಲುವರಿದು ಕೂಡಿದಂತೆ ಕೂಡುವೆನುರಿಲಿಂಗದೇವನಾ.

೪೮. ನಲ್ಲನ ಕೂಡುವ ಭರದಲ್ಲಿ ಎನ್ನುವ ಇದಿರುವನೇನೆಂದರಿಯೆ. ನಲ್ಲನ ಕೂಡುವಾಗಲು ಎನ್ನುವ ನಲ್ಲನ ಏನೆಂದರಿಯೆ. ಉರಿಲಿಂಗದೇವನ ಕೂಡಿದ ಬಳಿಕ ನಾನೋ ತಾನೋ ಏನಂದರಿಯೆ.

೪೯. ಎಲೆ ಅವ್ವಾ, ಎನ್ನ ನಲ್ಲನ ಕೂಡಿದ ಕೂಟವನಿದಿರಿಂಗೆ ಹೇಳಬಾರದವ್ವಾ! ನೀವೆಲ್ಲಾ ನಿಮ್ಮ ನಲ್ಲನ ಕೂಡಿದ ಸುಖವ ಬಲ್ಲಂತೆ ಹೇಳಿ. ಉರಿಲಿಂಗದೇವ ಬಂದೆನ್ನ ಸಿರಿಯ ಸೆರಗ ಹಿಡಿಯಲೊಡನೆ ನಾನೋ ತಾನೋ ಏನೇಂದರಿಯೆನವ್ವಾ.

# ಬಾಹೂರು ಬೊಮ್ಮಯ್ಯನ ವಚನಗಳು.

## ಷಟ್‌ಸ್ಥಲಗಳು

**ವಿವರಣೆ:—** ಬಾಹೂರು ಬೊಮ್ಮಯ್ಯನು ಕೆಳಗಿನ ವಚನಗಳಲ್ಲಿ ಷಟ್‌ಸ್ಥಲಗಳ ಸ್ವರೂಪವನ್ನು ವರ್ಣಿಸಿದ್ದಾನೆ. ಮಲರಹಿತನಾದವನು ಭಕ್ತನು. ಕರ್ಮರಹಿತನಾದವನು ಮಹೇಶ್ವರನು. ಶಿವಲಿಂಗವನ್ನು ಎಲ್ಲ ಶರೀರಗಳಲ್ಲಿರಿಸಿಕೊಂಡವನು ಪ್ರಸಾದಿಯು. ಹೀಗೆ ಲಿಂಗವನ್ನಿರಿಸಿಕೊಂಡು ಅರ್ಪಣ ಮುಖದಿಂದ ಲಿಂಗಾಂಗಸಂಗಿಯಾದವನು ಪ್ರಾಣಲಿಂಗಿಯು. ಅತ್ಯಂತ ಸದ್ಗುಣಿಯಾಗಿ ಹೆರವರ ಉಪಟಳಕ್ಕೆ ಮನಗೊಡದೆ ಶಾಂತನಾಗಿರುವವನು ಶರಣನು. ಲಿಂಗದೊಳಗಿದ್ದು ಅದರಲ್ಲಿ ಹುದುಗಿದ್ದವನೇ ಐಕ್ಯನು ಎಂದು ಅವನು ಹೇಳುತ್ತಾನೆ (೧). ಭಕ್ತ ಸ್ಥಲವು ಗುರು ರೂಪು, ಎಂದರೆ ಕ್ರಿಯೆಗೆ ಕರ್ತನಾದ ಗುರುವನ್ನು ಭಕ್ತನು ಅನುವರ್ತಿಸಿ ಅವನೊಡನೆ ಬೆರೆದವನು. ಇಲ್ಲಿ ಆಚಾರಲಿಂಗದ ಪ್ರಾಬಲ್ಯವಿದೆ. ಮಹೇಶ್ವರ ಸ್ಥಲದಲ್ಲಿ ಆಚಾರಲಿಂಗದ ಶ್ರೇಷ್ಠತೆಯುಳ್ಳ ಗುರುಲಿಂಗವಿರುವದರಿಂದ ಇದು ಲಿಂಗರೂಪೆಂದು ವಚನಕಾರನ ಅಭಿಪ್ರಾಯವು. ಪ್ರಸಾದಿಸ್ಥಲದಲ್ಲಿ ಎಲ್ಲದರಲ್ಲಿ ಅರ್ಪಣಭಾವವುಳ್ಳವನಾಗಿ ಚೈತನ್ಯಾತ್ಮಕನಾಗಿ ಎಲ್ಲದರಲ್ಲಿ ವ್ಯವಹರಿಸುವದರಿಂದ ಜಂಗಮರೂಪು. ಪ್ರಾಣಲಿಂಗಿಯಲ್ಲಿ ಲಿಂಗವು ಆತ್ಮನಲ್ಲಿರುವದರಿಂದ ಆತ್ಮರೂಪು. ಶರಣನು ಜ್ಞಾನಿಯಾದುದರಿಂದ ಜ್ಞಾನರೂಪು. ಕ್ರಿಯೆಗಳಡಗಿರುವದರಿಂದ ಐಕ್ಯವು, ಇದು ನಿರ್ನಾಮರೂಪು. ಎಂದು ಬೇರೆ ವಿಧವಾಗಿಯೂ ವಚನಕಾರನು ಮುಂದಿನ ವಚನಗಳಲ್ಲಿ ಹೇಳಿದ್ದಾನೆ ( ೨ ಮತ್ತು ೩). ಈ ವಚನಕಾರನು ತನ್ನ ವಚನಗಳಲ್ಲಿ ಶ್ರದ್ಧೆ ಅಥವಾ ವಿಶ್ವಾಸಕ್ಕೆ ಬಹಳ ಮಹತ್ವ ಕೊಟ್ಟಿದ್ದಾನೆ. ಇದರ ವಿಷಯವಾಗಿ ಇಲ್ಲಿ ಅವನ ಅನೇಕ ವಚನಗಳಿವೆ. ಇವು ವಚನ ನಂ॥ ೪ ರಿಂದ ಮುಂದೆ ಇವೆ. ಈ ವಿಷಯವನ್ನು ನಾನಾ ವಿಧವಾಗಿ ಹೇಳಿದ್ದಾನೆ. (೪ ರಿಂದ ೭ ರ ವರೆಗೆ ನೋಡಿರಿ.) ೮ ನೇ ವಚನದಲ್ಲಿ ಮಿಶ್ರ ಷಟ್‌ಸ್ಥಲ

ಗಳನ್ನು ಕುರಿತು ವಿವೇಚಿಸಿದ್ದಾನೆ. ಷಟ್‌ಸ್ಥಲದಲ್ಲಿಯ ಒಂದೇ ಒಂದು ಸ್ಥಲಕ್ಕೆ ಅಂಟಿಕೊಂಡಿರದೆ ಉಳಿದ ಸ್ಥಲಗಳ ಅರಿವನ್ನೂ ಕೂಡ ಮನುಷ್ಯನು ಹೊಂದಬೇಕು. ಇದರಿಂದ ಸ್ಥಲಗಳ ಅಂತರಂಗ ಸ್ಥಿತಿಯನ್ನು ಅವನು ತಿಳಿಯುತ್ತಾನೆ ಅಂದರೆ ಅವನು ಭಕ್ತನ ಭಕ್ತ, ಮಹೇಶ್ವರನ ಮಹೇಶ ಹೀಗೆ ಬೇರೆ ಬೇರೆ ಸ್ಥಲಗಳನ್ನೈದುತ್ತಾನೆ. ಆದರೆ ಯಾವ ಸ್ಥಲದಲ್ಲಿದ್ದರೂ ಕೂಡ ಶುದ್ಧಾತ್ಮನಾಗಿ ಮನುಷ್ಯನು ವರ್ತಿಸಬೇಕು. ಅಂದರೆ ಮಾತ್ರ ಬೇರೆ ಬೇರೆ ಸ್ಥಲಗಳ ಸವಿಯು ಅವನಿಗುಂಟಾಗುತ್ತದೆ. (೯) ಈ ವರ್ತನೆಯು ಬರೀ ಭಕ್ತನಿಗೆ ಮಾತ್ರವಲ್ಲದೆ ಎಲ್ಲರಲ್ಲಿಯೂ ಇರತಕ್ಕದ್ದು. ವೀರಶೈವನಿಗೆ ಲಿಂಗಧಾರಣೆಯುಂಟು. ಹೀಗೆ ಧರಿಸಿದ ಲಿಂಗವು ಏನು ಸೂಚಿಸುತ್ತದೆ ಎಂಬುದನ್ನು ತಿಳಿದು ಅದರಲ್ಲಿಯೂ ಭಕ್ತನಿಗೆ ವಿಶ್ವಾಸವು ಬೇಕು. (೧೦) ತ್ಯಾಗಾಂಗ ಭೋಗಾಂಗಯೋಗಾಂಗಗಳಲ್ಲಿಯೂ ಕೂಡ ಲಕ್ಷಿಸಲ್ಪಟ್ಟ ವಸ್ತುವಿಗೆ ನಿಜತ್ವವು ಇದೆ ಎಂಬ ವಿಶ್ವಾಸವು. ಬೇಕು. ಇದೇ ಅಂತರಂಗದ ಶುದ್ಧಿ ಎನಿಸುವದು. (೧೧)

## ಷಟ್‌ಸ್ಥಲ ವಿವೇಚನೆ

೧ ಭಕ್ತಂಗೆ ತ್ರಿವಿಧ ಮಲ ನಾಸ್ತಿಯಾಗಿರಬೇಕು. ಮಹೇಶ್ವರಂಗೆ ಬಂದ ಜಪ ನೇಮ ಕರ್ಮಂಗಳ ಹಿಂಗಿರಬೇಕು. ಪ್ರಸಾದಿಗೆ ಆಯತ ಸ್ವಾಯತ ಸನ್ನಿಹಿತವೆಂಬ ಸಂದೇಹಕಿಕ್ಕದೆ ಸ್ವಯಸನ್ನದ್ಧನಾಗಿರಬೇಕು. ಪ್ರಾಣಲಿಂಗಿಯಾದಡೆ ಬಂದು ಸೋಂಕುವ ಸುಗುಣ ದುರ್ಗುಣ ಉಭಯವ ಸೋಂಕುವುದಕ್ಕೆ ಮುನ್ನವೇ ಹಿಡಿದುದ ಹಿಡಿದು ಬಿಡುವುದ ಬಿಟ್ಟು ಅರ್ಪಿಸಬೇಕು. ಶರಣನಾದಲ್ಲಿ ಆಗುಚಾಗೆ ಎಂಬುದನರಿಯದೆ ಸ್ತುತಿ ನಿಂದ್ಯಾದಿಗಳಿಗೆ ವೈಗೊಡದೆ, ರಾಗವಿರಾಗವೆಂಬುದಕ್ಕೆ ಮನವಿಕ್ಕದೆ, ಜಿಹ್ವೆ ಗುಹ್ಯೇಂದ್ರಿಯಕ್ಕೆ ಸಿಲುಕದೆ, ಮದಗಜದಂತೆ ಇದಿರನರಿಯದಿಪ್ಪುದು. ಐಕ್ಯನಾದಲ್ಲಿ ಸುಗಂಧದ ಸುಳುಹಿನಂತೆ ಪಳುಕಿನ ರಾಜತೇಜದಂತೆ ಮೌಕ್ತಿಕದ ಅಪ್ಪುವಿನಂತೆ ಸಮುದ್ರದೊಳಗಣ ತರಂಗದ ನಿಸ್ತರಂಗದಂತಿರ್ಪುದು. ಇಂತು ಷಟ್‌ಸ್ಥಲ ಸಂಗನಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರಲಿಂಗವನರಿದವರಿಗಲ್ಲದೆ ಸಾಧ್ಯವಲ್ಲ.

೨. ಭಕ್ತ ಸ್ಥಲ ಗುರು ರೂಪು, ಮಹೇಶ್ವರ ಸ್ಥಲ ಲಿಂಗ ರೂಪು, ಪ್ರಸಾದಿಸ್ಥಲ ಜಂಗಮ ರೂಪು, ಪ್ರಾಣಲಿಂಗಿಸ್ಥಲ ಆತ್ಮರೂಪು, ಶರಣ

ಸ್ಥಲ ಅರಿವು ರೂಪು, ಐಕ್ಯ ಸ್ಥಲ ಶಬ್ದ ಮುಗ್ಧ, ನಿರ್ನಾಮ ಭಾವ. ಇಂತೀ ಷಟ್‌ಸ್ಥಲ ಭಕ್ತಿಯ ನಂಬಿ ವಿಶ್ವಾಸವ ಕಂಡು ಸತ್ಯದಲ್ಲಿ ನಿಂದು ಬುದ್ಧಿ ಕೇವಲ, ವಿದ್ಯೆ ಕೇವಲ, ಅವಿದ್ಯೆ ಕೇವಲ ಇಂತೀ ತ್ರಿವಿಧ ಕೇವಲ ಜ್ಞಾನದಲ್ಲಿ ಸಂಚಿತ ಪ್ರಾರಬ್ಧ ಆಗಾಮಿಗಳ ಸ್ವೀಕರಿಸಿ ಸುಚಿತ್ತದಲ್ಲಿ ದಿವ್ಯ ತೇಜ ಪ್ರಕಾಶ ಕೇವಲವಪ್ಪ ಪರಂಜ್ಯೋತಿಯಲ್ಲಿ ವಿಶ್ವಾಸದಿಂದ ಪರವಶನಾಗಬೇಕು. ಸಂಗನ ಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರ ಲಿಂಗವ ಕೂಡಬೇಕು.

೩. ಆವ ಭಕ್ತಿ ಸನ್ಮಾರ್ಗದಲ್ಲಿಯಾದರೂ ಭಕ್ತಂಗೆ ಗುರುಭಕ್ತಿ, ಮಹೇಶ್ವರಂಗೆ ಲಿಂಗ ಭಕ್ತಿ, ಪ್ರಸಾದಿಗೆ ಜಂಗಮ ಭಕ್ತಿ, ಪ್ರಾಣಲಿಂಗಿಗೆ ಸರ್ವಾವಧಾನ, ಶರಣಂಗೆ ಪರಿಪೂರ್ಣತ್ವ, ಐಕ್ಯಂಗೆ ಇಂತೀ ಐದು ಗುಣಲೇಪ. ಈ ಆರೆಂಬುದ ಮೀರಿ ತೋರಿದಲ್ಲಿ ಷಟ್‌ಸ್ಥಲ ಶುದ್ಧ. ಸಂಗನ ಬಸವಣ್ಣ ಪ್ರಿಯ ಬ್ರಹ್ಮೇಶ್ವರ ಲಿಂಗದಾಟ.

## ಷಟ್‌ಸ್ಥಲಗಳಲ್ಲಿ ವಿಶ್ವಾಸ

೪. ವಿಶ್ವಾಸವಿಲ್ಲದವಂಗೆ ಭಕ್ತಸ್ಥಲವಿಲ್ಲ ಗುರುಭಕ್ತನಲ್ಲ. ವಿಶ್ವಾಸವಿಲ್ಲದವಂಗೆ ಮಹೇಶ್ವರ ಸ್ಥಲವಿಲ್ಲ ಲಿಂಗಭಕ್ತನಲ್ಲ. ವಿಶ್ವಾಸವಿಲ್ಲದವಂಗೆ ಪ್ರಸಾದಿಸ್ಥಲವಿಲ್ಲ ಜಂಗಮ ಭಕ್ತನಲ್ಲ. ವಿಶ್ವಾಸವಿಲ್ಲದವಂಗೆ ಪ್ರಾಣಲಿಂಗಿ ಸ್ಥಲವಿಲ್ಲ ಸರ್ವಾವಧಾನಿಯಲ್ಲ. ವಿಶ್ವಾಸವಿಲ್ಲದವಂಗೆ ಶರಣಸ್ಥಲವಿಲ್ಲ ಆರೂಢ ಭಾವಿಯಲ್ಲ. ವಿಶ್ವಾಸವಿಲ್ಲದವಂಗೆ ಐಕ್ಯಸ್ಥಲವಿಲ್ಲ ಸರ್ವಲೇಪನವಿಲ್ಲ. ಇಂತೀ ಷಟ್‌ಸ್ಥಲ ಸಂಬಂಧ. ಗುರುವಿನಲ್ಲಿ ಶ್ರದ್ಧೆ ಲಿಂಗದಲ್ಲಿ ಅಭಿನ್ನವಿಲ್ಲದೆ, ಜಂಗಮದಲ್ಲಿ ಮನೋಮೂರ್ತಿಯಾಗಿ ನಿಂದುದೇ ಸರ್ವಾಂಗಲಿಂಗ ಸಂಬಂಧದ ಇರವು ಸಂಗನಬಸವಣ್ಣ ಪ್ರಿಯ ಬ್ರಹ್ಮೇಶ್ವರ ಲಿಂಗದಲ್ಲಿ.

೫. ಬಾಯ ಮುಚ್ಚಿ ನಾಸಿಕದಲ್ಲಿ ಉಣಬಹುದೇ? ನಾಸಿಕವ ಮುಚ್ಚಿ ಬಾಯಲ್ಲಿ ವಾಸಿಸಬಹುದೇ ? ಕಣ್ಣ ಮುಚ್ಚಿ ಕಿವಿಯಲ್ಲಿ ಕಾಣಬಹುದೇ? ಕಿವಿಯ ಮುಚ್ಚಿ ಕಣ್ಣಲ್ಲಿ ಕೇಳಬಹುದೇ ? ಇಂತಿವಕ್ಕೆ ಆತ್ಮವೊಂದೆಂದಡೆ ತಮ್ಮ ತಮ್ಮ ಸ್ವಸ್ಥಾನಂಗಳಲ್ಲಿ ಅಲ್ಲದೆ ದೃಷ್ಟವ ಕಾಣಬಾರದು. ಆವ ಸ್ಥಲವ ನೆಮ್ಮಿದರೂ ಆ ಸ್ಥಲಕ್ಕೆ ವಿಶ್ವಾಸ ಬೇಕು. ಇದು ಸಂಗನ ಬಸವಣ್ಣನ ಭಕ್ತಿ, ಬ್ರಹ್ಮೇಶ್ವರ ಲಿಂಗವನರಿವುದಕ್ಕೆ ಇಕ್ಕಿದ ಭಿತ್ತಿ.

೬. ಆತ್ಮವೊಂದೆಂದರಲ್ಲಿ ಇಂದ್ರಿಯಗಳು ಹಲವು ತೋರಿದವು ನೋಡಾ. ವಾಯುವೊಂದೆಂದಡೆ ಒಂಭತ್ತು ಸಂದಿಸಿದವು ನೋಡಾ. ಮದವೊಂದೆಂದಡೆ ಏಳು ಸಂಭ್ರಮಿಸುತ್ತವೆ ನೋಡಾ. ಕಳೆಯೊಂದೆಂದಡೆ ಹದಿನೈದು ಹಿಂಗದಿವೆ ನೋಡಾ. ಇಂತೀ ಸ್ಥೂಲತನುವೊಂದೆಂದಡೆ ಸೂಕ್ಷ್ಮ ಕಾರಣಾಶ್ರಯ ದ್ವಂದ್ವವಾಗಿವೆ ನೋಡಾ. ಜೀವವೊಂದೆಂದಡೆ ಪರಮಾತ್ಮನೆಂದು ತ್ರಿವಿಧ ಸಂಗವಾಗಿವೆ ನೋಡಾ. ಅರಿದೆನೆಂಬಲ್ಲಿ ಹಿಂದೊಂದು ಮರವೆ, ಮರೆದೆನೆಂಬಲ್ಲಿ ಮುಂದೊಂದರಿವು. ಇಂತೀ ದಂಪತಿಸಂಗವುಳ್ಳನ್ನಕ್ಕ ಏನನಹುದೆಂಬೆ? ಏನನಲ್ಲವೆಂಬೆ? ನುಡಿದಡೆ ಸಮಯಕ್ಕೆ ದೂರ. ಸುಮ್ಮನಿದ್ದಡೆ ಸ್ವಾನುಭವಕ್ಕೆ ದೂರ. ಆರೆಂದರೂ ಎನಲಿ. ಆವ ಸ್ಥಲದಲ್ಲಿ ನಿಂದರೂ ಭಕ್ತ ಸ್ಥಲವೇ. ವಸ್ತುವ ನೆಮ್ಮುವದಕ್ಕೆ ವಿಶ್ವಾಸವಿದ್ದು ಸಂಗನಬಸವಣ್ಣನ ಕಟ್ಟು ಬ್ರಹ್ಮೇಶ್ವರ ಲಿಂಗವ ಮುಟ್ಟುವ ಗೊತ್ತು.

೭. ಭಕ್ತಂಗೆ ಮಹೇಶ್ವರ ಸ್ಥಲ, ಪ್ರಸಾದಿಗೆ ಭಕ್ತಸ್ಥಲ, ಮಹೇಶ್ವರಂಗೆ ಪ್ರಾಣಲಿಂಗಿಸ್ಥಲ, ಶರಣಂಗೆ ಪ್ರಸಾದಿಸ್ಥಲ, ಐಕ್ಯಂಗೆ ಭಕ್ತಿವಿಶ್ವಾಸವನರಿದು ಮಹೇಶ್ವರ ಪ್ರಸನ್ನತೆಯ ಕಂಡು ಪ್ರಸಾದಿಯ ಪರಿಪೂರ್ಣತ್ವವನರಿದು, ಪ್ರಾಣಲಿಂಗಿಯ ಉಭಯವ ನಿಂದುದ ಕಂಡು, ಇಂತೀ ಚತುರ್ವಿಧ ಭಾವ ಏಕವಾಗಿ ಶರಣ ಸನ್ಮತದಲ್ಲಡಗಿ ಒಡಗೂಡಿದಲ್ಲಿ ಐಕ್ಯಂಗೆ ಬೀಜ ನಾಮ ನಿರ್ಲೇಪ. ಇಂತೀ ಸ್ಥಲಭಾವ ಪಶುವಿನ ಪಿಶಿತದ ಕ್ಷೀರವ ಶಿಶುವಿನ ಒಲವರದಿಂದ ತೆಗೆವಂಗೆ ಆ ಕ್ಷೀರದ ಘೃತವ ನಾನಾ ಭೇದಂಗಳಿಂದ ವಿಭೇದಿಸಿ ಕಾಂಬಂತೆ, ಭಕ್ತಂಗೆ ವಿಶ್ವಾಸ, ಮಹೇಶ್ವರಂಗೆ ಛಲ, ಪ್ರಸಾದಿಗೆ ನಿಷ್ಠೆ, ಪ್ರಾಣಲಿಂಗಿಗೆ ಮೂರ್ತಿಧ್ಯಾನ, ಶರಣಂಗೆ ನಿಬ್ಬೆರಗು, ಐಕ್ಯಂಗೆ ಈ ಐದು ನಿರ್ಲೇಪವಾದ ನಿರ್ನಾಮ. ಇಂತೀ ಷಟ್‌ಸ್ಥಲವ ನೆಮ್ಮಿ ಕಾಂಬುದೊಂದೇ ವಿಶ್ವಾಸ. ಸಂಗನಬಸವಣ್ಣ ಪ್ರಿಯ ಬ್ರಹ್ಮೇಶ್ವರಲಿಂಗವನರಿದವರಿಗಲ್ಲದೆ ಸಾಧ್ಯವಲ್ಲ ನೋಡಾ.

೮. ಆರು ಸ್ಥಲದಲ್ಲಿ ನಿಜವಸ್ತುವ ಭೇದಿಸಿ ಕಂಡಿಹೆನೆಂದಡೆ, ಆ ಭಕ್ತನ ಭಕ್ತ. ಆ ಮಹೇಶ್ವರನ ಮಹೇಶ್ವರ. ಆ ಪ್ರಸಾದಿಯ ಪ್ರಸಾದಿ. ಆ ಪ್ರಾಣಲಿಂಗಿಯ ಪ್ರಾಣಲಿಂಗಿ. ಆ ಶರಣನ ಶರಣ. ಆ ಐಕ್ಯನ ಐಕ್ಯ. ಇಂತಿವರೊಳಗಿನಲ್ಲಿ ಮಿಶ್ರ ಭೇದಂಗಳಾಗಿ, ಸ್ಥೂಲ ನಾಮವಾಗಿ ವರ್ಣಭೇದವನಿಟ್ಟು, ಬೀಜದೊಳಗೆ ಬೇರು, ಶಾಖೆ, ಪರ್ಣ, ಅಂಕುರ, ಫಲ

# ವಚನಶಾಸ್ತ್ರಸಾರ ಗ್ರಂಥಗಳು.

( ರಾ। ಸಾ। **ಪಿ. ಜಿ. ಹಳಕಟ್ಟಿ** ಇವರಿಂದ ವಿರಚಿತವಾದವುಗಳು. )

೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ ೨—೮—

೨) ,, ,, ಉತ್ತರಾರ್ಧ ೧—೧೨—

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

೩) ವಚನಶಾಸ್ತ್ರಸಾರ ಭಾಗ ೨ ೪—೮—

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ ೨—೪—

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಅಷ್ಟಾವರಣಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರು, ಲಿಂಗ, ಜಂಗಮ ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ತೆಗೆದುಕೊಂಡ ಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ರೂಪಾಯಿಗಳ ರೆಯುವವು ಟಪಾಲಖರ್ಚು ಪ್ರತ್ಯೇಕ.

ದೊರೆಯುವ ಸ್ಥಳ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

ವಿಜಾಪುರ

---

ದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜ ಓಣಿಯಲ್ಲಿರುವ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.